# ತಾಯಿ ಸತ್ತ ಮಗಳು

## ೧

ವಿಮಲೆಯು ಆ ದೊಡ್ಡ ಮನೆಯ ಬಾಲ್ಕನಿಯಲ್ಲಿನಿಂತಿದ್ದಳು ಬೀದಿಯ ದೀಪಗಳು ಒಂದೂ ಇರಲಿಲ್ಲ. ಆಕಾಶದಲ್ಲಿ ನಕ್ಷತ್ರಗಳೂ ಕಂಡು ಬರುತ್ತಿರಲಿಲ್ಲ ಗಾಢಾಂಧಕಾರವು ತಾನೇ ತಾನಾಗಿತ್ತು. ಮಳೆಯು ಕುಂಭದ್ರೋಣವಾಗಿ ಬೀಳುತ್ತಿತ್ತು. ಆಗಾಗ ಮಿಂಚು ಮಿಂಚಿ ಪ್ರಕೃತಿಯ ಭೀಕರ ಸ್ವರೂಪವು ಕಂಡು ಬರುತ್ತಿತ್ತು. ನಡುನೆ ಎದೆ ನಡುಗುವಂತೆ ಮಾಡುವ ಸಿಡಿಲು ಶಬ್ದ ಮಾಡುತ್ತಿತ್ತು. ಮಿಂಚು ಸಿಡಿಲುಗಳಿಲ್ಲದ ಸಮಯದಲ್ಲಿ ಜೋರೋ ಎಂದು ಮಳೆಯು ಬೀಳುವ ಶಬ್ದವು ಮಾತ್ರ ಆ ಗಾಢವಾದ ಮೌನಕ್ಕೆ ಶೃತಿ ಇಡುತ್ತಿರುವಂತಿತ್ತು.

ಅವಳು ಎಷ್ಟೋ ಹೊತ್ತು ಹಾಗೆಯೇ ನಿಂತಿದ್ದಳು. ಪ್ರಕೃತಿಯು ರೊಚ್ಚಿಗೆದ್ದ ಪರಿಸ್ಥಿತಿಯು ಅವಳ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟು ಮಾಡಲಿಲ್ಲ. ಬೇರೊಂದು ಸಮಯದಲ್ಲಾಗಿದ್ದರೆ–ಪ್ರಕೃತಿಯ ಈ ಸ್ವರೂಪವು ಅವಳ ಮನಸ್ಸಿನಲ್ಲಿ ಭಯವನ್ನೋ ಅಥವಾ ಹರ್ಷವನ್ನೋ ಉಂಟು ಮಾಡುತ್ತಿತ್ತು. ಆದರೆ ಈಗ ಅದೊಂದೂ ಆಗುವುದೂ ಸಾಧ್ಯವಿರಲಿಲ್ಲ.

ಪ್ರಕೃತಿಯಂತೆಯೇ ಅವಳ ಮನಸ್ಸೂ ಆ ದಿನ ತಳಮಳಗೊಂಡಿತ್ತು. ಮಧ್ಯಾಹ್ನ ಅವಳ ತಾಯಿ ಸತ್ತುಹೋಗಿದ್ದಳು. ತಾಯಿಯ ದಹನ ಕ್ರಿಯೆ

ಗಳನ್ನು ಮುಗಿಸಿಕೊಂಡು ಮನೆಗೆ ಬರುವ ವೇಳೆಗಾಗಲೇ ಏಳು ಗಂಟೆಯಾ ಗಿತ್ತು. ಮನೆಗೆ ಬಂದ ನಂತರ ಅವಳಿಗೇನೂ ತೋರಲಿಲ್ಲ. ಮನೆಯಲ್ಲಿ ಎಲ್ಲಿದ್ದರೂ ಮನಸ್ಸು ಬೇಡವೆನಿಸುತ್ತಿತ್ತು. ಅದರಿಂದ ಎಲ್ಲಿರುವುದಕ್ಕೂ ಸರಿಹೋಗದೇ ಏನು ಮಾಡುವುದಕ್ಕೂ ತೋರದೇ ಹೊರಗಡೆ ಬಾಲ್ಕನಿಯಲ್ಲಿ ಬಂದು ನಿಂತುಕೊಂಡಳು.

ಹಾಗೆ ನಿಂತಿದ್ದರೂ ಅವಳ ಮನಸ್ಸಿನಲ್ಲಿ ಯೋಚನೆಗಳಿಲ್ಲದೇ ಇರಲಿಲ್ಲ. ಒಂದರ ಮೇಲೆ ಒಂದರಂತೆ ನೂರಾರು ಆಲೋಚನೆಗಳು ಬರುತ್ತಿದ್ದವು. ಎಲ್ಲದಕ್ಕಿಂತಲೂ ಹೆಚ್ಚಾಗಿ ಮುಂದೆ ತಾನೇನು ಮಾಡಬೇಕೆಂಬ ಆಲೋಚ ನೆಯೇ ಅವಳಿಗೆ ಹೆಚ್ಚಾಗಿದ್ದಿತು. ಆದರೆ ಅದನ್ನು ಇತ್ಯರ್ಥ ಮಾಡಲು ಹೆಚ್ಚು ಆಲೋಚನೆಯು ಬೇಕಾಗಿರಲಿಲ್ಲ. ತಾಯಿಯು ಬದುಕಿದ್ದಾಗ ಮನೆಯು ಹೇಗೆ ನಡೆಯುತ್ತಿದ್ದಿತೋ ಹಾಗೆ ನಡೆದುಕೊಂಡು ಹೋಗಲು ಏನೇನು ಬೇಕೋ ಅದೆಲ್ಲವನ್ನೂ ಮಾಡಬೇಕು.

ಮನೆಯಲ್ಲಿ ಮುದಿ ಸೋದರತ್ತೆಯೊಬ್ಬಳಿದ್ದಳು. ಆಕೆಗೆ ಅರವತ್ತು ವರ್ಷವಾಗಿದ್ದಿತು. ಆಕೆಯೇ ಮನೆಗೆ ಹಿರಿಯಳು. ಆದರೆ ಯಾವುದಕ್ಕೂ ಆಕೆಯನ್ನು ಅವಲಂಬಿಸುವಂತಿರಲಿಲ್ಲ. ಅವಳು ರೋಗಿಷ್ಟೆ. ಅದರ ಮೇಲೆ ಅವಳ ಬುದ್ಧಿಯು ಸಹ ಸರಿಯಾಗಿರಲಿಲ್ಲ.

ಸೋದರತ್ತೆಯು ಹೀಗಾದುದು ಒಂದು ಕತೆ. ಸೋದರತ್ತೆ ಎಂದರೆ ಅವಳು ವಿಮಲೆಯ ತಂದೆಯ ಅಕ್ಕ. ಆಕೆಯ ಗಂಡನು ಬಾಲ್ಯದಲ್ಲಿಯೇ ಸತ್ತುಹೋಗಿದ್ದನು. ಅಂದಿನಿಂದ ಸಾವಿತ್ರಮ್ಮ ತಮ್ಮನ ಮನೆಯಲ್ಲಿಯೇ ಇದ್ದಳು. ವಿಮಲೆಗೆ ಹತ್ತು ವರ್ಷವಾಗಿದ್ದಾಗ–ಎಂದರೆ ಸುಮಾರು ಹತ್ತು ವರ್ಷಗಳ ಹಿಂದೆ ಸಾವಿತ್ರಮ್ಮನವರೂ ವಿಮಲೆಯ ತಂದೆ ನಾರಾಯಣ ರಾಯರೂ ಎಲ್ಲಿಯೋ ಕಾರಿನಲ್ಲಿ ಹೋಗಿದ್ದರು. ನಾರಾಯಣ ರಾಯರೇ ಕಾರು ನಡೆಸುತ್ತಿದ್ದರು. ಹೇಗಾಯಿತೋ ಅಂತೂ ಕಾರು ಮರಕ್ಕೆ ಡಿಕ್ಕಿ ಹೊಡೆದು ಕೊರಕಲಿನಲ್ಲಿ ಬಿದ್ದಿತು. ನಾರಾಯಣರಾಯರೂ ಅವರ ಮಿತ್ರ ರಾದ ಅಡ್ವೋಕೇಟರೊಬ್ಬರೂ ಸ್ಥಳದಲ್ಲಿಯೇ ಮೃತರಾದರು. ಸಾವಿತ್ರ ಮ್ಮನವರು ಮೂರ್ಛೆ ಬಿದ್ದರು. ಅವರನ್ನು ಆಸ್ಪತ್ರೆಗೆ ಕರತರಲಾಯಿತು. ಅವರಿಗೆ ಜ್ಞಾನವು ಬರಬೇಕಾದರೆ ಮೂರು ದಿನಗಳಾದವು. ಜ್ಞಾನವು

ಬಂದರೆ ತಾನೇ ಏನು? ಅವರು ಹುಚ್ಚು ಹುಚ್ಚಾಗಿ ಮಾತನಾಡಲಾರಂಭಿಸಿದರು. ಅವರಿಗೆ ಈ ಪ್ರಪಂಚದ ನೆನಪೇ ಇಲ್ಲದೇ ಯಾವುದೋ ಪ್ರಪಂಚದಲ್ಲಿ ಅಲೆಯುತ್ತಿದ್ದಂತೆ ಇದ್ದಿತು. ಹೇಗೂ ಅವರಿಗಾಗಿದ್ದ ಗಾಯಗಳು ಗುಣವಾಗಲು ಎರಡು ತಿಂಗಳುಗಳ ಕಾಲ ಬೇಕಾಯಿತು. ಅಲ್ಲಿಯವರೆವಿಗೆ ಅವರು ಆಸ್ಪತ್ರೆಯಲ್ಲಿಯೇ ಇದ್ದರು. ಗಾಯಗಳು ಆರುತ್ತಿದ್ದಂತೆಯೇ ಅವರ ಮನಸ್ಸಿನ ಮೇಲಾಗಿದ್ದ ಘಾತವೂ ಸಹ ಆರಿಹೋಗಿದ್ದಿತು. ಮನೆಯವರನ್ನೂ ಬಂಧು ಮಿತ್ರರನ್ನೂ ಗುರ್ತಿಸಬಲ್ಲರಾದರು. ತಮಗೆ ಬೇಕಾದುದನ್ನೂ ಬೇಡವಾದುದನ್ನೂ ತಿಳಿಸಬಲ್ಲವರಾದರು. ಆದರೆ ಅವರು ಎಂದೂ ಪೂರ್ಣವಾಗಿ ಸರಿಹೋಗಲೇ ಇಲ್ಲ ಇಂದೂ ಸಹ ಅವರಿಗೆ ಮೋಟಾರು ರೈಲುಗಳೆಂದರೆ ಬಹಳ ಭಯ. ಆ ದುರ್ಘಟನೆಯು ನಡೆದ ನಂತರ ಇಂದಿನವರೆವಿಗೆ ಅವರು ರೈಲು ಮೋಟಾರುಗಳನ್ನು ಹತ್ತಿರಲಿಲ್ಲ. ಅವುಗಳ ಹೆಸರು ಹೇಳಿದರೆ ಅವುಗಳು ಭೂತ ಪಿಶಾಚಿಗಳೋ ಎಂಬಂತೆ ಭಯ ಪಡುತ್ತಿದ್ದರು. ಯಾವ ಸುಖ ದುಃಖಗಳಿಂದಲೂ ಅವರ ಮನಸ್ಸಿನ ಮೇಲೆ ಪರಿಣಾಮವಾಗುತ್ತಿರಲಿಲ್ಲ. ಇಂದು ತಮ್ಮ ಸಾದಿಸಿಯು ಸತ್ತರೂ ಸಹ ಅವರು ಹೆಚ್ಚು ಕಳವಳಗೊಂಡಿರಲಿಲ್ಲ. ಆದರೆ ತಮ್ಮ ಸಾದಿನಿಯು ಸತ್ತಿದ್ದಾಳೆಂದು ಅವರಿಗೆ ಗೊತ್ತಿತ್ತು. ಅವಳಿಗಾಗಿ ಅವರೂ ಎರಡು ಹನಿ ಕಣ್ಣೀರಿಟ್ಟಿದ್ದರು.

ಇನ್ನು ಮನೆಯಲ್ಲಿದ್ದವರು ಅವಳ ದೊಡ್ಡ ಅಣ್ಣ ಶಂಕರ. ಇಬ್ಬರು ತಂಗಿಯರು, ದೊಡ್ಡವಳು ವರದ, ಸಣ್ಣವಳು ಶೀಲ. ತಮ್ಮ ವಾಸು.

ಶಂಕರನು ಅವಳಿಗಿಂತ ಸುಮಾರು ಒಂದೂವರೆ ವರ್ಷ ದೊಡ್ಡವನು. ಅವನು ಜೂನಿಯರ್ ಬಿ. ಎನಲ್ಲಿ ಓದುತ್ತಾ ಇದ್ದನು. ವರದಳಿಗ ಹದಿನಾರು ವರ್ಷ. ಶೀಲಳು ಅವಳಿಗಿಂತ ಎರಡು ವರ್ಷ ಸಣ್ಣವಳು. ಅವರಿಬ್ಬರೂ ಹೈಸ್ಕೂಲಿನಲ್ಲಿ ಓದುತ್ತಿದ್ದರು. ಕಡೆಯ ತಮ್ಮ ವಾಸುವಿಗೆ ಹತ್ತು ವರ್ಷವೋ ಏನೋ! ತಂದೆ ಸತ್ತಾಗ ಅವನು ತಾಯಿಯ ಹೊಟ್ಟೆಯಲ್ಲಿದ್ದನು. ಈಗವನು ಮಿಡಲ್ ಸ್ಕೂಲಿನಲ್ಲಿ ಓದುತ್ತಿದ್ದಾನೆ.

ಹೀಗೆ ಮನೆಯ ಜವಾಬ್ದಾರಿ ಎಲ್ಲವೂ ವಿಮಲೆಯ ಮೇಲೆಯೇ ಇದ್ದಿತು. ಹಿರಿಯಳಾದ ಅದನ್ನು ಅವಳು ಒಪ್ಪಿಕೊಳ್ಳಬೇಕಾಗಿಯೂ ಇತ್ತು.

ಅವಳು ಅದಕ್ಕೆ ತಯಾರಾಗಿಯೂ ಇದ್ದಳು. ಆದರೆ ಅದನ್ನು ನಿರ್ವಹಿಸು ವುದೆಂತು? ಎಲ್ಲರೂ ತಾಯಿಯ ಮಾತು ಕೇಳುತ್ತಿದ್ದರು. ಆದರೆ ತನ್ನ ಮಾತು ಕೇಳುವರೇ? ಸಾವಿತ್ರಮ್ಮನವರು ರೋಗಿಷ್ಟರು. ಬುದ್ಧಿಯೂ ಸರಿ ಸರಿಯಾಗಿಲ್ಲ. ಅವರು ಯಾರ ಮಾತೂ ಕೇಳುವಂತಿಲ್ಲ. ಅವರಿಗೆ ಯಾರು ಏನು ಹೇಳಿದರೂ ಅರ್ಥವೇ ಆಗುವುದಿಲ್ಲ. ಇಷ್ಟಕ್ಕೂ ಅವರು ತಾನು ಹೇಳಿದಂತೆ ಕೇಳಬೇಕೆಂದು ಅಪೇಕ್ಷಿಸುವ ಸಂದರ್ಭವಾದರೂ ಏನಿದೆ?

ಅಮ್ಮ ಬದುಕಿದ್ದಾಗ ಶಂಕರ ಅವರ ಮಾತು ಸಹ ಕೇಳುತ್ತಿರಲಿಲ್ಲ. ಸ್ವತಂತ್ರ ಮನೋಭಾವವನದು. ತೋರಿದ ಹಾಗೆ ನಡೆಯುತ್ತಿದ್ದ. ಅವನು ಮುಂದೆ ಓದುತ್ತಾನೆಯೋ ಇಲ್ಲವೋ ಹೇಳುವಂತಿಲ್ಲ. ಮೊದಲಿನಿಂದ ಅವನು ಬಿ. ಎಲ್. ಮಾಡಬೇಕೆಂದು ಮನೆಯಲ್ಲಿ ಮಾತುಕತೆಗಳು ನಡೆಯುತ್ತಿ ದ್ದವು. ಅವನು ಅದನ್ನೇ ಮುಂದುವರಿಸಲಿ--ಎಂದು ಅವಳ ಇಷ್ಟ? ಶಂಕ ರನಿಗೆ ಅವಳು ಆದನ್ನು ಸೂಚಿಸಬಹುದೇ ವಿನಾ ಅವನನ್ನು ಬಲಾತ್ಕಾರ ಮಾಡಲಾಗುತ್ತದೆಯೆ? ವಯಸ್ಸಾದವನವನು.

ವರದಾ ಒಂದು ವಿಚಿತ್ರ. ಅವಳ ನಡೆ, ನುಡಿ, ಮನೋಭಾವಗಳೇ ಒಂದು ರೀತಿ. ವಯಸ್ಸಾದರೂ ವಿಪರೀತ ಚೇಷ್ಟೆ ಮಾಡುತ್ತಾಳೆ. ಗಲಾಟೆ ಮಾಡುತ್ತಾಳೆ. ಮಕ್ಕಳಂತೆ ಹಠ ಹಿಡಿಯುತ್ತಾಳೆ. ಅದೊಂದೂ ಇಲ್ಲದಿದ್ದರೆ ಯಾವುದಾದರೂ ಬಣ್ಣದ ಚಿತ್ರ ಬರೆಯುತ್ತಾ ಅಂತರ್ಮುಖಿ ಯಂತೆ ದಿನಗಳು ವಾರಗಳು ಕುಳಿತು ಬಿಡುತ್ತಾಳೆ.

ಲೀಲೆಯು ಒಳ್ಳೆಯ ಹುಡುಗಿ. ಸಣ್ಣವಳಾದರೂ ಕಷ್ಟಸುಖಗಳನ್ನು ಅರ್ಥ ಮಾಡಿಕೊಳ್ಳಬಲ್ಲಳು. ಹೇಳಿದ ಮಾತು ಕೇಳುತ್ತಾಳೆ. ಅವಳಿಂದ ಸಹಾಯವೇ ಹೊರತು ಅಡ್ಡಿ ಆತಂಕಗಳಿಲ್ಲ.

ವಾಸುವು ಪುಟ್ಟ ತುಂಟ ಹುಡುಗ.

ಮೂರು ನಾಲ್ಕು ಮಂದಿ ಆಳುಕಾಳುಗಳಿದ್ದಾರೆ. ಅಡಿಗೆಯಾಕೆ ಗೌರಮ್ಮ ಇದ್ದಾರೆ.

ವಿಮಲೆಯ ತಾಯಿಯು ಈ ದಿನ ಮಧ್ಯಾಹ್ನ ಮರಣ ಹೊಂದಿದ್ದರೂ ಎರಡು ಮೂರು ವರ್ಷಗಳಿಂದ ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದರು. ಆದರೂ ಸಂಸಾರವು ನಿರಾತಂಕವಾಗಿ ನಡೆಯುತ್ತಿದ್ದಿತು. ಒಂದು ದಿನವೂ

ಯಾರಿಗೂ ಯಾವುದಕ್ಕೂ ಕೊರತೆಯಾಗಿರಲಿಲ್ಲ. ಹೀಗೆಯೇ ಇನ್ನು ಮುಂದೆ ನಡೆಯುವುದೇ ಎಂಬ ಆಲೋಚನೆಯು ಸಹ ವಿಮಲೆಗೆ ಬಂದಿತು. ಅವಳ ತಾಯಿ ಬದುಕಿರುವವರೆವಿಗೆ ಮಕ್ಕಳಾರೊಂದಿಗೂ ಹಣಕಾಸಿನ ಸ್ಥಿತಿಗತಿಗಳನ್ನು ಕುರಿತು ಮಾತನಾಡಿರಲಿಲ್ಲ. ಆದರೂ ಅರೆಕ್ಷಣ ಕೂಡ ಹಣದ ಕೊರತೆಯಿಂದ ಸಂಸಾರ ನಡೆಯಲು ಕಷ್ಟವಾಗುತ್ತದೆಂದು ಊಹಿಸುವುದಕ್ಕೆ ಅವಕಾಶವಿರಲಿಲ್ಲ. ಇದುವರೆವಿಗೆ ಅಮ್ಮನು ಮಕ್ಕಳಲ್ಲಿ ಒಬ್ಬರಿಗೊಬ್ಬರಿಗೆ ಮನಸ್ತಾಪಗಳಾಗದಂತೆ-ನೋಡಿಕೊಳ್ಳುತ್ತಿದ್ದಳು. ಯಾರಿಗೇನು ಬೇಕೋ ಅದರ ಔಚಿತ್ಯವನ್ನರಿತು ಒದಗಿಸುತ್ತಿದ್ದರು. ರೋಗಿಷ್ಟೆಯಾಗಿ ಹಾಸಿಗೆಯ ಮೇಲೆ ಮಲಗಿದ್ದರೂ ಬಂದವರೊಡನೆ ನಗುತ್ತಾ ಪ್ರಿಯಸಂಭಾಷಣೆಯನ್ನು ಮಾಡುತ್ತಿದ್ದರು. ಯಾರಿಗೇನು ಬೇಕಾದರೂ ಅವರು ಅಮ್ಮನ ಕಡೆಗೆ ನೋಡುವುದು ಆ ದೊಡ್ಡ ಮನೆಯಲ್ಲಿ ಅಭ್ಯಾಸವಾಗಿದ್ದಿತು. ಆ ಅಮ್ಮನು ಹೊರಟು ಹೋದುದು ನಿಜವಾಗಿಯೂ ಒಂದು ಕೊರತೆಯೇ ಆಗಿದ್ದಿತು. ಆ ಕೊರತೆಯನ್ನು ಆದಷ್ಟುಮಟ್ಟಿಗೆ ನೀಗಲು ತನ್ನ ಕೈಲಾದಷ್ಟು ಪ್ರಯತ್ನ ಮಾಡಬೇಕೆಂದು ವಿಮಲೆಯು ನಿರ್ಧರಿಸಿಕೊಳ್ಳುತ್ತಿದ್ದಳು.

ತನ್ನ ಸ್ವಂತ ವಿಷಯವೂ ಅವಳ ಆಲೋಚನೆಯಲ್ಲಿ ಬರದಿರಲಿಲ್ಲ. ಅವಳು ಕಾಲೇಜಿಗೆ ಹೋಗುತ್ತಿದ್ದಳು ಇನ್ನು ಮುಂದೆ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸುವುದೇ ಇಲ್ಲವೆ? ಇಷ್ಟು ಬೇಗ ಇಲ್ಲಿ ನಿಂತುಕೊಂಡೇ ಆ ವಿಷಯವನ್ನು ಇತ್ಯರ್ಥ ಮಾಡುವಂತಿರಲಿಲ್ಲ. ಪರಿಸ್ಥಿತಿಗಳು ಹೇಗೆ ಒದಗಿ ಬರುತ್ತವೆಯೋ ಅದರ ಮೇಲೆ ಆ ವಿಷಯ ಇತ್ಯರ್ಥವಾಗಬೇಕಾಗಿತ್ತು.

ಆ ಗಾಢಾಂಧಕಾರದಲ್ಲಿ ಆ ಪ್ರಚಂಡವಾದ ಮಳೆಯಲ್ಲಿ ಅನತಿ ದೂರದಲ್ಲಿ ಒಂದು ಉನ್ನತವಾದ ಮನೆಯ ದೀಪಗಳು ಕಂಡು ಬಂದುವು. ಮಳೆ ಮತ್ತು ಗಾಳಿಗಳು ಆ ಕಿಟಕಿಗಳೊಳಗೆ ಬೆಳಗುತ್ತಿದ್ದ ವಿದ್ಯುದ್ದೀಪಗಳ ಮೇಲೆ ಪ್ರತ್ಯಕ್ಷವಾದ ಪರಿಣಾಮವನ್ನುಂಟು ಮಾಡಿರಲಿಲ್ಲ. ಆದರೂ ಅವುಗಳು ಎಂದಿಗಿಂತ ಮಂಕಾಗಿ ಕಂಡು ಬರುತ್ತಿದ್ದವು. ಆ ದೀಪಗಳನ್ನು ನೋಡಿದ ಕೂಡಲೇ ಅವಳಿಗೆ ಪ್ರಕಾಶನ ನೆನಪು ಬಂದಿತು. ದೀಪಗಳು ಕಂಡು ಬರುತ್ತಿದ್ದುದು ವೆಂಕಟರಾಮಯ್ಯನವರ ಮನೆಯಿಂದ. ಪ್ರಕಾಶನು ಅವರ

ಮಗ. ಅವನಿಗೆ ಇಪ್ಪತ್ತನಾಲ್ಕು ಇಪ್ಪತ್ತೈದು ವರ್ಷಗಳಿರಬಹುದು. ಪ್ರತಿ ದಿನ ಸಾಯಂಕಾಲ ಅವನು ವಿಮಲೆಯ ಮನೆಗೆ ಬರುತ್ತಿದ್ದನು. ಅಥವಾ ವಿಮಲೆಯೇ ಅಲ್ಲಿಗೆ ಹೋಗುತ್ತಿದ್ದಳು. ಒಂದೊಂದು ದಿನ ಶಂಕರನೂ ಬರುತ್ತಿದ್ದನು. ಎಲ್ಲರೂ ಸೇರಿ ವಾಕಿಂಗ್ ಹೋಗುತ್ತಿದ್ದರು. ಸೇರಿ ಮಾತನಾಡುತ್ತಿದ್ದರು. ಅಥವಾ ಮತ್ತಾರನ್ನಾದರೂ ಸೇರಿಸಿಕೊಂಡು ಟೆನ್ನಿಸ್ ಆಡುತ್ತಿದ್ದರು. ಸಾಧಾರಣವಾಗಿ ಟೆನ್ನಿಸ್ ಆಡುತ್ತಾ ಸಂಜೆಗಳನ್ನು ಕಳೆದುದೇ ಹೆಚ್ಚು. ಈಗ ಮೂರು ತಿಂಗಳಿಂದ ವಿಮಲೆಯೂ ಅವಳ ಮನೆಯುವರೂ ಟೆನ್ನಿಸ್ ಆಡಬೇಕೆಂದು ತೋರಿದರೆ ತಮ್ಮ ಮನೆಯ ಕೋರ್ಟಿನಲ್ಲೇ ಆಡಿಕೊಳ್ಳುತ್ತಾರೆ. ಶೀಲೆಯು ತನ್ನ ಸಮವಯಸ್ಕಳಾದ ಪ್ರಕಾಶನ ತಂಗಿ ಶ್ಯಾಮಲೆಯೊಂದಿಗೆ ಹೋಗುತ್ತಾಳೆ. ಪ್ರಕಾಶನು ಓದುವುದಕ್ಕೆಂದು ಮದರಾಸಿಗೆ ಹೋಗಿ ಮೂರು ತಿಂಗಳಾಗಿತ್ತು. ಪ್ರಕಾಶನನ್ನು ನೋಡಿದಾಗಲೆಲ್ಲಾ, ಪ್ರಕಾಶನ ನೆನಪು ಬಂದಾಗಲೆಲ್ಲಾ ವಿಮಲೆಗೆ ಅವನನ್ನು ಪ್ರೇಮ ಮಾಡುತ್ತಿದ್ದೇನೆಂದು ತೋರುತ್ತಿತ್ತು. ಅವನ ಹಾವಭಾವಗಳನ್ನು ಜ್ಞಾಪಕ ಮಾಡಿಕೊಂಡರೆ ಅವನೂ ತನ್ನನ್ನು ಪ್ರೇಮ ಮಾಡುತ್ತಿದ್ದನೇನೋ ಎಂದು ಅವಳಿಗೆ ಭಾಸವಾಗುವುದು.

ಆದರೆ ಈಗ ಆ ವಿಷಯವನ್ನು ಯೋಚಿಸುವ ಸಮಯವಾಗಿರಲಿಲ್ಲ. ಇದರ ಮೇಲೆ ಅವಳ ಮನಸ್ಸಿನಲ್ಲಿ ಪ್ರಕಾಶನ ವಿಷಯಕವಾದ ಪ್ರೇಮವು ಪ್ರಗಾಢವಾಗಿಯೂ ಇರಲಿಲ್ಲ. ಶರತ್ಕಾಲದಲ್ಲಿ ಎಲ್ಲಿಯೋ ಬಂದು ಮಾಯವಾಗುವ ತೆಳುವಾದ ಮೋಡದಂತೆ ಆ ಆಲೋಚನೆಯು ಅವಳಿಗೆ ಬಂದು ಹೋಗುತ್ತಿತ್ತು.

ವಿಮಲೆಯು ಹಾಗೆಯೇ ಅಲ್ಲಿ ನಿಂತಿದ್ದಳು. ಮಳೆಯ ಸತತವಾದ ಶಬ್ದದಂತೆಯೇ ವಿವಿಧವಾದ ಆಲೋಚನೆಗಳು ಅವಳ ಮನಸ್ಸಿನಲ್ಲಿ ಗುಯಗುಟ್ಟುತ್ತಿದ್ದವು.

ಅವಳ ಸೋದರತ್ತೆ ಸಾವಿತ್ರಮ್ಮನವರು ಒಳಗಿನಿಂದ "ವಿಮಲಾ. ಅಲ್ಲೇನು ಮಾಡುತ್ತಿದ್ದೀಯೆ? ಒಳಗೆ ಬಾ. ಹೊತ್ತಾಯಿತು. ಇನ್ನಾದರೂ ಊಟ ಮಾಡೋಣ" ಎಂದು ಕರೆದರು.

ಅವರ ಆ ಕರೆಯು ಅವಳಿಗೆ ಕೇಳಿಸಿತೋ ಇಲ್ಲವೋ ಹೇಳಲಾಗುವುದಿಲ್ಲ. ಅವರು ಪುನಃ ಕರೆದಾಗ ಅವಳಿಗೆ ಕೇಳಿಸಿತು.

ವಿಮಲೆಯು ಮತ್ತೊಂದು ಬಾರಿ ಮಳೆಯು ಸುರಿಯುತ್ತಿದ್ದ ಗಾಢಾಂಧಕಾರದ ಕಡೆಗೆ ನೋಡಿ ಹಿಂತಿರುಗಿದಳು. ಸುಸಜ್ಜಿತವಾದ ದೀಪದಿಂದ ಪ್ರಕಾಶಿತವಾದ ವಿಶಾಲವಾದ ಕೋಣೆಯು ಅರ್ಧಂಬರ್ಧವಾಗಿ ಗೋಚರಿಸುತ್ತಿತ್ತು. ಅದು ಪೂರ್ಣವಾಗಿ ಕಂಡು ಬರಲು ಬಾಗಿಲಿಗೆ ಕಟ್ಟಿದ್ದ ಸ್ಪನ್ ಸಿಲ್ಕಿನ ಎತ್ತಿ ಕಟ್ಟಿದ್ದ ದಪ್ಪವಾದ ಪರದೆಯು ಮರೆಯಾಗಿತ್ತು.

ಮಳೆ ನೀರಿನ ತುಂತುರುಗಳಿಂದ ನೆನೆದೂ ನೆನೆಯದ ಹಾಗಿದ್ದ ಪರದೆಯನ್ನು ದಾಟಿ ವಿಮಲೆಯು ಆ ಕೋಣೆಯನ್ನು ಪ್ರವೇಶ ಮಾಡಿದಳು.

ಸಾವಿತ್ರಮ್ಮನವರು ಒಂದು ಸೋಫಾದ ಮೇಲೆ ಕುಳಿತಿದ್ದರು. ವರದಾ ತಲೆ ಕೆದರಿಕೊಂಡು ಕುಳಿತು ಗೋಡೆಯ ಮೇಲಿದ್ದ ಯಾವುದೋ ಚಿತ್ರವನ್ನು ನೋಡುತ್ತಿದ್ದಳು. ಶೀಲಾ ಶಂಕರರು ಪುಸ್ತಕಗಳನ್ನು ನೋಡುತ್ತಿದ್ದರು. ವಾಸುವು ಅಲ್ಲಿರಲಿಲ್ಲ. ಕೆಳಗಡೆ ಎಲ್ಲಿಯೋ ಇದ್ದನು.

ವಿಮಲೆಯು ಸಾವಿತ್ರಮ್ಮನವರ ಬಳಿಗೆ ಬಂದು "ಹಾಗಾದರೆ ಏಳಿ, ಊಟ ಮಾಡೋಣ" ಎಂದು ಅವರನ್ನು ಎಬ್ಬಿಸಲು ಹೋದಳು.

ಅಷ್ಟರಲ್ಲಿ ಶೀಲಾ "ಅಡಿಗೇ ಮನೆಗೆ ಹೋಗಿ ನೋಡಿಕೊಂಡು ಬರುತ್ತೇನೆ" ಎಂದು ಹೇಳಿ ಮಹಡಿಯಿಂದ ಕೆಳಗೆ ಹೋದಳು.

ಅವಳು ವಾಪಸ್ಸು ಬರುವವರೆವಿಗೆ ಎಲ್ಲರೂ ಅಲ್ಲಿಯೇ ಇದ್ದರು. ಅವಳು ಬಂದ ನಂತರ ಊಟಕ್ಕೆ ಕೆಳಗಿಳಿದು ಹೋದರು. ಸಾವಿತ್ರಮ್ಮನವರನ್ನು ವಿಮಲೆಯೇ ಕೈ ಹಿಡಿದುಕೊಂಡು ಮೆಟ್ಟಿಲುಗಳನ್ನು ಇಳಿಸಿದಳು.

ಕೆಳಗೆ ನಡುಮನೆಯಲ್ಲಿ ಎಲ್ಲರಿಗೂ ಬೆಳ್ಳಿಯ ತಟ್ಟೆಗಳನ್ನು ಹಾಕಲಾಗಿತ್ತು. ಬಂದು ಕುಳಿತು ಊಟವನ್ನು ಆರಂಭಿಸಿದರು.

ಸ್ವಲ್ಪ ಹೊತ್ತಿನವರೆವಿಗೆ ಯಾರೂ ಮಾತನಾಡಲಿಲ್ಲ. ವಿಮಲೆಯು "ಶಂಕರ! ನೀನೇನು ಮಾಡುತ್ತೀಯೆ? ಮುಂದೆ ಈ ವರ್ಷ ಓದುತ್ತೀಯಾ? ಅಥವಾ ಮುಂದಿನ ವರ್ಷದವರೆವಿಗೆ ಸುಮ್ಮನಿರುತ್ತೀಯಾ?'' ಎಂದು ಕೇಳಿದಳು.

ಗಳಿಗೆಯ ಹೊತ್ತು ಶಂಕರನು ಮಾತನಾಡಲಿಲ್ಲ. ಅನಂತರ "ಈಗಲೇ ಏನು ಹೇಳುವುದು? ನೋಡೋಣ" ಎಂದುತ್ತರವಿತ್ತನು.

ವಾಸುವು "ಏನಕ್ಕ. ನಾವೇನು ಸ್ಕೂಲಿಗೆ ಹೋಗುವುದೋ ಬೇಡವೋ?" ಎಂದು ಕೇಳಿದನು. ಆ ಮಾತಿನಲ್ಲಿ ಅವನೂ ಅವನಕ್ಕಂದಿರೂ ಶಾಲೆಗೆ ಹೋಗಬೇಕಾಗಿಲ್ಲವೆಂಬ ಭಾವವಿತ್ತು.

ವಿಮಲೆಯು "ನೀವು ಸ್ಕೂಲಿಗೆ ಹೋಗಬೇಕು. ಈಗ ಬೇಡ. ದಿನ ವಾರಗ ಾದ ನಂತರ ಹೋಗಿರಿ'' ಎಂದಳು.

ಅನಂತರ ಯಾರೂ ಮಾತನಾಡಲಿಲ್ಲ. ಊಟಗಳನ್ನು ಮುಗಿಸಿ ಹಜಾರದಲ್ಲಿ ಬಂದು ಸೋಫಾಗಳ ಮೇಲೆ ಕುಳಿತುಕೊಂಡರು.

ಇವರು ಕುಳಿತುಕೊಂಡ ನಂತರ ಆಳು ಹಜಾರದ ಕಡೆಯಿಂದ ಬೀದಿ ಕಡೆಗೆ ಹಾದು ಹೋದ.

ವಿಮಲೆಯು ಅವನನ್ನು ಕುರಿತು "ಕೆಂಚ. ಬಾಗಿಲುಗಳೆಲ್ಲವೂ ಹಾಕಿ ದೆಯೋ ಇಲ್ಲವೋ ನೋಡು. ಹಾಕದಿದ್ದರೆ ಸರಿಯಾಗಿ ಹಾಕು" ಎಂದಳು.

ಕೆಂಚನು ಅವಳ ಆಜ್ಞೆಯನ್ನು ಶಿರಸಾ ವಹಿಸುವವನಂತೆ ಹೊರಗೆ ಹೋದನು.

ಹೊರಗಡೆ ಮಳೆಯು ಬೀಳುತ್ತಲೇ ಇದ್ದಿತು.

ಸಾವಿತ್ರಮ್ಮನು ಶಂಕರನನ್ನು ಕುರಿತು "ಮಗೂ—ಮಳೆ ಎಷ್ಟು ಹೊತ್ತಿಗೆ ಆರಂಭವಾಯಿತು?" ಎಂದು ಕೇಳಿದರು.

"ಎಂಟು ಗಂಟೆಗೆ" ಎಂದು ಅವನು ಎರಡೇ ಮಾತುಗಳಲ್ಲಿ ಉತ್ತರ ವಿತ್ತನು.

"ಪೂರಾ ಉರಿಯುವವರೆವಿಗೆ ಮಳೆ ಬರಲಿಲ್ಲ, ಅಲ್ಲವೇ?" ಎಂದು ಪುನಃ ಕೇಳಿದರು.

"ಇಲ್ಲ. ಅತ್ತೆ"

"ಒಳ್ಳೆಯದಾಯಿತು. ಇಲ್ಲದಿದ್ದರೆ ಎಷ್ಟೋ ತೊಂದರೆಯಾಗುತ್ತಿತ್ತು" ಎಂದು ತಮ್ಮ ಅಭಿಪ್ರಾಯವನ್ನು ಹೇಳಿದರು.

ಯಾರೂ ಆ ಮಾತಿಗೆ ಜವಾಬು ಹೇಳಲಿಲ್ಲ.

ವರದೆಯು "ಅತ್ತೆ, ಈ ಮಳೆಯಲ್ಲಿ ಬೆಂಕಿ ಎಲ್ಲಾ ಆರಿಹೋಗಿರಬಹುದಲ್ಲವೇ?" ಎಂದಳು.

"ಆರಿಹೋಗಿರಬಹುದು. ಇಷ್ಟು ಕುಂಭದ್ರೋಣವಾಗಿ ಮಳೆ ಬಂದರೆ ಬೆಂಕಿ ಆರದೇ ಇರುತ್ತದೆಯೇ? ಎಷ್ಟು ದೊಡ್ಡ ಬೆಂಕಿಯಾದರೂ ಆರಿಹೋಗುತ್ತದೆ"

"ಅಮ್ಮನ ಬೂದಿಯನ್ನು ಗಂಗೆಯಲ್ಲಿ ಕದರಬೇಕೆಂದು ಹೇಳುತ್ತಿದ್ದೆಯಲ್ಲ. ಅತ್ತೆ. ಈ ಮಳೆ ಬಿದ್ದ ಮೇಲೆ ಬೂದಿ ಎಲ್ಲಿ ಸಿಗುತ್ತದೆ"

ವಿಮಲೆಯು ನಡುವೆ ಬಾಯಿ ಹಾಕಿ "ಆ ದೊಡ್ಡ ಮಾತೆಲ್ಲಾ ನಿನಗೇಕೆ? ಸುಮ್ಮನಿರು" ಎಂದು ಗದ್ದರಿಸಿದಳು.

ಅತ್ತೆ ಆ ಮಾತನ್ನು ಅಲ್ಲಿಗೇ ಬಿಡಲಿಲ್ಲ. ಅವರು ಮುಂದಿನ ಮಾತನ್ನು ಆಡಿಯೇ ಆಡಿದರು. "ಬೂದೀ ಸಿಕ್ಕದಿದ್ದರೇನಂತೆ. ನಾವೇ ಗಂಗಮ್ಮನಲ್ಲಿ ತೆಗೆದುಕೊಂಡು ಹೋಗಿ ಕದಡುವ ಬದಲು ಗಂಗಮ್ಮನೇ ಬಂದು ತೆಗೆದುಕೊಂಡು ಹೋದಳು. ಅವಳು ಪುಣ್ಯಾತ್ಗಿತ್ತಿ. ಇನ್ನೂ ನನಗೆ ಸಾವು ಬರಲಿಲ್ಲವಲ್ಲ" ಎಂದು ಹೇಳಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ವಿಮಲೆಯು "ಕಾಲ ಬರದೇ ಸಾಯುವುದಕ್ಕಾಗುತ್ತದೆಯೇ, ಅತ್ತೆ. ಅಷ್ಟಕ್ಕೂ ಸಾಯುವುದಕ್ಕೆ ನಿಮಗೇನಾಗಿದೆ?" ಎಂದು ಸಮಾಧಾನ ಹೇಳಿದಳು.

ಆದರೆ ಆ ಮಾತಿನಿಂದ ಅವರಿಗೆ ಸಮಾಧಾನವಾಗಲಿಲ್ಲ. ಅದೇ ಒಂದು ನೆವವಾಯಿತು. "ಸಾಯುವುದಕ್ಕೆ ಏನಾಗಿದೆ ಎಂದರೆ ವಯಸ್ಸಾಗಿಲ್ಲವೇನೇ? ನನ್ನ ತಮ್ಮನಿಗೇನಾಗಿತ್ತು? ನಿಮ್ಮಮ್ಮನಿಗೇನಾಗಿತ್ತು? ನಮ್ಮ ಮುಂದಿನ ಹುಡುಗರು ಸಾಯುತ್ತಿದ್ದರೆ ನಾವು ನೋಡುತ್ತಾ ಕುಳಿತಿರುವುದೇನೆ? ಪುಣ್ಯಾತ್ಮರು ಬೇಗ ಬೇಗ ಸಾಯುತ್ತಾರೆ. ನನ್ನಂತಹ ಪಾಪಿಷ್ಟರು ಸಾಯುವುದೇ ಇಲ್ಲ" ಎಂದರು.

ಅವರನ್ನು ಸಮಾಧಾನ ಮಾಡಬೇಕಾದರೆ ಅರ್ಧ ಗಂಟೆಯಾಯಿತು. ಎಲ್ಲರೂ ಮಲಗುವ ಹೊತ್ತೂ ಆಗಿತ್ತು. ವಿಮಲೆಯು ಹುಡುಗರನ್ನು "ಮೇಲೆ ಹೋಗಿ ಮಲಗಿಕೊಳ್ಳಿ" ಎಂದು ಹೇಳಿದಳು. ತಾನು ಅತ್ತೆಯನ್ನು ಎಬ್ಬಿಸಲು ಹೋದಳು.

ಶಂಕರನು "ಈಗಲೇ ನಿದ್ದೆ ಬರುತ್ತದೆಯೆ? ವಿಮಲಾ" ಎಂದು ಕೇಳಿದನು.

ವಿಮಲೆಯು "ಇಲ್ಲ. ಇಷ್ಟು ಬೇಗ ಎಲ್ಲಿಯ ನಿದ್ದೆ" ಎಂದು ಹೇಳಿ, ಶೀಲಳನ್ನು ಉದ್ದೇಶ ಮಾಡಿ "ಶೀಲಾ! ಅತ್ತೆಯನ್ನು ಕರೆದುಕೊಂಡು ಹೋಗಿ ಮಲಗಿಸು. ನೀವೂ ಮಲಗಿಕೊಳ್ಳಿ. ನಾನು ಬಂದು ಬಿಡುತ್ತೇನೆ" ಎಂದು ಹೇಳಿದಳು.

ಶೀಲೆಯು ಸಾವಿತ್ರಮ್ಮನವರ ಬಳಿಗೆ ಹೋದಳು. ಅವರು ಸೋಫಾ ದಿಂದ ಮೇಲೆದ್ದು, ಶೀಲೆಯ ಭುಜದ ಮೇಲೆ ಕೈಯಿಟ್ಟು, ಒಂದೆರಡು ಹೆಜ್ಜೆ ಯನ್ನು ಇಟ್ಟು "ನಾನೂ ನೋಡುತ್ತೇನೆ. ನಾಯುದೇ ಈ ಹಾಳು ಜೀವ ಇನ್ನೂ ಗಟ್ಟಿಯಾಗಿ ಬದುಕಿದ್ದರೆ ಮೋಟಾರಿನಲ್ಲಿಯಾದರೂ ಕುಳಿತು ಪ್ರಾಣ ಬಿಡುತ್ತೇನೆ" ಎಂದು ಹೇಳಿಕೊಂಡರು

ಆ ಮಾತು ಕೇಳಿ, ಆ ದುಃಖದಲ್ಲಿಯೂ ಎಲ್ಲರಿಗೂ ನಗುವು ಬಂದಿತು.

ಶೀಲಳು ಸಾವಿತ್ರಮ್ಮನವರನ್ನು ಕರೆದುಕೊಂಡು ಹೋಗುತ್ತಿರುವಾಗ ವಿಮಲೆಯು ತಮ್ಮನ ಬಳಿಯಲ್ಲಿ ಕುಳಿತುಕೊಂಡಳು.

ಅವರಿಬ್ಬರೂ ಕಣ್ಮರೆಯಾದ ನಂತರ ಶಂಕರನು "ವಿಮಲಾ. ಅಮ್ಮನು ನಿನ್ನ ಹತ್ತಿರ ಹಣಕಾಸಿನ ವಿಷಯವನ್ನೇನಾದರೂ ಹೇಳಿದ್ದಳೇನು?" ಎಂದು ಕೇಳಿದನು.

ವಿಮಲೆಯು "ಇಲ್ಲ. ನನಗೇನೂ ಗೊತ್ತಿಲ್ಲ. ಹಣ ಬೇಕಾದಾಗ ಲೆಲ್ಲಾ ಬ್ಯಾಂಕಿನಿಂದ ತರಿಸುತ್ತಿದ್ದ ಹಾಗಿತ್ತು" ಎಂದಳು.

"ಅದು ನನಗೂ ಗೊತ್ತಿದೆ. ಅಲ್ಲೆಷ್ಟು ಹಣವಿದೆ? ಮನೆಯಲ್ಲೆಲ್ಲಿ ಯಾದರೂ ಹಣವಿದೆಯು? ಎಂಬುದೇನಾದರೂ ನಿನಗೆ ಗೊತ್ತೇನೋ. ಎಂದು ಕೇಳಿದೆ"

"ಬ್ಯಾಂಕಿನಲ್ಲಿ ಹಣವಿರಬೇಕು. ಅದನ್ನೇ ತರಿಸಿ ಅಮ್ಮನು ಖರ್ಚು ಮಾಡುತ್ತಿದ್ದಳು. ಮನೆಯಲ್ಲಿ ಎಲ್ಲಿಯೂ ಇಲ್ಲ"

ಶಂಕರನು ಅದಕ್ಕೇನೂ ಮಾತನಾಡದೇ ಸ್ವಲ್ಪ ಹೊತ್ತು ಯೋಚನೆ ಮಾಡುತ್ತಿದ್ದನು.

ವಿಮಲೆಯು "ಶಂಕರ! ಅದೇನು ಅಷ್ಟು ಯೋಚನೆ ಮಾಡುತ್ತೀಯೆ? ಅಮ್ಮನು ಸತ್ತುದರಿಂದ ನಮ್ಮ ಹಣಕಾಸಿನ ಸ್ಥಿತಿಯಲ್ಲಿ ಬದಲಾವಣೆಯಾಗಲು ಕಾರಣವೇನಿದೆ? ಯಾಕೆ, ಏನು ಯೋಚಿಸುತ್ತಿದ್ದೀಯೆ?' ಎಂದು ಕೇಳಿದಳು.

"ಅಂತಹದೇನೂ ಇಲ್ಲ. ಅಪ್ಪ ಸತ್ತಾಗ ನಾನು ಸಣ್ಣ ಹುಡುಗ. ಆದರೆ ಅವರು ವಿಪರೀತವಾಗಿ ಸಂಪಾದನೆ ಮಾಡಿದ್ದರೆಂದು ಕೇಳಿದ್ದೇನೆ. ಬ್ಯಾಂಕಿನಲ್ಲಿ ಅವರದು ಲಕ್ಷಾಂತರ ರೂಪಾಯಿಗಳಿರಬೇಕು. ಈ ಮನೆಯು ಬೇರೇ ಇದೆ. ಏನಿಲ್ಲವೆಂದರೂ ಇದರ ಬೆಲೆಯು ಎರಡು ಲಕ್ಷ ರೂಪಾಯಿಗಳಾಗುತ್ತವೆ. ಕೆಂಗೇರಿ ಬಳಿ ಇರುವ ಮನೆಯು ಬೇರೇ ಇದೆ. ಅದೇನು ಪ್ರಯೋಜನವಿಲ್ಲ. ಜಮೀನಿಗೆ ಮಾತ್ರ ಬೆಲೆ. ಆದರೂ ಇರುವುದನ್ನು ಸರಿಯಾಗಿ ತಿಳಿದುಕೊಳ್ಳೋಣವೆಂದು ಕೇಳಿದೆ'

"ಅಮ್ಮನು ಹಣಕಾಸಿನ ವಿಷಯವನ್ನು ನಿನ್ನ ಬಳಿ ಹೇಗೆ ಮಾತನಾಡುತ್ತಿರಲಿಲ್ಲವೋ, ನನ್ನ ಬಳಿಯೂ ಹಾಗೆಯೇ ಮಾತನಾಡುತ್ತಿರಲಿಲ್ಲ. ಆ ವಿಷಯ ಮಾತನಾಡುವುದಕ್ಕೆ ನಾವು ಸಣ್ಣ ಹುಡುಗರೆಂದು ಅವಳ ಭಾವನೆ. ಅದೂ ಅಲ್ಲದೇ ಇನ್ನೊಂದು ವಿಷಯ. ಅವಳು ಇಷ್ಟು ಬೇಗನೆ ಸತ್ತು ಹೋಗುತ್ತೇನೆಂದುಕೊಂಡಿರಲಿಲ್ಲ'

"ಅದು ಹೇಗಿದ್ದರೂ ನಾನು ನಾಳೆಯು ಬ್ಯಾಂಕಿಗೆ ಹೋಗಿ ಬರಬೇಕೆಂದಿದ್ದೇನೆ. ನೀನು ಬಾ. ಹೋಗಿ ನೋಡೋಣ. ಎಷ್ಟು ಕಡಮೆ ಎಂದರೂ ನಾವು ಹಾಯಾಗಿ ಬದುಕುವಷ್ಟಾದರೂ ಹಣವಿದೆ"

ವಿಮಲೆಗೆ ಏನೋ ನೆನಪಿಗೆ ಬಂದಿರಬೇಕು. ಶಂಕರನು ಮಾತನಾಡುತ್ತಿದ್ದಂತೆಯೇ ಅವಳು ನಡುವೆ ತಲೆ ಹಾಕಿ "ನೋಡು. ಅಮ್ಮನು ಆಗಾಗ ಸುಬ್ಬಣ್ಣನವರನ್ನು ಕರೆಸಿ ಮಾತನಾಡುತ್ತಿದ್ದಳು. ಅವರೇ ಬ್ಯಾಂಕಿನಿಂದ ಅಮ್ಮನಿಗೆ ಹಣವನ್ನು ತಂದು ಕೊಡುತ್ತಿದ್ದರು. ಅವರನ್ನು ನೋಡಿ ಕೇಳಿದರೆ ಎಲ್ಲವೂ ಗೊತ್ತಾಗಬಹುದು" ಎಂದು ಹೇಳಿದಳು.

ಆ ದಿನದ ಕರ್ಮಗಳಿಂದ ಶಂಕರನಿಗೆ ಬಹಳ ದೇಹಶ್ರಮವಾಗಿತ್ತು. ಮನಸ್ಸಂತೂ ತಪ್ತವಾಗಿದ್ದಿತು. ಅವನಿಗೆ ಮಲಗಿಕೊಳ್ಳೋಣವೆನಿಸಿತ್ತು.

"ನಡಿ. ವಿಮಲಾ! ಮಲಗಿಕೊಳ್ಳೋಣ. ಏನಿದ್ದರೂ ನಾಳೆಯದಿನ ನೋಡಿಕೊಳ್ಳೋಣ" ಎಂದು ಹೇಳಿ ಮೇಲೆದ್ದನು.

ವಿಮಲೆಯು ಅಡಿಗೆಯ ಮನೆಯ ಕಡೆಗೆ ಹೋದಳು. ಗೌರಮ್ಮನು ಅಡಿಗೆಯ ಮನೆಯನ್ನು ಸಾರಿಸುತ್ತಿದ್ದಳು. ವಿಮಲೆಯು "ಗೌರಮ್ಮಾ! ಪಾತ್ರೆ ಪಡಗಳನ್ನು ಸರಿಯಾಗಿ ತಗೆದಿಡಿ. ಬಾಗಿಲುಗಳನ್ನೆಲ್ಲಾ ಸರಿಯಾಗಿ ಹಾಕಬೇಕೆಂದು ಕೆಂಚನಿಗೆ ಹೇಳಿದ್ದೇನೆ. ಅವನ್ನೆಲ್ಲಾ ಒಂದು ಬಾರಿ ನೋಡಿ ಮಲಗಿಕೊಳ್ಳಿ" ಎಂದು ಹೇಳಿದಳು.

ಅದಕ್ಕೆ ಉತ್ತರವಾಗಿ ಗೌರಮ್ಮನು "ಆಗಲಮ್ಮ" ಎಂದಿತು.

ವಿಮಲೆಯು ಗಮನಿಸಿದಳೋ ಇಲ್ಲವೋ? "ನಮಗೇನು ಗೊತ್ತಿಲ್ಲವೆ? ನಾವೇನು ಈ ಮನೆಗೆ ಹೊಸಬರೆ? ಮೊದಲೆಲ್ಲಾ ನಾವೇ ಅಲ್ಲವೇ ನೋಡಿಕೊಳ್ಳುತ್ತಿದ್ದುದು?" ಎಂದಿಷ್ಟು ಅರ್ಥವೂ ಅವ್ಯಕ್ತವಾಗಿ ಗೌರಮ್ಮನು ಕೊಟ್ಟ ಉತ್ತರದಲ್ಲಿ ಅಡಗಿದ್ದಿತು.

ವಿಮಲೆಯು ಮಹಡಿಯನ್ನು ಹತ್ತಿ ಮೇಲೆ ಬಂದಳು. ಮಾಮೂಲಿನಂತೆ ಅವಳು ತಾಯಿಯು ಮಲಗಿರುತ್ತಿದ್ದ ಕೋಣೆಗೆ ಬಂದಳು. ಅವಳಿಗೆ ಬರಬೇಕೆಂದು ಬರಲಿಲ್ಲ. ದಿನವೂ ಮಲಗಿಕೊಳ್ಳಲು ಹೋಗುವಾಗ ಅಮ್ಮನ ಕೋಣೆಗೆ ಹೋಗಿ ಅವಳನ್ನು ನೋಡಿ, ಮಾತನಾಡಿಸಿಕೊಂಡು ಹೋಗುತ್ತಿದ್ದಳು. ಆ ಅಭ್ಯಾಸದ ಮೇಲೆ ಅಲ್ಲಿಗೆ ಹೋದಳು. ಬರಿಯ ಹಾಸಿಗೆಯನ್ನು ನೋಡಿದ ಕೂಡಲೇ ಅವಳಿಗೆ ದುಃಖವು ಉಕ್ಕಿ ಉಕ್ಕಿ ಬಂದಿತು. ಬಿಕ್ಕಳಿಸಿ ಅಳುತ್ತಾ ಹಾಸಿಗೆಯ ಮೇಲೆ ಬಿದ್ದು ಹೊರಳಾಡ ತೊಡಗಿದಳು.

ಸ್ವಲ್ಪ ಹೊತ್ತಿನಲ್ಲಿ ತನಗೆ ತಾನೇ ಸುಧಾರಿಸಿಕೊಂಡು ತನ್ನ ಕೋಣೆಗೆ ಬಂದಳು. ಇದುವರೆವಿಗೆ ಅವಳ ಕೋಣೆಯಲ್ಲಿ ಅವಳದೊಂದೇ ಮಂಚವನ್ನು ಹಾಕಿರಲಾಗುತ್ತಿತ್ತು. ಈಗ ಒಂದು ಕಡೆಯಲ್ಲಿ ಮತ್ತೆ ಮೂರು ಮಂಚಗಳನ್ನು ಹಾಕಿ ಹಾಸಿಗೆಯನ್ನು ಹಾಸಲಾಗಿತ್ತು. ಅದರ ಮೇಲೆ ಅವಳ ಇಬ್ಬರು ತಂಗಿಯರೂ ತಮ್ಮ ವಾಸುವೂ ಮಲಗಿದ್ದರು. ತನ್ನ ಹಾಸಿಗೆಯ ಬಳಿಗೆ ಬಂದಳು. ಅವಳ ಹಾಸಿಗೆಯನ್ನೂ ಕೊಡವಿ ಹಾಕಿದ್ದರು. ಅವಳ ಮಂಚದ ಒಂದೆ ಕಾಲುಮಣೆಯ ಮೇಲೆ ವಿದ್ಯುದ್ದೀಪವು ಉರಿಯು

ತ್ತಿತ್ತು. ಕಣ್ಣಿಗೆ ಅದರ ಪ್ರಕಾಶವು ತಟ್ಟದಂತ ಮಾಸಲು ಕೆಂಪಿನ ಷೇಡ್ ಹಾಕಲಾಗಿತ್ತು. ಷೇಡ್‌ನಲ್ಲಿ ನಾಲ್ಕಾರು ಮರಗಳೂ ಒಂದೆರಡು ಜಿಂಕೆಗಳೂ ಚಿತ್ರಿತವಾಗಿದ್ದವು. ಅದೇ ಕಾಲುಮಣೆಯ ಮೇಲೆ ದೀಪದ ಕೆಳಗೆ ಅವಳು ಹಿಂದಿನ ರಾತ್ರಿ ಓದುತ್ತಿದ್ದ ಕಾದಂಬರಿಯನ್ನಿಡಲಾಗಿತ್ತು.

ರಾತ್ರಿ ಮಲಗಿಕೊಳ್ಳುವಾಗ ನಿದ್ದೆ ಬರುವವರೆವಿಗೆ ವಿಮಲೆಯು ಓದುತ್ತಾ ಮಲಗಿರುವುದು ಪದ್ಧತಿ. ಇಂದೂ ಎಂದಿನಂತೆಯೇ ಹಾಸಿಗೆಯ ಮೇಲೆ ಮಲಗಿಕೊಂಡು, ದಪ್ಪವಾದ ರಗ್ ಮೇಲೆಳೆದುಕೊಂಡಳು. ಪಕ್ಕದಲ್ಲಿದ್ದ ಕಾದಂಬರಿಯನ್ನು ತೆಗೆದಳು. ತಾನು ಹಿಂದಿನ ರಾತ್ರಿ ಓದಿದ್ದ ಘಟ್ಟವನ್ನು ತೆಗೆದು ಓದಲಾರಂಭಿಸಿದಳು.

ಪುಸ್ತಕವನ್ನು ತೆಗೆದುಕೊಂಡಳೇ ವಿನಾ ಒಂದು ನಿಮಿಷವೂ ಸಹ ಓದಲಾಗಲಿಲ್ಲ. ಅವಳಿಗೆ ಮೇಲಿಂದ ಮೇಲೆ ತಾಯಿಯ ನೆನಪು ಬರಲಾರಂಭಿಸಿತು. ಕಳೆದ ಎಂಟು ತಿಂಗಳಿಂದಲೂ ಈ ದಿನ ರಾತ್ರಿ ತನ್ನ ತಾಯಿಯ ರೂಮಿಗೆ ಹೋದಂತೆಯೇ ಹೋಗುತ್ತಿದ್ದಳು. ಆದರೆ ಇಂದಿನಂತ ಹಾಸಿಗೆಯು ಖಾಲಿಯಾಗಿರುತ್ತಿರಲಿಲ್ಲ. ವೃದ್ಧೆಯಾಗಿ ಒಣಗಿ ಹೋದ ಅವಳ ದೇಹವು ಮಲಗಿದ್ದರೂ ತಾಯಿಯು ರೋಗಿಷ್ಟೆಯಾಗಿದ್ದರೂ ಪೂರ್ಣವಾದ ಮಾತೃ ಪ್ರೇಮವು ಲಭ್ಯವಾಗುತ್ತಿತ್ತು. ಅವಳ ಬಳಿ ಮಾತನಾಡುತ್ತಾ ಎಷ್ಟೋ ಹೊತ್ತು ಕುಳಿತಿರುತ್ತಿದ್ದಳು. ಒಂದೊಂದುಬಾರಿ ತಾಯಿಯು ತನ್ನ ವಯಸ್ಸಾದ ಮಗಳ ಮುಂಗೂದಲನ್ನು ನೇವರಿಸುತ್ತಿದ್ದಳು. ಗೌರಮ್ಮನು ಮಲಗಿಕೊಳ್ಳಲು ಹೋಗುವಾಗ ಒಂದು ಬೆಳ್ಳಿಯ ಲೋಟಾದಲ್ಲಿ ಹಾಲನ್ನು ತಂದು ಕೊಡುತ್ತಿದ್ದರು. ವಿಮಲೆಯೇ ತಾಯಿಯನ್ನು ಹಿಡಿದೆತ್ತಿ ನಿಧಾನವಾಗಿ ಹಾಲು ಕುಡಿಸುತ್ತಿದ್ದಳು. ವಿಮಲೆಯಂತೆಯೇ ವರದೆಯೂ ಶೀಲೆಯೂ ಬಂದು ತಾಯಿಯನ್ನು ನೋಡಿಕೊಂಡು ಹೋಗುತ್ತಿದ್ದರು. ವರದೆಯ ರೀತಿಯನ್ನು ನೋಡಿ ಆಕೆಯು ಎಷ್ಟೋ ನೊಂದುಕೊಳ್ಳುತ್ತಿದ್ದರು. ಇಷ್ಟು ವಯಸ್ಸಾದರೂ ತಲೆ ಸಹ ಬಾಚಿಕೊಳ್ಳದೇ ಹೀಗಿದ್ದಾಳೆಯಲ್ಲಾ-ಎನ್ನುತ್ತಿದ್ದರು. ವಾಸುವನ್ನು ನೋಡಿದಾಗ ನಾನು ಹೋದ ಮೇಲೆ ಈ ತುಂಟ ಮಗುವನ್ನು ಯಾರು ನೋಡಿಕೊಳ್ಳುವವರು ಎಂದು ಪೇಚಾಡುತ್ತಿದ್ದರು. ಶಂಕರನ ವಿಷಯದಲ್ಲಿಯಂತೂ ಅವರಿಗೆ ಬಹಳ ಅಸಮಾಧಾನವಿದ್ದಿತು. ಅವನು

ಒಂದೊಂದು ದಿನ ಸಾಯಂಕಾಲ ಕಾರು ತಗೆದುಕೊಂಡು ಮನೆಯನ್ನು ಬಿಟ್ಟರೆ ವಾಪ್ಸು ಮನೆಗೆ ಬರುವುದು ಹನ್ನೆರಡು ಗಂಟೆ ಒಂದು ಗಂಟೆಯಾಗುತ್ತಿತ್ತು. ಕೆಲವು ದಿನಗಳು ಅವನಾವಾಗ ಮನೆಗೆ ವಾಪ್ಸು ಬಂದನೋ ಗೊತ್ತೇ ಆಗುತ್ತಿರಲಿಲ್ಲ. ಮನೆಯ ದೊಡ್ಡ ಮಗನೇ ಹೀಗಾದರೆ ಹೇಗೆ ಎಂದು ಎಷ್ಟೋ ಬಾರಿ ಹೇಳುತ್ತಿದ್ದರು. ಒಂದೊಂದು ಬಾರಿ ಅವರು ಹುಚ್ಚು ಹುಚ್ಚಾಗಿಯೂ ಮಾತನಾಡುತ್ತಿದ್ದರು. "ವಿಮಲಾ! ನಾನಿನ್ನು ಬಹಳ ದಿನಗಳು ಬದುಕುವುದಿಲ್ಲ. ಅನಂತರ ಈ ಸಂಸಾರದ ಗತಿಯೇನು? ನಾನು ಬದುಕಿದ್ದು ನಿನಗೆ ಮದುವೆ ಮಾಡಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ನನಗೆ ಈ ಭಾಗ್ಯವಿಲ್ಲ. ಹೇಗೋ ನಿನಗೆ ಮದುವೆಯಾಗುತ್ತದೆ. ನೀನು ಗಂಡನ ಮನೆಗೆ ಹೊರಟು ಹೋಗುತ್ತೀಯೆ? ನೀನಿರುವವರೆಗಾದರೂ ನೀನು ಎಲ್ಲಾ ನೋಡಿಕೊಂಡು ನಿಭಾಯಿಸುತ್ತೀಯೆ? ನೀನೂ ಹೊರಟು ಹೋದ ನಂತರ ಈ ಸಂಸಾರದ ಗತಿಯೇನು? ಎಲ್ಲಾ ಏಕ್ದಾವಾಲಾಗಿ ಹೋಗುತ್ತದೆ. ಈ ನನ್ನ ಮಕ್ಕಳಿಗೆ ಗತಿಯಾರು? ಅವರನ್ನು ಕೇಳುವವರಾರು?" ಎನ್ನುತ್ತಿದ್ದರು.

ಮುಂದೆ ಮಾತನಾಡಲು ಅವರಿಗೆ ಆಗುತ್ತಿರಲಿಲ್ಲ. ಗಂಟಲು ಕಟ್ಟಿಕೊಂಡು ಬರುತ್ತಿತ್ತು. ಮಾತಿಗೆ ಬದಲಾಗಿ ಅವರ ಎರಡು ಕಣ್ಣುಗಳಲ್ಲಿಯೂ ನೀರು ತುಂಬಿಕೊಳ್ಳುತ್ತಿತ್ತು. ಆ ನೀರು ಹೆಚ್ಚಿ ಹರಿಯುತ್ತಿತ್ತು. ಅದು ಕಿವಿಗಳವರೆಗೆ ಬರುತ್ತಿತ್ತು.

ಅದನ್ನು ನೋಡಿದಾಗಲೆಲ್ಲಾ ವಿಮಲೆಗೆ ಅಳು ಬರುತ್ತಿತ್ತು. ಅವಳು ತನ್ನ ಕರವಸ್ತ್ರದಿಂದ ಅವರ ಕಣ್ಣುಗಳನ್ನೂ ಕೆನ್ನೆಗಳನ್ನೂ ಒರಸುತ್ತಿದ್ದಳು. ಗದ್ಗದ ಕಂಠದಿಂದ "ನೀನು ಮಲಗಿಕೊಳ್ಳಮ್ಮಾ! ಮಾತನಾಡಬೇಡ. ನಿನಗೆ ಆಯಾಸವಾಗುತ್ತದೆ" ಎಂದು ಹೇಳುತ್ತಿದ್ದಳು.

ತಾಯಿಗೆ ಮಗಳಿಗೆ ದುಃಖವಾದುದು ಗೊತ್ತಾಗುತ್ತಿತ್ತು. ಮಗಳ ಕತ್ತು ಕಟ್ಟಿಕೊಂಡು ಅಳು ಬರುತ್ತಿರುವುದು ತಾಯಿಯ ಸೂಕ್ಷ್ಮವಾದ ಬುದ್ಧಿಗೆ ಗೋಚರವಾಗುತ್ತಿತ್ತು. ತಾನಷ್ಟು ಮಾತನಾಡಬಾರದಾಗಿತ್ತೆಂದು ತೋರುತ್ತಿತ್ತು. ಆಗವರು "ವಿಮಲಾ. ಯಾಕೆ ಅಳುತ್ತೀಯ? ನಾನೀಗಲೇ ಸಾಯುವುದಿಲ್ಲ. ಹೀಗೆ ಅನೇಕ ದಿನಗಳು ರೋಗದಿಂದ ನರಳುವ

ವರು ಬೇಗ ಸಾಯುವುದಿಲ್ಲ. ಎಷ್ಟೋ ದಿನಗಳು ಬದುಕಿರುತ್ತಾರೆ. ಈಗ ನಿಮ್ಮ ಸೋದರತ್ತೆ ನೋಡು. ಹತ್ತು ವರ್ಷದಿಂದ ಅಸ್ವಸ್ಥರಾಗಿಯೇ ಬದುಕಿಲ್ಲವೇ? ಅಷ್ಟಾದರೂ ಎಂಥಾದರೂ ಹುಟ್ಟಿದವರು ಸಾಯಲೇಬೇಕಲ್ಲ. ಅದರಿಂದ ಹೇಳಿದೆ. ನಾನು ಈಗಲೇ ಸಾಯುವುದಿಲ್ಲ. ಹೋಗಿ ಮಲಗಿಕೋ" ಎನ್ನುತ್ತಿದ್ದರು.

ಇಷ್ಟಾಗಿ ವಿಮಲೆಯು ತನ್ನ ರೂಮಿಗೆ ಬರುತ್ತಿದ್ದಳು. ಬಂದು ಬಹಳ ಹೊತ್ತು ಪುಸ್ತಕ ಓದುತ್ತಾ ಮಲಗಿರುತ್ತಿದ್ದಳು.

ಹೀಗೆಯೇ ಹಿಂದಿನದೆಲ್ಲವನ್ನೂ ನೆನಸಿಕೊಂಡು ವಿಮಲೆಯು ಮಲಗಿದ್ದಳು. ಹಾಗೆಯೇ ಅವಳಿಗೆ ನಿದ್ದೆಯು ಬಂದಿತು. ಎಷ್ಟು ಹೊತ್ತಿಗೆ ನಿದ್ದೆಯು ಬಂದಿತೋ ಅವಳಿಗೇ ಗೊತ್ತಾಗಲಿಲ್ಲ.

## ೨

ತಾಯಿಯ ವೈಕುಂಠ ಸಮಾರಾಧನೆಯಾಗುವವರೆವಿಗೆ ಮಕ್ಕಳು ದುಃಖದಲ್ಲಿಯೂ ಕರ್ಮಾಂತರದಲ್ಲಿಯೂ ನಿರತರಾಗಿದ್ದರು. ಆಮೇಲೆಯೂ ಸಹ ಅವರಿಗೆ ದುಃಖವಿಲ್ಲದೇ ಇರಲಿಲ್ಲ. ಆದರೆ ದುಃಖದಿಂದ ಅಳುತ್ತಲೇ ಕುಳಿತಿರುವುದು ಸಾಧ್ಯವಿರಲಿಲ್ಲ. ಹೊಸ ಜೀವನ ಪಥದಲ್ಲಿ ಅವರು ಹೆಜ್ಜೆ ಇಡಬೇಕಾಗಿದ್ದಿತು. ಸಾವಿತ್ರಮ್ಮನಿಗಂತೂ ಯಾವ ಯೋಚನೆಯೂ ಇರಲಿಲ್ಲ. ಅವಳಿಗೆ ನಾದಿನಿಯ ನೆನಪಾದರೆ ಕಣ್ಣೀರಿಡುತ್ತಿದ್ದಳು. ಇಲ್ಲದಿದ್ದರೆ ಸುಮ್ಮನೆ ಕುಳಿತಿರುತ್ತಿದ್ದಳು. ಹು ಡು ಗ ರು ಹುಡುಗರಾಗಿಯೇ ಇದ್ದರು.

ಇನ್ನೂ ಸಣ್ಣ ವಯಸ್ಸಿನವರಾದರೂ ವಿಮಲೆ–ಶಂಕರರು ತಮ್ಮ ತಮ್ಮಂದಿರು ತಂಗಿಯರಂತೆಯೇ ಇರಲು ಸಾಧ್ಯವಿರಲಿಲ್ಲ. ಅವರು ತಮ್ಮ ಹಣ ಕಾಸಿನ ಸ್ಥಿತಿಯನ್ನು ನೋಡಿಕೊಳ್ಳಬೇಕಾಗಿದ್ದಿತು. ಅನೇಕ ವಿಷಯಗಳನ್ನು ಕುರಿತು ಯೋಚನೆ ಮಾಡಬೇಕಾಗಿದ್ದಿತು. ಮಹಾ ಸಮುದ್ರದಲ್ಲಿ ಪ್ರಚಂಡವಾದ ಗಾಳಿಗೆ ಸಿಕ್ಕಿ ಮುರಿದ ಪತ್ತೇಮಾರಿಯಲ್ಲಿರುವ ನಾವಿಕರಂತೆ ಅವರು ದಿಕ್ಕು ಕಾಣದವರಾಗಿದ್ದರು.

ಆ ದಿನ ಬೆಳಗಾಗ ಕಾಫಿಯಾಯಿತು. ಹತ್ತು ಗಂಟೆಯುವರೆವಿಗೆ ಹಾಗೆ ಹೀಗೆ ಕಳೆಯಿತು. ಎಲ್ಲರಿಗೂ ಊಟಗಳಾದವು. ಹುಡುಗರೆಲ್ಲರನ್ನೂ ಸ್ಕೂಲುಗಳಿಗೆ ಕಳಿಸಬೇಕೆಂದು ವಿಮಲೆಯು ನಿರ್ಧರಿಸಿದ್ದಳು. ಎರಡು ಮೂರು ದಿನಗಳಿಂದ ಅವಳ ಪ್ರಯತ್ನವು ಸಫಲವಾಗಿರಲಿಲ್ಲ. ಈ ದಿನವಾದರೂ ಅವರನ್ನು ಕಳಿಸಲು ಪ್ರಯತ್ನ ಮಾಡುತ್ತಿದ್ದಳು.

ವರದಳಿಗೆ ಒಂದು ಮಾತು ಹೆಚ್ಚು ಹೇಳಿದರೆ ಅಳು. ಒಂದು ಮಾತು

ಕಡಿಮೆಯಾಗಿ ಹೇಳಿದರೆ ಕೋಪ. ಸ್ಕೂಲಿಗೆ ಹೋಗುವಂತೆ ಅಪ್ರತ್ಯಕ್ಷವಾಗಿ ಪ್ರೋತ್ಸಾಹ ಮಾಡಿ ಅವಳನ್ನು ಸ್ಕೂಲಿಗೆ ಕಳುಹಿಸಿದಳು. ವಾಸುವೂ ಸ್ಕೂಲಿಗೆ ಹೋಗಲು ತಕರಾರು ಮಾಡಿದ. ವಿಮಲೆಯು ಅವನನ್ನು ಎರಡು ಮಾತು ಬೈದು ಕೆಂಚನ ಜೊತೆ ಮಾಡಿ ಸ್ಕೂಲಿಗೆ ಕಳಿಸಿದಳು.

ಶೀಲೆಯು "ತನಗೆ ತಲೆ ನೋವು. ನಾಸೀ ದಿನ ಹೋಗುವುದಿಲ್ಲ. ಮುಂದಿನ ವಾರದಿಂದ ಹೋಗುತ್ತೇನೆ" ಎಂದು ಹೇಳಿದಳು.

ಅಷ್ಟರಲ್ಲಿ ಶಂಕರನು ಬಂದು "ವಿಮಲಾ. ನಾನು ಬ್ಯಾಂಕಿಗೆ ಹೋಗಿ ಬರುತ್ತೇನೆ" ಎಂದು ಹೇಳಿ ಹೊರಟು ಹೋದನು.

ಶೀಲೆಯು ಸ್ವಲ್ಪ ಮೃದು ಸ್ವಭಾವದ ಹುಡುಗಿ. ಅವಳನ್ನು ಒಂದು ಮಾತು ಬೈದರೂ ಚಿಂತೆಯಿಲ್ಲ. ವಿಮಲೆಯು ಅವಳನ್ನು ಗದ್ದರಿಸಿ ಸ್ಕೂಲಿಗೆ ಕಳಿಸಬೇಕೆಂದುಕೊಂಡಳು. ಆದರೆ ಅಷ್ಟರಲ್ಲಿ ತಂಗಿಯು ಆ ದಿನ ಸರಿಯಾಗಿ ಊಟ ಮಾಡದೇ ಇದ್ದುದು ಅವಳ ನೆನಪಿಗೆ ಬಂದಿತು. ಮೈ ಮುಟ್ಟಿ ನೋಡಿದಳು. ಶೀಲೆಯು ಹೇಳಿದುದು ನಿಜ. ಅವಳ ಮೈ ಬೆಚ್ಚಗಿದ್ದಿತು. ವಿಮಲೆಯು ತಂಗಿಯನ್ನು ಹಾಸಿಗೆಯ ಮೇಲೆ ಮಲಗಿಸಿ ಪಕ್ಕದಲ್ಲಿ ಕುಳಿತು ಕೊಂಡು ನಾವೆಲ್ ಒಂದನ್ನು ಕೈಗೆ ತೆಗೆದುಕೊಂಡಳು.

ಸುಮಾರು ಒಂದು ಗಂಟೆಯ ಒಳಗಾಗಿ ಶೀಲಳಿಗೆ ವಿಪರೀತ ಜ್ವರವು ಬಂದಿತು. ಮೈ ಕೆಂಡ ಕೆಂಡವಾಗಿ ಹೋಯಿತು. ವಿಮಲೆಯು ಹೆದರಿ ಮನೆಯ ಡಾಕ್ಟರು ಗುರುರಾಯರಿಗೆ ಟೆಲಿಫೋನ್ ಮಾಡಿದಳು. ಡಾಕ್ಟರು ಬರುವವರೆವಿಗೆ ವಿಮಲೆಗೆ ಜೀವದಲ್ಲಿ ಜೀವವಿಲ್ಲ.

ಅರ್ಧ ಗಂಟೆಯಲ್ಲಿ ಡಾಕ್ಟರು ಗುರುರಾಯರು ಬಂದರು. ಶೀಲೆ ಯನ್ನು ಪರೀಕ್ಷೆ ಮಾಡಿ ಒಂದು ಇಂಜಕ್ಷನ್ ಕೊಟ್ಟರು. ಡಿಸ್ಪೆನ್ಸರಿಗೆ ಹೋಗಿ ಔಷಧವನ್ನು ಕಳಿಸುವುದಾಗಿ ಹೇಳಿದರು. ಏನೂ ಯೋಚಿಸಬೇಕಾಗಿಲ್ಲ ವೆಂದೂ ಸಾಯಂಕಾಲದೊಳಗಾಗಿ ಜ್ವರವು ಬಿಡುತ್ತದೆಂದೂ ಒಂದೆರಡು ದಿನ ಗಳೊಳಗಾಗಿ ಎದ್ದು ಓಡಿಯಾಡುತ್ತಾಳೆಂದೂ ಧೈರ್ಯ ಹೇಳಿದರು.

ಬ್ಯಾಂಕಿಗೆ ಹೋಗಿದ್ದ ಶಂಕರನು ಟೀಯ ಹೊತ್ತಿಗೆ ಮನೆಗೆ ಬಂದನು. ಅವನೊಡನೆ ಸುಬ್ಬಣ್ಣನವರೂ ಮತ್ತೊಬ್ಬ ತರುಣನೂ ಬಂದರು. ಆ ತರು

ಣನನ್ನು ವಿಮಲೆಯು ಹಿಂದೆಲ್ಲಿಯೋ ನೋಡಿದ ನೆನಪು. ಸರಿಯಾಗಿ ಗುರುತು ಹತ್ತಲಿಲ್ಲ.

ಆ ತರುಣನಾರೆಂದು ಕೇಳಬೇಕೆಂದು ವಿಮಲೆಗೆ ತೋರಿತು. ಆದರೆ ಅಣ್ಣನು ಗಾಬರಿಯಾಗಿದ್ದನು. ಅದರಿಂದ ಅವಳು ಅದನ್ನು ಕೇಳಲಿಲ್ಲ.

ಶಂಕರನು "ವಿಮಲೆ. ಅತ್ತೆ ಎಲ್ಲಿದ್ದಾರೆ? ಶೀಲೆಗೆ ಹೇಗಿದೆ?" ಎಂದು ಕೇಳಿದನು.

ವಿಮಲೆಯು "ಕೆಳಗೆಲ್ಲೋ ಮಲಗಿರಬೇಕೆಂದು ಕಂಡು ಬರುತ್ತದೆ. ಶೀಲಳಿಗೆ ಇನ್ನೂ ಸರಿಯಾಗಿಲ್ಲ" ಎಂದಳು.

"ಸರಿ! ಸ್ವಲ್ಪ ಬಾ. ಮಾತನಾಡಬೇಕಾಗಿದೆ"

ವಿಮಲೆಯು ಎದ್ದು ಅಣ್ಣನೊಂದಿಗೆ ಹೋದಳು. ಕೋಣೆಯ ಪಕ್ಕದಲ್ಲಿ ಹಜಾರದಂತಿದ್ದ ಪ್ರದೇಶದಲ್ಲಿ ಹಾಕಿದ್ದ ಸೋಫಾದ ಮೇಲೆ ಎಲ್ಲರೂ ಕುಳಿತುಕೊಂಡರು.

ಶಂಕರನು "ಬ್ಯಾಂಕಿನಲ್ಲಿ ನಮ್ಮದೇನೂ ಹಣವಿಲ್ಲ. ಇದ್ದರೆ ಸುಮಾರು ಎರಡು ಸಾವಿರ ರೂಪಾಯಿಗಳವರೆಗೆ ಇರಬಹುದು" ಎಂದನು.

ಅಣ್ಣನು ಹತಾಶವಾಗಿ ಆಡಿದ ಮಾತನ್ನು ಕೇಳಿ ತಂಗಿಯು "ಹಾಗೆಂದರೆ ನಮ್ಮ ಹಣವೆಲ್ಲಾ ಏನಾಯಿತು?" ಎಂದು ಕೇಳಿದಳು.

"ಬ್ಯಾಂಕಿನ ಮ್ಯಾನೇಜರು ನಮ್ಮ ಹಣವೆಂಬುದೇ ಇರಲಿಲ್ಲವೆಂದು ಹೇಳುತ್ತಾರೆ"

ವಿಮಲೆಯು ಆ ಮಾತಿಗೆ ಉತ್ತರವನ್ನು ಕೊಡಲಾರದೇ ಹೋದಳು. ಶಂಕರನೂ ಮಾತನಾಡಲಿಲ್ಲ. ಯಾರೂ ಮಾತನಾಡಲಿಲ್ಲ.

ಒಂದು ಗಳಿಗೆಯ ಹೊತ್ತು ಸುಮ್ಮನಿದ್ದು ಅನಂತರ ವಿಮಲೆಯು ಸುಬ್ಬಣ್ಣನವರ ಕಡೆಗೆ ನೋಡಿದಳು.

ಅವರು "ನನಗೆ ಇದರ ಪೂರಾ ವಿಷಯ ತಿಳಿದಿರಲಿಲ್ಲವಮ್ಮ. ಈ ದಿನ ಬ್ಯಾಂಕಿಗೆ ಹೋಗಿ ನೋಡಿದ ನಂತರ ಒಂದೊಂದಾಗಿ ಗೊತ್ತಾಯಿತು. ನಿಮ್ಮ ತಂದೆಯುವರದು ಸ್ಥಿರ ಆಸ್ತಿಯೇನೂ ಹೆಚ್ಚಾಗಿರಲಿಲ್ಲ. . ಈ ಮನೆ, ಕೆಂಗೇರಿಯ ಬಳಿ ಇರುವ ಮನೆ ಎರಡೇ ಅವರ ಸ್ಥಿರ ಆಸ್ತಿ. ಆ ಕೆಂಗೇರಿಯ ಬಳಿ ಇರುವ ಜಮೀನೂ ಆಸ್ತಿಯೂ ಬೆಲೆ ಬಾಳುವುದಿಲ್ಲ. ಬೇ

ಬಾಳುವುದು ಈ ಮನೆಯೊಂದೇ. ಅವರ ಹಣವೆಲ್ಲವೂ ಷೇರುಗಳಲ್ಲಿಯೂ ಸೆಕ್ಯೂರಿಟಿಗಳಲ್ಲಿಯೂ ಇದ್ದಿತು. ಅವುಗಳನ್ನು ಅವನು ಬ್ಯಾಂಕಿನ ಸೇಫ್ ಡಿಪಾಸಿಟ್‌ನಲ್ಲಿಟ್ಟಿದ್ದರು. ಅವರು ಸಾಯುವ ಮೊದಲು ಯಾವುದೋ ವ್ಯಾಪಾರಕ್ಕೆ ಹಣ ಬೇಕೆಂದು ಅವುಗಳನ್ನೆಲ್ಲಾ ಮಾರಿಬಿಟ್ಟು ಹತ್ತು ಲಕ್ಷ ರೂಪಾಯಿ ತೆಗೆದುಕೊಂಡರಂತೆ" ಎಂದರು.

ವಿಮಲೆಯು "ಅಪ್ಪನ ಇನ್‌ಷೂರೆನ್ಸ್ ಹಣವು ಏನಾಯಿತಂತೆ?" ಎಂದಳು.

ಸುಬ್ಬಣ್ಣನವರು "ಆ ಹಣ ಐವತ್ತು ಸಾವಿರ ಬಂದಿತಂತೆ. ಅದನ್ನೆಲ್ಲಾ ಸ್ವಲ್ಪ ಸ್ವಲ್ಪವಾಗಿ ತೆಗೆದುಕೊಂಡು ನಿಮ್ಮ ತಾಯಿಯವರು ಖರ್ಚು ಮಾಡುತ್ತಾ ಬಂದರು" ಎಂದು ಹೇಳಿದರು.

ಮಾತಿನ ನಡುವೆ ಒಂದು ಗಳಿಗೆ ತಡೆದು ಸುಬ್ಬಣ್ಣನವರು "ಆ ಹಣ ಮುಗಿದ ನಂತರ ನಿಮ್ಮ ತಾಯಿ ಈ ಮನೆಯ ಮೇಲೆ ಒಂದು ಲಕ್ಷ ರೂಪಾಯಿ ಸಾಲ ಮಾಡಿದರು. ಅದೇ ಹಣವನ್ನು ಖರ್ಚು ಮಾಡುತ್ತಾ ಬಂದರು. ಮೊನ್ನೆ ದಿನ ವಾರಗಳಿಗೂ ಅದರಲ್ಲಿಯೇ ಹಣವನ್ನು ತೆಗೆದುಕೊಳ್ಳಲಾಯಿತು. ಇನ್ನು ಅಲ್ಲಿ ಉಳಿದಿರುವುದು ನಿಮ್ಮಣ್ಣ ಹೇಳಿದಂತೆ ಎರಡು ಸಾವಿರ" ಎಂದನು.

ವಿಮಲೆಯು "ಅಪ್ಪ ಸಾಯುವ ಮೊದಲು ಷೇರುಗಳನ್ನೂ ಸೆಕ್ಯೂರಿಟಿಗಳನ್ನೂ ಮಾರಿ ತೆಗೆದುಕೊಂಡ ಹತ್ತು ಲಕ್ಷಗಳನ್ನು ಏನು ಮಾಡಿದರು?" ಎಂದು ಕೇಳಿದರು.

ಸುಬ್ಬಣ್ಣನು "ಅದೇನು ಮಾಡಿದರೋ ಗೊತ್ತಿಲ್ಲ. ಬ್ಯಾಂಕ್ ಮ್ಯಾನೇಜರ್ ಲಿಂಗಪ್ಪನವರು ಯಾವುದೋ ವ್ಯಾಪಾರಕ್ಕಾಗಿಯೇ ಅವರು ಹಣ ತೆಗೆದುಕೊಂಡರು. ಪುನಃ ಯಾವುದೋ ಷೇರುಗಳನ್ನೂ ಸೆಕ್ಯೂರಿಟಿಗಳನ್ನೂ ಕೊಂಡಿರಬಹುದು ಎಂದರು. ಬ್ಯಾಂಕಿನಲ್ಲಿ ನಿಮ್ಮಮ್ಮ ಇಟ್ಟಿದ್ದ ಸೇಫ್ ಡಿಪಾಸಿಟ್‌ನಲ್ಲಿ ನೋಡಿದೆವು. ಅಲ್ಲಿ ಏನೂ ಇರಲಿಲ್ಲ. ಲಿಂಗಪ್ಪನವರು ಮನೆಯಲ್ಲಿಯೇ ನೋಡಿ–ಎಂದರು. ನಿಮ್ಮಣ್ಣನು ಅಲ್ಲವೇ ಇಲ್ಲವೆಂದು ಹೇಳಿದ. ಹೇಳುವುದನ್ನು ಮರೆತುಬಿಟ್ಟಿದ್ದೆನಮ್ಮ. ಇವರು ವೆಂಕಟರಾಯಯರೆಂಬ ದೊಡ್ಡ ಷೇರು ಬ್ರೋಕರು. ನಾವು ಹೋದಾಗ ಇವರೂ

ಅಲ್ಲಿಯೇ ಇದ್ದರು. ಲಿಂಗಪ್ಪನವರು ಇತರ ಬ್ಯಾಂಕುಗಳಲ್ಲಿಯೂ ಕಂಪನಿಗಳಲ್ಲಿಯೂ ನಿಮ್ಮ ಷೇರುಗಳೇನಾದರೂ ಇದೆಯೋ, ನೋಡುವುದಕ್ಕೆ ಇವರಿಗೆ ಹೇಳಿದ್ದಾರೆ. ಇವರು ಹುಡುಕುವುದಾಗಿ ಒಪ್ಪಿಕೊಂಡಿದ್ದಾರೆ"- ಎಂದರು.

ವಿಮಲೆಯು ವೆಂಕಟರಾಯರ ಕಡೆಗೆ ಆಶಾಪೂರ್ಣವಾದ ದೃಷ್ಟಿಯಿಂದ ನೋಡುತ್ತಾ "ಹುಡುಕಿದರೆ ಏನಾದರೂ ಸಿಕ್ಕುತ್ತದೆ ಎನ್ನುತ್ತೀರಾ?" ಎಂದಳು.

ಆತನು "ನೋಡಬೇಕು. ನಿಮ್ಮ ತಂದೆ ಹಣವನ್ನು ಪೋಲು ಮಾಡುವಂತಹವರಲ್ಲವೆಂದು ಲಿಂಗಪ್ಪನವರು ಹೇಳುತ್ತಾರೆ. ಅವರು ಯಾವುದೋ ವ್ಯಾಪಾರಕ್ಕೆಂದು ಇದ್ದುದನ್ನೆಲ್ಲಾ ಮಾರಿರುವಾಗ ಏನಾದರೂ ಕೊಳ್ಳದಿರುತ್ತಾರೆಯೆ? ಅದೂ ಅಲ್ಲದೇ ಅವುಗಳನ್ನು ಮಾರಿದ ನಂತರ ಬಹಳ ದಿನಗಳು ಅವರು ಬದುಕಿಯೂ ಇರಲಿಲ್ಲ. ನಾನೂ ನೋಡುತ್ತೇನೆ. ಆದರೆ ನೀವೂ ಹುಡುಕಿರಿ. ಮನೆಯಲ್ಲಿ ಎಲ್ಲಿಯಾದರೂ ಇರಬಹುದು" ಎಂದನು.

ಆ ಸಂಬಂಧವಾಗಿ ಅವರುಗಳು ಇನ್ನೇನೂ ಮಾತನಾಡಲಿಲ್ಲ. ವಿಮಲೆಯು ಕೆಳಗೆ ಹೋಗಿ ಎಲ್ಲರಿಗೂ ಟೀ ತಂದು ಕೊಟ್ಟಳು. ಅನಂತರ ಸುಬ್ಬಣ್ಣನವರೂ ವೆಂಕಟರಾಯನೂ ಹೊರಟರು. ಅಣ್ಣ ತಂಗಿಯರು ಬೀದಿಯ ಬಾಗಿಲಿನವರೆವಿಗೆ ಹೋಗಿ ಅವರನ್ನು ಬೀಳ್ಕೊಂಡರು.

ಅವರುಗಳು ದೂರ ಹೋದ ನಂತರ ವಿಮಲೆಯು "ಶಂಕರ! ಅಷ್ಟು ಷೇರುಗಳನ್ನೋ ಬಾಂಡುಗಳನ್ನೋ ಕೊಂಡಿದ್ದರೆ ನಮಗೆ ಅರ್ಧಕ್ಕೆ ಅರ್ಧ ಎಂದರೆ ಐದು ಲಕ್ಷಗಳಾದರೂ ಸಿಗಲಾರದೆ?" ಎಂದು ಕೇಳಿದಳು.

ಶಂಕರನಿಗೆ ಬಹಳ ನಿರಾಶೆಯಾಗಿದ್ದಿತೆಂದು ಕಂಡುಬರುತ್ತದೆ.

ಅವನು " ಅಷ್ಟು ಷೇರುಗಳನ್ನೇ ಕೊಂಡಿದ್ದರೆ ಪುಣ್ಯವಿದ್ದರೆ ಇಪ್ಪತ್ತು ಲಕ್ಷಗಳೇ ಬರಬಹುದು. ಏನೂ ಇಲ್ಲವೆಂದರೆ ನೀನು ಹೇಳಿದಂತೆ ಐದುಲಕ್ಷಗಳಾದರೂ ಬರಬಹುದು. ಆದರೆ ಈಗ ಅದು ಕಟ್ಟಿಕೊಂಡು ಮಾಡುವುದೇನು ?" ಎಂದು ಹೇಳಿದರು.

ಶಂಕರನು ಅಲ್ಲಿಯೇ ಕಂಬವನ್ನು ಒರಗಿಕೊಂಡು ನಿಂತಿದ್ದನು.

ವಿಮಲೆಯು ನೇರವಾಗಿ ಶೀಲೆಯ ಕೋಣೆಗೆ ಹೋದಳು. ಡಾಕ್ಟರು

ಕೊಟ್ಟಿದ್ದ ಇಂಜಕ್ಷನ್ ಕೆಲಸ ಮಾಡಿದ್ದಿತು. ಶೀಲೆಯು ಸ್ವಲ್ಪಮಟ್ಟಿಗೆ ಹುಷಾರಾಗಿದ್ದಳು. ವಿಮಲೆ ತಂಗಿಯನ್ನು ಹಾಸಿಗೆಯ ಮೇಲೆ ಕೂರಿಸಿ ಅವಳಿಗೆ ಟೀ ಕುಡಿಸಿದಳು. ಶೀಲೆಯು ಟೀ ಕುಡಿದು ಅಕ್ಕನೊಂದಿಗೆ ಮಾತನಾಡಲಾರಂಭಿಸಿದಳು.

ಸಂಜೆಯಾಯಿತು. ಶೀಲೆಯು "ಅಕ್ಕಾ! ಇಲ್ಲಿ ಬೇಜಾರಾಗುತ್ತದೆ. ಹೋಗಿ ಹೊರಗಡೆ ಕುಳಿತುಕೊಳ್ಳೋಣವೇ ?" ಎಂದಳು.

ವಿಮಲೆಯು ತಂಗಿಗೆ "ಆಗಲಿ" ಎಂದು ಹೇಳಿ ಆಳನ್ನು ಕರೆದು "ಕೆಂಚ. ಹೊರಗೆ ಕುರ್ಚಿಗಳನ್ನು ಹಾಕು" ಎಂದು ಹೇಳಿದಳು.

ಅನಂತರ ಅವಳು ತಂಗಿಯನ್ನು ಹಿಡಿದುಕೊಂಡು ಮಹಡಿಯನ್ನು ಇಳಿಸಿ ಕೆಳಗೆ ಕರತಂದಳು. ಅಷ್ಟು ಹೊತ್ತಿಗೆ ಆಳು ತೋಟದಲ್ಲಿ ಹುಲ್ಲಿನ ಮೇಲೆ ನಾಲ್ಕಾರು ಬೆತ್ತದ ಕುರ್ಚಿಗಳನ್ನು ಹಾಕಿದ್ದನು.

ಅಕ್ಕತಂಗಿಯರು ಅಲ್ಲಿ ಕುಳಿತು ಮಾತನಾಡತೊಡಗಿದರು.

ಸ್ವಲ್ಪ ಹೊತ್ತಿನಲ್ಲಿಯೇ ಶಂಕರನು ಸಿಗರೇಟು ಸೇದುತ್ತಾ ಬಂದು ತಂಗಿಯರೊಡನೆ ಕುಳಿತುಕೊಂಡನು.

ವಿಮಲೆಯು "ಅಣ್ಣಾ! ಈದಿನ ಬಂದಿದ್ದ ವೆಂಕಟರಾಯರನ್ನು ಎಲ್ಲಿಯೋ ನೋಡಿದಂತಿದೆ. ಅವರಾರು ?" ಎಂದು ಕೇಳಿದಳು.

ಶಂಕರನು "ಅಷ್ಟು ಬೇಗ ಮರೆತುಬಿಟ್ಟೆಯಾ ? ಇದೇ ಬೀದಿಯಲ್ಲಿ ಚನ್ನಕೇಶವ ರಾಯರಿರಲಿಲ್ಲವೆ ? ಇದೇ ಆ ಮೂಲೆ ಮನೆ. ನಾವಲ್ಲಿ ಹೋಗಿ ಆಡುತ್ತಿದ್ದೆವು. ಅವರ ಮಗ ವೆಂಕಟೂ ಅಲ್ಲವೇ ಅವನು ?" ಎಂದನು.

ವಿಮಲೆಗೆ ಅರ್ಧಂರ್ಧ ನೆನಪಿಗೆ ಬಂದಿತು. ಅವಳು "ಹೌದು! ಈಗ ಜ್ಞಾಪಕಕ್ಕೆ ಬಂದಿತು. ಅವರ ಮನೆಯ ಕಾಂಪೌಂಡಿನಲ್ಲಿ ನಾಲ್ಕಾರು ದೊಡ್ಡ ಹೊಂಗೇ ಮರಗಳಿದ್ದುವಲ್ಲವೇ ?" ಎಂದಳು.

ಶಂಕರನು ಹೌದೆಂದು ಹೇಳಿದರು.

ಇವರೆಲ್ಲಾ ಇಲ್ಲಿ ಕುಳಿತು ಸಭೆ ಮಾಡುತ್ತಿರುವುದನ್ನು ನೋಡಿದ ಸಾವಿತ್ರಮ್ಮನವರು ಸಿಡಾಸವಾಗಿ ಕೋಲೂರಿ ನಡೆದುಕೊಂಡು ಬಂದು "ಏನಿದು ? ಜ್ವರದವಳನ್ನು ಈ ಗಾಳಿಯಲ್ಲಿ ಕೂರಿಸಿಕೊಂಡು ಕುಳಿತಿದ್ದೀರಿ ?" ಎಂದು ಕೇಳಿದರು.

ಶೀಲಳು ಮುಂಕಾಗಿ ನಗುತ್ತಾ, ನಿಶ್ಯಕ್ತವಾದ ಧ್ವನಿಯಿಂದ "ಗಾಳಿಯು ಆರೋಗ್ಯಕರ ಅತ್ತೆ. ಬನ್ನಿ. ಕುಳಿತುಕೊಳ್ಳಿ" ಎಂದಳು.

ಸಾವಿತ್ರಮ್ಮನವರು ಕುಳಿತುಕೊಂಡು "ನಾನು ಶೀಲಳ ವಯಸ್ಸಿನಲ್ಲಿದ್ದಾಗ ನನಗೊಂದು ಬಾರಿ ಜ್ವರ ಬಂದಿತ್ತು. ಹತ್ತು ಹನ್ನೆರಡು ದಿನಗಳ ಕಾಲ ಕೋಣೆಯಲ್ಲಿಯೇ ಮಲಗಿದ್ದ ನನಗೆ ಬೇಜಾರಾಗಿ ಗಾಳಿಯಲ್ಲಿ ಜಗುಲಿಯ ಮೇಲೆ ಬಂದು ಕುಳಿತು ಕೊಂಡೆ. ನಮ್ಮಮ್ಮನ ಕಣ್ಣಿಗೆ ಬಿದ್ದಿತೋ ಇಲ್ಲವೋ, ಅವರು ಜ್ವರ ಬಂದಿದ್ದವಳನ್ನು ಹಿಡಿದು ಬಾರಿಸಿಬಿಟ್ಟರು. ಆದಿನ ರಾತ್ರಿ ಎಲ್ಲಾ ನನಗೆ ಕೆಂಡಾ ಮಂಡಲವಾಗಿ ಜ್ವರ. ಬಂದ ಜ್ವರ ಒಂದು ತಿಂಗಳು ಬಿಡಲಿಲ್ಲ" ಎಂದು ತಮ್ಮ ಜೀವನದ ಘಟನೆಯೊಂದನ್ನು ಅಳಿಯನಿಗೂ ಸೊಸೆಯರಿಗೂ ಹೇಳಿದರು.

ಜಗತ್ತೇ ಮುಳುಗಿ ಹೋದಂತೆ ಮನೆಯೊಳಗಿನಿಂದ ವಾಸುವು ಓಡಿ ಬಂದು "ಅತ್ತೆ. ಅತ್ತೆ. ಚೀಲಿ ಅಳುತ್ತಿದೆ. ಮೇಲಿನಿಂದ ಬಿತ್ತೋ, ಯಾರಾದರೂ ಹೊಡೆದರೋ ಏನೋ ಆಗಿದೆ" ಎಂದು ಹೇಳಿದನು.

ಸಾವಿತ್ರಮ್ಮನವರು ಆ ಮಾತು ಕೇಳಿದ ಕೂಡಲೇ ಮೇಲೆದ್ದರು. ಅವಸರದಲ್ಲಿ ಎದ್ದ ಅವರು ಕೋಲನ್ನು ಕೈಗೆ ತಗೆದುಕೊಳ್ಳದೇ ಇದ್ದುದರಿಂದ ನಿಂತುಕೊಳ್ಳಲಾರದೇ ತತ್ತರಿಸಿದರು. ಶಂಕರನು ಅವರನ್ನು ಹಿಡಿದುಕೊಂಡು ಕೋಲು ತೆಗೆದು ಕೈಗೆ ಕೊಟ್ಟನು. ಹಿಡಿದುಕೊಂಡು ಅವರು ಮನೆಯ ಕಡೆಗೆ ಹೊರಟರು.

ಶಂಕರನು "ವಿಮಲಾ. ನೀನು ಶೀಲೆಯನ್ನು ನೋಡಿಕೋ. ನಾನು ಅತ್ತೆಯೊಡನೆ ಹೋಗಿ ಬರುತ್ತೇನೆ" ಎಂದನು.

ಸಾವಿತ್ರಮ್ಮನೂ ಶಂಕರನೂ ಹೋಗುವ ವೇಳೆಗೆ ಮನೆಯ ಆಳುಗಳು ಗೌರಮ್ಮನವರೂ ಎಲ್ಲರೂ ನಾಯಿಯ ಯೋಗಕ್ಷೇಮವನ್ನು ನೋಡಿಕೊಳ್ಳಲು ಸೇರಿಬಿಟ್ಟಿದ್ದರು.

ಮುದುಕಿ ಕೋಲೂರಿಕೊಂಡು ಮುಂದೆ ಬಂದು "ನನ್ನ ಚೀಲಿಗೆ ಏನಾಯಿತು ?" ಎಂದು ಕೇಳಿದರು.

ಕೆಂಚನು "ಏನೂ ಇಲ್ಲವ್ವ. ಅದು ಮರೀ ಹಾಕಿದೆ" ಎಂದು ಹೇಳಿದನು.

ಸಾವಿತ್ರಮ್ಮನವರು ಹೋಗಿ ನೋಡಿದರು. ಅದರ ಜೀಲಿಯು ಮಲಗಿತ್ತು. ಅದರ ಪಕ್ಕದಲ್ಲಿ ನಾಲ್ಕೈದು ಮರಿಗಳು ಮಲಗಿದ್ದುವು.

ಅವರು " ಇಷ್ಟಕ್ಕೇ ರಗಳೆ ಮಾಡಿಬಿಟ್ಟೆಯೇನೋ? ವಾಸು" ಎಂದು ಕೇಳಿದರು.

ಅವನು ಅತ್ತೆಯಿಂದ ಮಾತನ್ನು ಮನಸ್ಸಿನ ಮೇಲೆ ತಂದುಕೊಳ್ಳದೇ " ಅತ್ತೆ, ಇದರಲ್ಲಿ ನನಗೊಂದು ಮರಿಯನ್ನು ಕೊಡಬೇಕು" ಎಂದನು.

ಅತ್ತೆ " ಆಗಲಿ. ಒಂದಲ್ಲದಿದ್ದರೆ ಎರಡು ಕೊಡುತ್ತೇನೆ" ಎಂದರು.

ವಾಸುವು ಮಲಗಿದ್ದ ಮುದ್ದಾದ ಮರಿಗಳ ಬಳಿಗೆ ಹೋಗಿ "ಇವುಗಳಲ್ಲಿ ಯಾವುದು ಜಾತಿ ನಾಯಿಯೋ ಕಿವಿ ಹಿಡಿದು ನೋಡುತ್ತೇನತ್ತೆ" ಎಂದನು.

ಸಾವಿತ್ರಮ್ಮನವರು "ಸ್ವಲ್ಪ ದೊಡ್ಡದಾಗಲಿ. ಪರೀಕ್ಷೆ ಮಾಡೋಣ. ಈಗ ಬೇಡ" ಎಂದು ಹೇಳಿದರು.

ಸಾಯಂಕಾಲವಾಗಿತ್ತು. ಕೆಳಗಡೆ ಹಜಾರದಲ್ಲಿ ವಿಮಲೆಯೂ ಶಂಕರನೂ ಕುಳಿತು ಮಾತನಾಡುತ್ತಿದ್ದರು. ಒಂದು ಕೊನೆಯಲ್ಲಿ ಸಾವಿತ್ರಮ್ಮನವರು ಕುಳಿತಿದ್ದರು. ಕುಳಿತಿದ್ದಂತೆಯೇ ಸೋಫಾವನ್ನು ಒರಗಿ ಅವರಿಗೆ ಅರೆನಿದ್ದೆ ಬಂದಿದ್ದಿತು.

ಹಾಗೇ ಯೋಚನೆ ಮಾಡುತ್ತಿದ್ದ ಶಂಕರನು "ವಿಮಲಾ! ನಾನೆಷ್ಟೋ ಯೋಚಿಸಿದ್ದೇನೆ. ಹತ್ತು ಲಕ್ಷ ರೂಪಾಯಿಗಳನ್ನು ಅಪ್ಪ ಹಾಳು ಮಾಡಿರುತ್ತಾರೆಯೇ? ಅವರಾವುದರ ಮೇಲೆಯೋ ಹಾಕಿದ್ದಾರೆಂಬುದೇ ನನಗೆ ತೋರುತ್ತದೆ. ಅವರೇನು ಮಾಡಿದ್ದಾರೆಂಬುದು ತಿಳಿದರೆ ನಾವು ಸುಖವಾಗಿ ರಬಹುದು" ಎಂದು ಹೇಳಿದನು.

ಆ ಮಾತು ವಿಮಲೆಗೆ ಪ್ರಿಯವಾಗಿದ್ದಿತು. ಅವಳು ಅಭಿಮಾನದಿಂದ ಅಣ್ಣನ ಕಡೆಗೆ ನೋಡಿದಳು. ತನ್ನ ಕಷ್ಟಗಳೆಲ್ಲವೂ ತೀರಿದಂತೆಯೇ ಅವಳಿಗೆ ಭಾಸವಾಯಿತು. ಅವನಿನ್ನೇನು ಹೇಳುತ್ತಾನೆಯೋ ಎಂದು ಮೌನವಾಗಿ ಕುಳಿತುಕೊಂಡಳು.

ಶಂಕರನು "ನಾನು ಈ ದಿನ ಕಾಲೇಜಿನ ಕಡೆ ಹೋಗಿದ್ದೆ. ಈ ವರ್ಷ ಡಿಸ್‌ಕಂಟಿನ್ಯೂ ಮಾಡಬೇಕೆಂದಿದ್ದೇನೆ. ಮುಂದಿನ ವರ್ಷ ಬಿ. ಎ. ಮಾಡಿಕೊಳ್ಳೋಣವೆಂದಿದ್ದೇನೆ" ಎಂದನು.

ಅಣ್ಣನ ಆ ಮಾತು ಮೊದಲಿನ ಮಾತಿನಂತೆ ತಂಗಿಗೆ ಪ್ರಿಯವಾಗಲಿಲ್ಲ. ಮೊದಲಿನಿಂದಲೂ ಅಷ್ಟೇ. ಶಂಕರನಿಗೆ ಓದು ಬರಹದಲ್ಲಿ ಆಸಕ್ತಿಯೇ ಇಲ್ಲ. ಅವರಮ್ಮ ಪೇಚಾಡುತ್ತಿದ್ದುದೂ ಇದಕ್ಕಾಗಿಯೇ!

''ಆದರೆ ಮುಂದಿನ ವರ್ಷವಾದರೂ ಅದೊಂದು ಮಾಡಿ ಮುಗಿಸುತ್ತೀಯಲ್ಲ" ಎಂದು ಹೇಳಿದಳು.

ಆ ಮಾತು ಪ್ರಶ್ನೆಯಂತಿದ್ದರೂ ಅವಳ ಅಭಿಪ್ರಾಯವನ್ನು ಸೂಚಿಸುತ್ತಿದ್ದಿತು.

ಅಷ್ಟು ಹೊತ್ತಿಗೆ ಯಾರೋ ಹೊರಗಡೆಯಿಂದ ಬಂದ ಹಾಗಾಯಿತು. ವಿಮಲೆಯು ತಿರುಗಿ ನೋಡಿದಳು. ವೆಂಕಟರಾವ್ ಬಂದನು.

ಅಣ್ಣ ತಂಗಿಯರೇ ಇದ್ದಾಗ ವಿಮಲೆಯು ಹುಡುಗಿಯಂತೆ ಕುಳಿತಿದ್ದಳು. ಹುಡುಗಿಯಂತೆ ಮಾತನಾಡುತ್ತಿದ್ದಳು. ವೆಂಕಟರಾಯನು ಒಳಗೆ ಬಂದೊಡನೆಯೇ ತಾನು ವಯಸ್ಸಾದವಳೆಂಬ ಭಾವನೆಯು ಅವಳಿಗೆ ಬಂದಿತು. ಸರಿಯು, ಸೀರೆಯ ನೆರಿಗೆಗಳನ್ನು ಸರಿಮಾಡಿಕೊಂಡು ಕುಳಿತುಕೊಂಡಳು.

ಅವನೂ ಬಂದು ಕುಳಿತುಕೊಂಡನು.

ಮಾತಿನ ನಡುವೆ ವಿಮಲೆಯು ಆದಿನ ನಿಮ್ಮನ್ನು ನೋಡಿದ ಕೂಡಲೇ ನನಗೆ ಗುರುತು ಸಿಕ್ಕಲಿಲ್ಲ. ಅನಂತರ ನಮ್ಮ ಅಣ್ಣ ಹೇಳಿದ" ಎಂದಳು.

''ನಾವು ಮೊದಲು ಇದೇ ಬೀದಿಯಲ್ಲಿದ್ದೆವು" ಎಂದು ವೆಂಕಟರಾಯನು ಹೇಳಿದನು.

ವಿಮಲೆಯು ''ಹೌದು ! ಬಹಳ ವರ್ಷಗಳಾದುವು. ಅದರಿಂದಲೇ ನನಗೆ ಮರೆತುಹೋಗಿತ್ತು. ನಾವು ಹುಡುಗರಾಗಿದ್ದಾಗ ಎಲ್ಲರೂ ಸೇರಿ ಆಟವಾಡುತ್ತಿದ್ದುದು ನಮ್ಮಣ್ಣ ಹೇಳಿದ ನಂತರ ಜ್ಞಾಪಕಕ್ಕೆ ಬಂದಿತು" ಎಂದಳು.

ವಿಮಲೆಯು ಅವನ ಕಡೆಗೆ ನೋಡಿದಳು. ಅವನು ಒಂದು ಉಲ್ಲನ್ ಪ್ಯಾಂಟ್ ಧರಿಸಿ ಅದರ ಮೇಲೆ ಒಂದು ಸಿಲ್ಕ್ ಬುಷ್‌ಕೋಟು ಧರಿಸಿದ್ದನು. ಅವನ ಗುಂಗುರು ಕೂದಲು, ಅಗಲವಾದ ನಗೆಮೊಗ, ದೊಡ್ಡ ಕಣ್ಣುಗಳು, ಮೃದುವಾಗಿ ಕಂಡು ಬರುವ ಕೈಬೆರಳುಗಳು ನಯವಾದ ಬಿಳಿಯ ಚರ್ಮ

ಇವುಗಳನ್ನು ನೋಡಿದಳು. ಅವನನ್ನು ನೋಡಿ ವಿಮಲೆಗೆ ''ಇವನು ರೂಪ ವಂತ" ಎನ್ನಿಸಿತು. ಅವನ ಪ್ರಿಯವಾದ ಮಾತುಗಳನ್ನು ಕೇಳಿ ''ಇವನು ಒಳ್ಳೆಯವನು" ಎನ್ನಿಸಿತು. ಅವಳ ಮನಸ್ಸು ಅವನನ್ನು ಮೆಚ್ಚಿಕೊಂಡಿತು.

''ಇಲ್ಲಿಂದ ನೀವೆಲ್ಲಾ ಎಲ್ಲಿಗೆ ಹೊರಟು ಹೋದಿರಿ?" ಎಂದು ಕೇಳಿದಳು.

''ನಮ್ಮ ತಂದೆಗೆ ರಿಟೈರ್ ಆಗುತ್ತಲೇ ಅವರು ಚಿತ್ರದುರ್ಗಕ್ಕೆ ಹೋದರು. ಅದೇ ನಮ್ಮ ಊರು. ನಾನು ಬಿ. ಎ. ಆಗುವವರೆವಿಗೆ ಮೈಸೂ ರಿನಲ್ಲಿದ್ದೆ. ಬಿ. ಎಲ್. ಮಾಡಬೇಕೆಂದಿತ್ತು. ಅಷ್ಟರಲ್ಲಿ ಬಿಸ್‌ನೆಸ್‌ಗೆ ಬಂದು ಬಿಟ್ಟೆ. ನಾನು ಬಿಸ್‌ನೆಸ್ ಆರಂಭಿಸಿದಂದಿನಿಂದ ಬೆಂಗಳೂರಿನಲ್ಲಿಯೇ ಇದ್ದೇನೆ"

''ಅಲ್ಲ. ವೆಂಕಟೂ. ಬೆಂಗಳೂರಿಗೆ ಬಂದನಂತರ ನೀನೇಕೆ ನಮ' ಮನೆಗೆ ಬರಲಿಲ್ಲ. ನಾವೆಲ್ಲಾ ನಿನಗೆ ಮರೆತು ಹೋಗಿದ್ದಿತೋ ಏನೋ ? ಎಂದು ಶಂಕರನು ಕೇಳಿದನು.

ಆ ಮಾತಿನಿಂದ ವೆಂಕಟರಾಯನಿಗೆ ನಾಚಿಕೆಯಾಯಿತು. ತಾನು ಮೊದಲೇ ಬಂದು ಇವರುಗಳನ್ನು ನೋಡಬೇಕಾಗಿದ್ದಿತೆನ್ನಿಸಿತು. ಅವನು ಉತ್ತರ ಹೇಳಲಾರದೇ ತಲೆ ತಗ್ಗಿಸಿ ತಾನು ಹಾಕಿಕೊಂಡಿದ್ದ ಷೂ ನೋಡಲಾ ರಂಭಿಸಿದನು. ತುಸುನಾಚಿಕೆಯಿಂದಿದ್ದ ಅವನ ಮುಖವೂ ಚೆನ್ನಾಗಿಯೇ ಇದ್ದಿತು.

ಸಾವಿತ್ರಮ್ಮನವರು ಕೋಲೂರಿಕೊಂಡು ನಿಧಾನವಾಗಿ ನಡೆಯುತ್ತಾ ಬಂದರು. ಕುಳಿತಿದ್ದ ವೆಂಕಟರಾಯನು ಮೇಲೆದ್ದು ಅವರನ್ನು ಕುಳ್ಳಿರಿಸಿ ಅವರ ಪಕ್ಕದಲ್ಲಿ ತಾನೂ ಕುಳಿತು ಕೊಂಡನು.

ವಿಮಲೆಯು ನಗುತ್ತಾ ''ಇವರಾರು ಗೊತ್ತೇ ?" ಎಂದಳು.

ವೆಂಕಟರಾಯನು ಗೊತ್ತು ಇವರು ನಿಮ್ಮ ಸೋದರತ್ತೆಯಲ್ಲವೇ ? ಮೊನ್ನೆ ಸುಬ್ಬಣ್ಣನವರು ಹೇಳಿದರು" ಎಂದನು.

ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ''ಸ್ವಲ್ಪ ಸ್ವಲ್ಪ ಜ್ಞಾಪಿಸಿದರೆ ನನಗೆಲ್ಲವೂ ಜ್ಞಾಪಕಕ್ಕೆ ಬರುತ್ತದೆ. ನಾವೆಲ್ಲರೂ ನಿಮ್ಮನ್ನು ವಿಮ್ಮು ಎಂದ ಲ್ಲವೇ ಕರೆಯುತ್ತಿದ್ದುದು ?" ಎಂದನು.

ಅವನಾ ಮಾತು ಹೇಳಿದ ಕೂಡಲೇ ವಿಮಲೆಯ ಮುಖವು ಕೆಂಪಾಯಿತು. ಅವಳು ದೊಡ್ಡವಳಾದ ಮೇಲೆ ಯಾರೂ ಅವಳನ್ನು ಹಾಗೆ ಕರೆದಿರಲಿಲ್ಲ. ಅದರಲ್ಲಿಯೂ ವಯಸ್ಸಾದ ಗಂಡಸು ಹಾಗೆ ಕರೆದಿರಲಿಲ್ಲ.

ಸಾವಿತ್ರಮ್ಮನವರು "ಶಂಕರ್ ! ಇವರಾರು ?" ಎಂದು ತಮ್ಮನ್ನು ಸನ್ಮಾನಮಾಡಿದ ವೆಂಕಟರಾಯನು ಯಾರೆಂದು ವಿಚಾರಿಸಿದರು.

ಶಂಕರನು ಹೇಳಿದನು. ಅವನಿದ್ದ ಮನೆ, ಅವನ ತಂದೆ ತಾಯಿ ಎಲ್ಲವನ್ನೂ ಅತ್ತೆಗೆ ವಿವರಿಸಿ ಹೇಳಿದನು. ಅವರಿಗೆ ಯಾವುದೂ ನೆನಪಿಗೆ ಬರಲಿಲ್ಲ.

ಅದನ್ನು ನೋಡಿ ವೆಂಕಟರಾಯನಿಗೆ ಆಶ್ಚರ್ಯವಾಯಿತು. ಅವನೇನೋ ಮಾತನಾಡುವಷ್ಟರಲ್ಲಿ ವಿಮಲೆಯು ಕಣ್ಣು ಸನ್ನೆ ಮಾಡಲು ಸುಮ್ಮನಾದನು.

ವಿಮಲೆಯು ಎದ್ದು ಹೋಗಿ ಎಲ್ಲರಿಗೂ ಸ್ವಲ್ಪ ಸ್ವಲ್ಪ ಕಾಫಿಯನ್ನು ತಂದು ಕೊಟ್ಟಳು. ಎಲ್ಲರೂ ಕುಡಿದರು.

ಕಾಫಿಯನ್ನು ಕುಡಿದ ಮೇಲೆ ವೆಂಕಟರಾಯನು ಬಹಳ ಹೊತ್ತು ಇರಲಿಲ್ಲ.

ಅವನು "ಬಾಂಡುಗಳೇನಾದರೂ ಸಿಕ್ಕಿದುವೋ ?" ಎಂದು ಕೇಳಿದನು.

ಶಂಕರನು "ನಾನು ಹೇಳಲಿಲ್ಲವೇ ? ಮನೆಯಲ್ಲಿ ಇಲ್ಲ. ಇತರ ಬ್ಯಾಂಕುಗಳಲ್ಲಿ ವಿಚಾರಿಸುತ್ತೇನೆಂದಿರಲ್ಲಾ. ಅದೇನಾದರೂ ಆಗುತ್ತದೆಯೇನೋ ?" ಎಂದು ಹೇಳಿ ಶುಷ್ಕವಾಗಿ ನಕ್ಕನು.

"ಲಿಂಗಪ್ಪನವರು ಈದಿನ ಕೆಲವು ಬ್ಯಾಂಕುಗಳಿಗೆ ಟೆಲಿಫೋನ್ ಮಾಡಿದರು. ನಾಳೇ ಸಾಯಂಕಾಲದೊಳಗಾಗಿ ಎಲ್ಲ ಕಡೆಯೂ ಹುಡುಕಿ ಇದೆ ಇಲ್ಲವೆಂಬುದನ್ನು ನಿಶ್ಚಯ ಮಾಡಿಬಿಡುತ್ತೇವೆ"

ವರದೆಯು ಜವಹರರ ವರ್ಣಚಿತ್ರವನ್ನು ಬರೆಯುತ್ತಿದ್ದಳು. ಕಣ್ಣನ್ನು ತಿದ್ದುತ್ತಿರುವಾಗ ಕುಂಚದಿಂದ ಬಣ್ಣವು ಹಾರಿ ಕಣ್ಣಿನ ಕೆಳಗೆ ಬಿದ್ದುಬಿಟ್ಟಿತು. ಅವಳು ಅದೆಲ್ಲವನ್ನೂ ಅಲ್ಲಿಯೇ ಬಿಟ್ಟು ಬಿಟ್ಟು ಹಜಾರಕ್ಕೆ ಬಂದು ಒಂದು ಕಡೆ ಕುಳಿತು ಕೊಂಡಳು.

ಅವಳ ಹಿಂದೆಯೇ ಶೀಲೆಯೂ ವಾಸುವೂ ಬಂದರು.

ವಾಸುವು "ಅಕ್ಕಾ! ವರದೆಯು ಜವಹರಲಾಲರನ್ನು ಅಳಿಸಿಬಿಟ್ಟಳು." ಎಂದು ಹೇಳಿದನು.

ವರದೆಯು ಕೋಪದಿಂದ ಬುಸುಗುಟ್ಟುತ್ತಿದ್ದಳು.

ವಿಮಲೆಯು " ಜವಹರಲಾಲರು ಸ್ವಲ್ಪಕ್ಕೆ ಅಳುವಂತಹವರಲ್ಲ. ಅವರು ಅಳುವಂತಹ ಕೆಲಸವೇನಾಯಿತು" ಎಂದು ಕೇಳಿದಳು.

ಶೀಲೆಯು ವಿಷಯವೆಲ್ಲವನ್ನೂ ಹೇಳಿದಳು.

ಅಲ್ಲಿದ್ದವರೆಲ್ಲರೂ ನಕ್ಕರು. ವಿಮಲೆಯೂ ನಕ್ಕಳು.

ಆದರೆ ಮರುಕ್ಷಣದಲ್ಲಿಯೇ ಗಂಭೀರವಾಗಿ "ಹಾಗೆಲ್ಲಾ ಅನ್ನಬಾರದು. ಯಾರೇನು ಮಾಡಲಾಗುತ್ತದೆ? ಒಂದೊಂದು ವೇಳೆ ಅಕಸ್ಮಾತ್ ಆ ರೀತಿ ಯಾಗುವುದುಂಟು" ಎಂಬುದಾಗಿ ಹೇಳಿದಳು.

ವೆಂಕಟರಾಯನು ಹೊರಟು ಹೋದನು. ಹೋಗುತ್ತಾ ವಿಮಲೆಯ ಕಡೆಗೊಮ್ಮೆ ನೋಡಿದನು.

ಅವನು ಹೊರಗೆ ಹೋಗಿ ಬಲು ಹೊತ್ತಾದರೂ ಸಹ ಅವಳು ಆ ನೋಟವನ್ನು ಮರೆಯಲಿಲ್ಲ. ಅವಳ ಮನಸ್ಸಿನ ವೀಣೆಯ ತಂತಿಯನ್ನು ಆ ನೋಟವು ಮಿಾಟುತ್ತಲೇ ಇದ್ದಿತು.

ಸುಮಾರು ರಾತ್ರಿ ಎಂಟೂವರೆ ಗಂಟೆಯಲ್ಲಿ ವರದಳು ಬಂದು ಅಕ್ಕನನ್ನು ಊಟಕ್ಕೆ ಕರೆದಾಗ ವಿಮಲೆಯ ಕೈಯಲ್ಲಿ ಪುಷ್ಪದಾನಿ ಇದ್ದಿತು. ಆ ದೊಡ್ಡ ಗಾಜಿನ ಪಾತ್ರೆಯು ಅವಳ ಎದೆಯ ಮೇಲೆ ಇದ್ದಿತು. ಗುಲಾಬಿ ಹೂಗಳು ಅವಳ ಮೃದುವಾದ ಕೆನ್ನೆಗಳ ಬಳಿ ಇದ್ದವು. ತಂಗಿಯು ಕರೆಯುತ್ತಲೂ ಅಕ್ಕನು ಎಚ್ಚರಗೊಂಡು ಸರ್‍ರನೆ ಆ ಪುಷ್ಪದಾನಿಯನ್ನು ಕೆಳಗಿಟ್ಟಳು. ಆ ಭರದಲ್ಲಿ ಮುಳ್ಳೊಂದು ಅವಳ ಕೆನ್ನೆಗೆ ತಗುಲಿತು.

ಅದನ್ನು ಯಾರೂ ನೋಡದಿರಲೆಂದು ಆ ದಿನ ವಿಮಲೆಯ ಕೈಯು ಬಹಳ ಹೊತ್ತು ಆ ಕೆನ್ನೆಯ ಮೇಲೆಯೇ ಇದ್ದಿತು.

೩

ವಿಮಲೆಯು ತನ್ನ ತಂಗಿಯ ಜೊಡನೆಯೂ ಅತ್ತೆಯೊಡನೆಯೂ ಕುಳಿತು ಮಾತನಾಡುತ್ತಿದ್ದಳು.

ಶಂಕರನು ಅವಸರವಸರವಾಗಿ ಬಂದು ತಂಗಿಯನ್ನು ಕರೆದನು.

ಅವರಿಬ್ಬರೂ ಏಕಾಂತ ಸ್ಥಳದಲ್ಲಿ ಹೋಗಿ ಕುಳಿತುಕೊಂಡನಂತರ ಶಂಕರನು ''ವಿಮಲಾ! ನಾವೀ ಮನೆಯನ್ನು ಬಿಟ್ಟು ಬಿಡಬೇಕಾಗುತ್ತದೆ'' ಎಂದು ಹೇಳಿದನು.

ಈ ಪೆಟ್ಟು ಬೀಳಬಹುದೆಂದು ವಿಮಲೆಯು ಸಂದೇಹಿಸಿದ್ದಳು. ನಿರೀಕ್ಷಿತವಾಗಿದ್ದರೂ ಅದು ವಜ್ರಾಘಾತದಂತೆ ಬಿದ್ದಿತು. ಅವಳ ಮನಸ್ಸು ಕುಂದಿತು. ಮುಖವು ತೇಜೋಹೀನವಾಯಿತು.

ಕುಗ್ಗಿದ ಧ್ವನಿಯಿಂದ ''ಹಾಗಾದರೆ ನಾವೆಲ್ಲಿ ಹೋಗುವುದು?'' ಎಂದು ಕೇಳಿದಳು.

ಅವನು ಕೂಡಲೇ "ನಾನೂ ಅದನ್ನೇ ಯೋಚನೆ ಮಾಡುತ್ತಿದ್ದೇನೆ" ಎಂದನು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

ಅನಂತರ ವಿಮಲೆಯು ''ಇಷ್ಟು ದಿನವೂ ಇಲ್ಲದಿರುವುದು ಈ ದಿನವೇನಾಯಿತು?" ಎಂದಳು.

''ಮೊನ್ನೆ ವೆಂಕಟು ಹೇಳಲಿಲ್ಲವೇ ? ಲಿಂಗಪ್ಪನವರು ಎಲ್ಲ ಕಡೆಯೂ ವಿಚಾರಿಸಿದರು. ಅಪ್ಪ ಆ ಹತ್ತು ಲಕ್ಷ ರೂಪಾಯಿಗಳನ್ನು ಏನು ಮಾಡಿದರೋ ಗೊತ್ತಾಗಲಿಲ್ಲ. ಈ ಮನೆಯ ಮೇಲೆ ಅಷ್ಟು ಲಕ್ಷ ರೂಪಾಯಿ

ತೆಗೆದುಕೊಂಡಿದ್ದಾಳೆ. ಅದರಿಂದ ಇದನ್ನು ಬ್ಯಾಂಕಿಗೆ ಬಿಟ್ಟು ಕೊಡಬೇಕೆಂದು ಲಿಂಗಪ್ಪನವರು ಹೇಳಿದರು?''

''ಈ ಮನೆಯನ್ನು ಮಾರಿಬಿಟ್ಟು ಬ್ಯಾಂಕಿನ ಸಾಲವನ್ನು ತೀರಿಸಿ ಉಳಿದ ಹಣಕ್ಕೆ ನಾವೊಂದು ಬೇರೆಯ ಮನೆಯನ್ನು ತೆಗೆದುಕೊಂಡರೆ?''

ಆ ಮಾತನ್ನಾಡುವಾಗ ಅವಳಲ್ಲಿ ಸ್ವಲ್ಪ ಉತ್ಸಾಹವು ಕಂಡು ಬಂದಿತು.

ಅವಳಣ್ಣನು ಒಂದು ನಗುವನ್ನು ನಕ್ಕನು. ಆ ನಗುವು ಅಷ್ಟೇ ಉತ್ಸಾಹ ರಹಿತವಾಗಿದ್ದಿತು.

''ಹಾಗಲ್ಲ, ವಿಮಲಾ. ಈಗ ಆಸ್ತಿಪಾಸ್ತಿಗಳ ಬೆಲೆಯು ಬಹಳವಾಗಿ ಇಳಿದಿದೆ. ಈ ಮನೆಯು ಸುಮಾರು ಎರಡು ಲಕ್ಷವಾಗುತ್ತದೆನ್ನುತ್ತಾರೆ. ಆದರೆ ಇದನ್ನು ಮಾರಿದರೆ ಈಗ ಒಂದು ಲಕ್ಷ ಬರುವುದು ಸಹ ಕಷ್ಟ. ಅದರಿಂದ ಮಾರಬೇಡಿ-ಎನ್ನುತ್ತಾರೆ"

''ಮಾರದೇ ಇರುವುದರಿಂದ ನಮಗೇನು ಲಾಭ?"

''ನಮ್ಮ ತಂದೆ ಹಣವನ್ನು ಪೋಲು ಮಾಡಿಲ್ಲವೆಂದು ಲಿಂಗಪ್ಪನವರಿಗೆ ಧೃಢವಾದ ವಿಶ್ವಾಸ. ಅದರಿಂದ ಅವರು ಮನೆ ಮಾರಬೇಡಿ. ಬ್ಯಾಂಕಿನ ಸ್ವಾಧೀನಕ್ಕೆ ಬಿಟ್ಟಿರಿ-ಎನ್ನುತ್ತಾರೆ. ಬ್ಯಾಂಕಿನವರು ಮನೆಯನ್ನು ಬಾಡಿಗೆಗೆ ಕೊಟ್ಟು ಬಾಡಿಗೆಯನ್ನು ಬಡ್ಡಿಗೆ ಕಟ್ಟಿಕೊಳ್ಳುತ್ತಾ ಬರುತ್ತಾರಂತೆ. ಆಗ ಸಾಲ ತೀರಿಸಲು ಐದು ವರ್ಷಗಳ ಟೈಂ ಕೊಡಿಸಲು ಸಾಧ್ಯವಾಗುತ್ತದೆಯಂತೆ. ಅಷ್ಟರೊಳಗೆ ಎಲ್ಲಿಯಾದರೂ ಅಪ್ಪ ಆ ಹಣ ಏನು ಮಾಡಿದರೆಂಬುದು ಗೊತ್ತಾದರೆ ಈ ಮನೆಯನ್ನು ಉಳಿಸಿಕೊಳ್ಳಬಹುದು. ಒಂದು ವೇಳೆ ಅದಾಗದಿದ್ದರೂ ಇನ್ನೆರಡು ಮೂರು ವರ್ಷಗಳಿಗೆ ಆಸ್ತಿಯ ಬೆಲೆಗಳು ಹೆಚ್ಚುತ್ತವೆ. ಆಗ ಮಾರುವುದು ಲಾಭಕರವೆಂದು ಹೇಳುತ್ತಾರೆ."

"ಈ ಮನೆಯನ್ನು ಬಿಟ್ಟು ಎಲ್ಲಿಗೆ ಹೋಗೋಣವೆಂದು ಯೋಚಿಸಿದ್ದೀಯಣ್ಣಾ"

"ಕೆಂಗೇರಿಯ ಮನೆಗೆ ಹೊರಟು ಹೋಗೋಣವೆಂದು ಅನ್ನಿಸುತ್ತದೆ"

ವಿಮಲೆಯು ಒಂದು ನಿಮಿಷ ಕಾಲ ಯೋಚಿಸಿದಳು. ಎಂತಹ ಸ್ಥಿತಿಯು ಬಂದಿತು. ನಾಲ್ಕೈದು ಎಕರೆಗಳಷ್ಟು ಕಾಪೌಂಡು. ದೊಡ್ಡ ದೊಡ್ಡ ಮರಗಳು. ಹಸುರಾದ ಹುಲ್ಲು. ನಡುವೆ ಸೊಗಸಾದ ದಾರಿಗಳು.

ಅವುಗಳ ಪಕ್ಕದಲ್ಲಿ ನಗುತ್ತಿರುವ ಪುಟ್ಟ ಪುಟ್ಟ ಹೂಗಳನ್ನು ಒಳಗೊಂಡ ಗಿಡ ಗಳು. ದಾರಿಯ ನಡುವೆ ಅಲ್ಲಲ್ಲಿ ಬಗ್ಗಿಸಿದ ಸಲಾಕಿಗಳ ಮೇಲೆ ಹಬ್ಬಿದ ಗುಲಾಬೀ ಮತ್ತು ಜಾಜಿ ಬಳ್ಳಿಗಳು. ದೊಡ್ಡ ಬಂಗಲೆ. ಎಲ್ಲಾ ಕೋಣೆ ಗಳಲ್ಲಿಯೂ ರತ್ನ ಕಂಬಳಿಗಳು. ಸೋಫಾಗಳು. ಕುರ್ಚಿಗಳು. ನಕ್ಷತ್ರ ತುಲ್ಯವಾದ ಸೊಗಸಾದ ದೀಪಗಳು. ಮನೆಯಲ್ಲಿ ಎಲ್ಲ ಕೆಲಸಗಳಿಗೂ ವಿದ್ಯುತ್ ಸೌಕರ್ಯ. ಮಲಗಿಕೊಳ್ಳಲು ದೊಡ್ಡ ದೊಡ್ಡ ಮಂಚಗಳು. ಫ್ಯಾನ್‌ಗಳು. ಕರೆದಾಗ ಬಂದು ನಿಲ್ಲುವ ಆಳುಕಾಳುಗಳು. ಇಂತಹ ಸುಖ ಭವನವನ್ನು ಬಿಟ್ಟು ಹೋಗಬೇಕು.

ಅದೂ ಎಲ್ಲಿಗೆ? ಕೆಂಗೇರಿಯ ಬಳಿ ಇರುವ ಒಂದು ತೋಪಿಗೆ. ಅಮ್ಮ ಬದುಕಿದ್ದಾಗ ಯಾವಾಗಲೋ ಒಂದು ಬಾರಿ ಅಲ್ಲಿ ಹೋಗಿ ಬಿಸೀಬೇಳೆ ಹುಳಿಯನ್ನ ಮೊಸರನ್ನಗಳನ್ನು ತಿಂದುಕೊಂಡು ಬಂದ ನೆನಪು ವಿಮಲೆಗೆ ಇದ್ದಿತು. ಅಲ್ಲಿಯೂ ನೆರಳು ಕೊಡುವ ದೊಡ್ಡ ಮರಗಳಿವೆ. ಮೊಳಕಾ ಲುದ್ದ ಬೆಳೆದ ಹುಲ್ಲುಗಾವಲಿದೆ. ಆ ದಿನ ವಿಮಲೆಯೂ ಅವಳ ಮನೆಯ ವರೂ ಊಟ ಮಾಡಿದ ಮೇಲೆ ಕೈ ತೊಳೆದುಕೊಂಡು ನೀರು ಕುಡಿದ ಸಣ್ಣ ಹಳ್ಳವನ್ನು ನೆನೆದುಕೊಂಡಾಗಲಂತೂ ಅವಳಿಗೆ ಬಹಳ ಸಂತೋಷವಾಗು ತ್ತಿತ್ತು. ಆದರೆ ಅಲ್ಲೇ ಹೋಗಿ ವಾಸ ಮಾಡುವುದೆಂದರೆ ಅದು ಅವಳ ಮನಸ್ಸಿಗೆ ಬಹಳ ದುಃಖವಾಯಿತು. ಇಂತಹ ಮನೆಯನ್ನು ಬಿಟ್ಟು ಹಗಲಿ ನಲ್ಲಿ ಸೂರ್ಯನೂ ರಾತ್ರಿಯಲ್ಲಿ ನಕ್ಷತ್ರಗಳೂ ಬೆಳಗುವ ಆ ಮನೆಯಲ್ಲಿರ ಬೇಕೇ ?

"ಏನು, ವಿಮಲಾ. ನೀನು ಮಾತೇ ಆಡಲಿಲ್ಲವಲ್ಲ?"

ಅವಳು ಮಾತನಾಡುವುದರಲ್ಲಿ ವೆಂಕಟರಾಯನು ಬಂದನು.

ಬಂದವನೇ "ಏನು ಅಣ್ಣಾ ತಂಗಿಯರು ಏನೋ ಯೋಚನೆ ಮಾಡು ತ್ತಿರುವಂತೆ ಇದೆ" ಎಂದನು.

ಶಂಕರನು "ಅದೇ, ಲಿಂಗಪ್ಪನವರು ಮನೆಯನ್ನು ಬಿಡಬೇಕೆಂದು ಹೇಳಿದ ವಿಷಯವನ್ನು ವಿಮಲೆಗೆ ಹೇಳಿದೆ. ಅವಳಾ ವಿಷಯದಲ್ಲಿ ಚಿಂತಾ ಮಗ್ನಳಾಗಿದ್ದಾಳೆ" ಎಂದು ಹೇಳಿದನು.

ಅವನಾ ರೀತಿ ಹೇಳಿದ ಕೂಡಲೇ ವೆಂಕಟರಾಯನಿಗೆ "ನಾನೀ ಸನು

ಯದಲ್ಲಿ ಬರದೇ ಇದ್ದಿದ್ದರೆ ಚೆನ್ನಾಗಿದ್ದಿತು" ಎನ್ನಿಸಿತು. ಅವನೇನೂ ಹೇಳದೇ ಒಂದು ದೀರ್ಘವಾದ ನಿಟ್ಟುಸಿರು ಬಿಟ್ಟನು.

ಗಳಿಗೆಯು ಹೊತ್ತು ಯಾರೂ ಮಾತನಾಡಲಿಲ್ಲ.

ಅನಂತರ ವೆಂಕಟರಾಯನು "ಲಿಂಗಪ್ಪನವರೂ ಸಹ ಬಹಳ ಪೇಚಾಡುತ್ತಾರೆ. ದುರದೃಷ್ಟವೆಂದರೆ ಇದಕ್ಕಿಂತಲೂ ಭಯಂಕರವಾದ ದುರದೃಷ್ಟವನ್ನು ನಾನು ನೋಡಿಯೇ ಇಲ್ಲ" ಎಂದು ಪೇಚಾಡಿಕೊಂಡನು.

"ನಾವಾಗಲೇ ಕೆಂಗೇರಿ ಮನೆಗೆ ಹೋಗಬೇಕೆಂದು ತೀರ್ಮಾನ ಮಾಡಿಬಿಟ್ಟಿದ್ದೇನೆ" ಎಂದು ವಿಮಲೆಯು ನಗುತ್ತಾ ಹೇಳಿದಳು.

ಅದಕ್ಕೆ ವೆಂಕಟರಾಯನು "ನೀವೊಳ್ಳೆಯ ಸ್ಪೋರ್ಟ್, ವಿಮಲಾ. ಇನ್ನಾರಿಗಾದರೂ ಈ ಸ್ಥಿತಿಯು ಬಂದಿದ್ದರೆ ಅವರ ಎದೆಯು ಒಡೆದು ಹೋಗುತ್ತಿದ್ದಿತು" ಎಂದು ಹೇಳಿದನು.

ಅಣ್ಣ ತಂಗಿಯರನ್ನು ಅವನು ಪ್ರಶಂಸೆ ಮಾಡಿದರೂ ಸಹ ಈ ಪರಿಸ್ಥಿತಿಯಿಂದ ಅವರೆದೆಯು ಒಡೆದು ಹೋಗಿದೆ ಎಂದೇ ವೆಂಕಟರಾಯನು ಭಾವಿಸಿದ್ದನು. ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತನಾಡುತ್ತಾ ಇದ್ದು ಅವನು ಹೊರಟು ಹೋದನು.

ಅಣ್ಣ ತಂಗಿಯರು ತಮ್ಮ ಮಾತನ್ನು ಮುಂದುವರಿಸಿದರು.

ವಿಮಲೆಯು "ಈವಾಗ ಇವೆಲ್ಲವನ್ನೂ ಯೋಚಿಸಿ ಫಲವೇನಣ್ಣಾ. ಅಪ್ಪನು ಸಾಯುವ ಮೊದಲೇ ನಾವು ನಮ್ಮ ಹಣಕಾಸಿನ ಸ್ಥಿತಿಯನ್ನು ಸರಿಯಾಗಿ ತಿಳಿದು ಕೊಳ್ಳಬೇಕಾಗಿತ್ತು. ಆಗಲಂತೂ ನಾವು ಹುಡುಗರು. ತಿಳಿದು ಕೊಳ್ಳಲಾಗಲಿಲ್ಲವೆಂದರೆ ಸರಿ. ಅಮ್ಮ ಸಾಯುವ ಕಾಲಕ್ಕಾದರೂ ನಾವು ತಿಳಿದು ಕೊಳ್ಳದೇ ಇದ್ದುದನ್ನು ಯಾರೂ ಒಪ್ಪಲಾರರು" ಎಂದಳು.

ಸ್ವಲ್ಪ ತಡೆದು ಪುನಃ "ಅದು ಹೇಗಾದರೂ ಇರಲಿ. ಈಗ ಏನಿದೆಯೋ ಅದಕ್ಕೆ ಸರಿಯಾಗಿ ನಡೆದುಕೊಳ್ಳಬೇಕು. ಈಗ ಹಳೆಯುದೆಲ್ಲವನ್ನೂ ಚಿಂತಿಸಿ ಏನುತಾನೇ ಮಾಡಲಾಗುತ್ತದೆ" ಎಂದಳು.

ಶಂಕರನು "ಕೆಲವು ಬಾರಿ ನೀನು ವಿವೇಕದಿಂದ ಮಾತನಾಡುತ್ತೀಯೆ, ವಿಮಲಾ" ಎಂದನು.

ವಿಮಲೆಯು ವಿವೇಕದಿಂದಲೇ ಮಾತನಾಡುತ್ತಿದ್ದಳು. ವೆಂಕಟರಾ

ಯನು ಇರುವವರೆವಿಗೆ ಅವಳ ಮನಸ್ಸು ಡೋಲಾಯಮಾನವಾಗಿದ್ದಿತು. ಅವ ನುಕಣ್ಮರೆಯಾಗುತ್ತಲೂಕರ್ತವ್ಯ ದೃಷ್ಟಿಯು ಅವಳಿಗೆ ಬಂದಿದ್ದಿತು. ತಾನೀಗ ವಿವೇಕದಿಂದಲೂ ಸಹನೆಯಿಂದಲೂ ಇರಬೇಕೆಂದು ಅವಳಿಗೆ ತೋರುತ್ತಿದ್ದಿತು. ಅಣ್ಣನಿಗೆ, ತಮ್ಮನಿಗೆ, ತಂಗಿಯರಿಗೆ, ಮುದಿ ಸೋದರತ್ತೆಗೆ ತಾನು ಮಾಡಬೇಕಾದ ಕರ್ತವ್ಯವೆಲ್ಲವನ್ನೂ ಮಾಡಬೇಕು.

ತನ್ನ ತಾಯಿಯು ಬದುಕಿದ್ದರೆ ಆಕೆ ಏನು ಮಾಡುತ್ತಿದ್ದಳೋ ಅದನ್ನು ಮಾಡಬೇಕೆಂದು ಅವಳ ಮನಸ್ಸು ಅವಳನ್ನು ಎಚ್ಚರಿಸುತ್ತಿತ್ತು.

''ನಿನ್ನ ಕಟ್ಟ ಕಡೆಯ ನಿರ್ಧರವೇನಣ್ಣಾ'' ಎಂದು ಕೇಳಿದಳು.

''ಅದನ್ನೇ ಇನ್ನೂ ಯೋಚಿಸುತ್ತಿದ್ದೇನೆ, ವಿಮಲಾ! ಕೆಂಗೇರಿ ಮನೆಗೆ ಹೋಗೋಣವೇ ಅಥವಾ ಯಾವುದಾದರೂ ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದು ಕೊಳ್ಳೋಣವೇ ಎಂದು"

ಆ ವಿಷಯದಲ್ಲಿ ವಿಮಲೆಯು ಹಟವನ್ನು ಮಾಡಿದಳು.

''ಅದೆಲ್ಲಾ ಬೇಡಣ್ಣಾ! ನಮ್ಮಲ್ಲಿರುವ ಅಲ್ಪ ಸ್ವಲ್ಪ ಬೆಳ್ಳಿ ಬಂಗಾರ ಗಳನ್ನು ಮಾರಿ ಬಿಡೋಣ. ಅದೇ ಕೆಂಗೇರಿ ಮನೆಯನ್ನು ರಿಪೇರಿ ಮಾಡಿಸಿ ಕೊಂಡು ಅಲ್ಲಿಗೇ ಹೊರಟು ಹೋಗೋಣ. ಒಂದು ಬಾರಿ ರಿಪೇರಿ ಮಾಡಿಸಿ ಕೊಂಡರೆ ಅನಂತರ ಖರ್ಚೇನೂ ಇರುವುದಿಲ್ಲ. ಅದಿಲ್ಲದೆ ಬಾಡಿಗೆ ಮನೆ ಯನ್ನು ತೆಗೆದುಕೊಂಡರೆ ತಿಂಗಳು ತಿಂಗಳಿಗೂ ಬಾಡಿಗೆ ಕೊಡುವುದೆಲ್ಲಿಂದ? ಏನಾದರೂ ಕಷ್ಟ ಬಂದು ಬಾಡಿಗೆ ಕೊಡುವುದಕ್ಕಾಗದಿದ್ದರೆ ಬೀದಿಯಲ್ಲಿ ನಿಲ್ಲಬೇಕಾಗುತ್ತದೆ" ಎಂದಳು.

''ನೀನಾ ಮನೆಯನ್ನು ನೋಡಿದ್ದೀಯೇನು?''

''ಯಾವಾಗಲೋ ನೋಡಿದ ಜ್ಞಾಪಕವಿದೆ. ಅಲ್ಲಿ ಮನೆಯೇ ಇಲ್ಲ. ಒಂದು ಗುಡಿಸಲು ಇದೆ-ಎಂದುಕೋ. ನಾವು ಅಲ್ಲಿಯೇ ಹೋಗಿರೋಣ. ಏನಿಲ್ಲದಿದ್ದರೂ ದೊಡ್ಡ ದೊಡ್ಡ ಮರಗಳಾದರೂ ಇದೆಯೋ ಇಲ್ಲವೋ? ಅವುಗಳ ಕೆಳಗೇ ವಾಸಮಾಡೋಣ. ಎಷ್ಟೋ ಜನರು ಮನೆಯಿಲ್ಲದೇ ಬೀದಿ ಯಲ್ಲಿಯೇ ವಾಸ ಮಾಡುವುದಿಲ್ಲವೇ? ನಾವೂ ಅವರಂತೆಯೇ ನಿರ್ಗತಿಕರು. ನಮಗೇನಿದೆ?" ಎಂದಳು.

''ಬೆಂಗಳೂರಿಗೆ ದೂರವಾಗುವುದಿಲ್ಲವೇ? ವಿಮಲಾ ''

"ಬೆಂಗಳೂರಿನಲ್ಲಿ ನಮಗೇನು ಕೆಲಸ ಅಣ್ಣ! ನಮಗೆ ಬೆಂಗಳೂರು ಬಿಟ್ಟು ಹೋಗಬೇಕೆಂದಿದೆಯೋ? ಬೆಂಗಳೂರೇ ನಮ್ಮನ್ನು ಕಳಿಸುತ್ತಿದೆ. ನಾವು ಹೆಂಗಸರು. ನಾವು ಅಲ್ಲಿಂದ ಇಲ್ಲಿಗೆ ಬರಬೇಕಾಗಿಲ್ಲ. ಸದ್ಯದಲ್ಲಿ ಪರಿಸ್ಥಿತಿಗಳು ಸರಿಹೋಗುವವರೆವಿಗೆ ವರದಾ ಶೀಲೆಯರನ್ನು ನಾನು ಸ್ಕೂಲಿಗೆ ಕಳಿಸುವುದಿಲ್ಲ. ನನಗೂ ಅತ್ತಿಗೂ ಇಲ್ಲಿ ಕೆಲಸವೇ ಇಲ್ಲ. ಅಲ್ಲಿಯೋ ಒಂದು ಮಿಡಲ್ ಸ್ಕೂಲ್ ಇದೆ. ವಾಸು ಅಲ್ಲಿಗೆ ಹೋಗಲಿ. ನೀನು ಬೇಕಾದರೆ ಒಂದು ರೈಲು ಪಾಸು ತೆಗೆದುಕೋ. ಬೇಕಾದಾಗ ಹೋಗಿ ಬರಬಹುದು"

ಶಂಕರನಿಗೆ ಬೆಂಗಳೂರು ಬಿಟ್ಟು ಹೋಗುವುದು ಇಷ್ಟವಿರಲಿಲ್ಲ. ಕೆಂಗೇರಿ ಮನೆಗೆ ಹೋಗುವುದೆಂದರೆ ತಂಗಿಯು ಒಪ್ಪುವುದಿಲ್ಲವೆಂದು ಮೊದಲು ಆ ಮಾತು ಆಡಿದ್ದನು. ಆದರೆ ಈಗ ವಿಮಲೆಯು ಅಲ್ಲಿಗೇ ಹೋಗಬೇಕೆಂದು ಹಠ ಮಾಡಿದ್ದಾಳೆ–

ಅವನು "ಆದರೂ ಬೆಂಗಳೂರು ಬಿಟ್ಟು ಹೋಗುವುದೆಂದರೆ..........." ಎಂದನು.

ವಿಮಲೆಯು "ನಾನು ಖಂಡಿತವಾಗಿ ಹೇಳುತ್ತೇನೆ. ಈ ಮನೆಯನ್ನು ಬಿಟ್ಟು ಹೋದರೆ ನಾನು ಹೋಗುವುದು ಕೆಂಗೇರಿಯ ಮನೆಗೇ. ಇನ್ನೆಲ್ಲಿಗೂ ಬರುವುದಿಲ್ಲ" ಎಂದಳು.

ತಂಗಿಯು ಹೇಳಿದ ಮಾತನ್ನು ಸಾಧಿಸುತ್ತಾಳೆಂಬ ಭಾವನೆಯು ಶಂಕರನಿಗೆ ಸ್ವಲ್ಪ ಕಹಿಯಾಯಿತು.

ಅಣ್ಣನು ತಂಗಿಯ ಅಭೀಷ್ಟದಂತೆಯೇ ನಡೆಯಲು ನಿಶ್ಚಯಿಸಿದನು.

ಮನೆಯಲ್ಲಿ ಒಂದೊಂದನ್ನಾಗಿ ಮಾರಲು ಆರಂಭಿಸಿದರು. ಕಾರು– ಇದ್ದ ಬೆಳ್ಳಿ ಬಂಗಾರ, ಮುಂತಾದುವುಗಳೆಲ್ಲವೂ ಮಾಯವಾಗ ತೊಡಗಿದವು. ಹಾಗೆಯೇ ಅದು ಶಂಕರನ ಜೇಬುಗಳನ್ನು ತುಂಬುತ್ತಾ ಬಂದಿತು.

ಒಂದು ಕಡೆ ಕೆಂಗೇರಿ ಮನೆಯ ರಿಪೇರಿಯು ಆರಂಭವಾಯಿತು. ಮತ್ತೊಂದು ಕಡೆ ಮನೆಯ ಖರ್ಚು ವಿಪರೀತವಾಗಿದ್ದಿತು. ಎರಡು ಮೂರು ವರ್ಷಗಳ ಮನೆಯ ಕಂದಾಯವನ್ನು ಕೊಡಬೇಕಾಗಿದ್ದಿತು. ಬ್ಯಾಂಕಿಗೆ ಸ್ವಲ್ಪ ಬಡ್ಡಿಯನ್ನು ಕಟ್ಟಬೇಕಾಯಿತು. ಮನೆಯ ಆಳುಕಾಳುಗಳುಗಳಿಗೆ ಒಂದೆರಡು ತಿಂಗಳುಗಳ ಸಂಬಳಗಳು ಬಾಕಿ ಇದ್ದವು. ಗೌರ

ಮ್ಮನವರಿಗೆ ಕಳೆದ ಆರು ತಿಂಗಳಿಂದಲೂ ಏನೂ ಕೊಟ್ಟಿರಲಿಲ್ಲ. ಹಾಗೆಯೇ ಸಂಗೀತದ ಮೇಸ್ಟರುಗಳು, ಡಾಕ್ಟರು, ಇವರುಗಳಿಗೂ ಹಾಲಿನ ಡೈರಿ ಸಾಮಾನಿನ ಅಂಗಡಿಗಳಿಗೂ ಬಾಕಿಯನ್ನು ಕೊಡಬೇಕಾಗಿತ್ತು. ಇವೆಲ್ಲವನ್ನೂ ಕೊಟ್ಟು ಕೈ ತೊಳೆದುಕೊಳ್ಳುವ ವೇಳೆಗೆ ಶಂಕರನಿಗೆ ಕೈ ತೊಳೆದುಕೊಂಡಂತೆಯೇ ಆಗಿತ್ತು. ಹೊಸ ಮನೆಯಲ್ಲಿ ಹೊಸ ಜೀವನವನ್ನು ಆರಂಭಮಾಡಲು ಸುಮಾರು ಒಂದು ಸಾವಿರ ರೂಪಾಯಿನಷ್ಟು ಉಳಿಯಿತು.

ಕೆಂಗೇರಿ ಮನೆಯ ರಿಪೇರಿಯು ಒಂದು ವಾರ-ಹತ್ತು ದಿನಗಳಿಗಿಂತಲೂ ಹೆಚ್ಚಾಗಿ ಹಿಡಿಯಲಿಲ್ಲ. ರಿಪೇರಿಯಾದ ಕೂಡಲೇ ಅವರುಗಳಲ್ಲಿಗೆ ಹೋಗುವ ಸನ್ನಾಹವನ್ನು ಮಾಡತೊಡಗಿದರು.

ಮನೆಯೊಡನೆಯೇ ಮನೆಯಲ್ಲಿದ್ದ ಫರ್ನಿಚರನ್ನೂ ಮನೆಯಲ್ಲಿ ಹಾಸಿದ್ದ ರತ್ನಗಂಬಳಿಗಳನ್ನೂ ಬಿಟ್ಟು ಹೋಗತಕ್ಕದ್ದೆಂದು ಗೊತ್ತಾಗಿದ್ದಿತು. ಆದರೂ ಅವರ ಹಾಸಿಗೆ ಬಟ್ಟೆಗಳೂ, ಚಿಲ್ಲರೆ ಸಾಮಾನುಗಳೇ ಬೇಕಾದಷ್ಟಿದ್ದುವು. ಅದರಿಂದ ಶಂಕರನು ಹದಿನೈದು ರೂಪಾಯಿಗಳಿಗೆ ಒಂದು ಲಾರಿಯನ್ನು ಗೊತ್ತುಮಾಡಿಕೊಂಡು ಬಂದನು. ಅದರಲ್ಲಿ ಸಾಮಾನುಗಳನ್ನು ತುಂಬಿಕೊಂಡು ಎಲ್ಲರೂ ಕುಳಿತುಕೊಂಡು ಹೋಗುವುದೆಂದು ಗೊತ್ತಾಯಿತು.

ಸಾವಿತ್ರಮ್ಮನವರು "ಮೊದಲು ನಾವೆಲ್ಲಿ ಹೋಗುತ್ತೇವೆ? ಯಾಕೆ ಹೋಗುತ್ತೇವೆ" ಎಂದು ಕೇಳಿದರು. ಏನೋ ಹೇಳಿ ಅವರನ್ನು ಒಪ್ಪಿಸಿದ್ದಾಯಿತು. ಲಾರಿಯಲ್ಲಿ ಹೊರಡುವುದೆಂದ ಕೂಡಲೇ ಅವರು ಬರುವುದೇ ಇಲ್ಲವೆಂದು ಹಠ ಹಿಡಿದರು. ಬಲಾತ್ಕಾರ ಮಾಡಲು "ನಾನು ಮೋಟಾರಿನಲ್ಲಿ ಬರುವುದಿಲ್ಲ. ಶೀಲೆಯೊಡನೆ ನಡೆದುಕೊಂಡೇ ಬರುತ್ತೇನೆ" ಅಂದರು.

ಶಂಕರನು ಅವರಿಗೊಂದು ಜಟಕಾ ಗಾಡಿ ಮಾಡಿ ಕೊಟ್ಟನು.

ಬೆಳಗಾಗ ಹತ್ತು ಗಂಟೆಗೆ ಊಟ ಮಾಡಿಕೊಂಡು ಮನೆ ಮಂದಿ ಎಲ್ಲರೂ ಕೆಂಗೇರಿಗೆ ಹೊರಟರು.

ಸುಮಾರು ಒಂದು ಗಂಟೆಯ ಕಾಲದಲ್ಲಿ ಲಾರಿಯು ಅವರ ತೋಟಕ್ಕೆ ಬಂದು ಇಳಿಸಿಬಿಟ್ಟು ಹೊರಟು ಹೋಯಿತು.

ವಿಮಲೆಯು ಮೊದಲು ನೋಡಿದುದಕ್ಕಿಂತಲೂ ಹೆಚ್ಚು ಒಪ್ಪವಾಗಿದ್ದಿತು. ಮನೆಯ ಮುರುಕಲು ಹೆಂಚುಗಳನ್ನು ತೆಗೆದು ಹೊಸ ಹೆಂಚುಗ

ಳನ್ನು ಜೋಡಿಸಿದ್ದರು. ನೆಲದಲ್ಲಿ ಹಳ್ಳಕೊಳ್ಳಗಳಿದ್ದ ಕಡೆ ಮಣ್ಣು ಕಲ್ಲುಗ ಳನ್ನು ಹಾಕಿ ಅದರ ಮೇಲೆ ಗಾರೆಯನ್ನು ಸವರಿದ್ದರು. ಆ ಮನೆಯು ಬಹಳ ಸಣ್ಣ ಮನೆ. ಮುಂದುಗಡೆ ಒಂದು ಜಗುಲಿ. ಅದನ್ನು ದಾಟಿ ಹೋದರೆ ಸಣ್ಣ ಹಜಾರ. ಅದರ ಅಕ್ಕ ಪಕ್ಕದಲ್ಲಿ ಎರಡು ಕೋಣೆಗಳು. ಹಿಂದುಗಡೆ ನಡುಮನೆ. ಅದರ ಪಾರ್ಶ್ವಗಳಲ್ಲಿ ಅಡಿಗೆ ಮನೆ ಬಚ್ಚಲು ಮನೆ ಗಳು. ಹಿಂದುಗಡೆ ಕಕ್ಕಸು.

ಸ್ಥಳವು ಸಾಕಾಗುವುದಲ್ಲವೆಂದು ಜಗಲಿಯ ಮುಂದುಗಡೆ ದೊಡ್ಡ ದೊಂದು ಚಪ್ಪರವನ್ನು ಹಾಕಿ, ಅದಕ್ಕೆ ಹೆಂಚು ಹೊದಿಸಿದ್ದರು. ಅಂಚು ಗಳಲ್ಲಿ ಎರಡಡಿಯ ಗೋಡೆಯನ್ನು ಕಟ್ಟಿದ್ದರು. ನೆಲಕ್ಕೆ ಸಿಮೆಂಟ್ ಆಗಲಿ, ಗಾರೆಯನ್ನಾಗಲೀ ಹಾಕಿರಲಿಲ್ಲ.

ಅದರಾಚೆ ಒಣ ಹುಲ್ಲು ನಿಂತಿದ್ದ ಪಾಳು ನೆಲ. ಅಲ್ಲಲ್ಲಿ ಸಣ್ಣ ದೊಡ್ಡ ಮರಗಳು. ಒಂದು ದೊಡ್ಡ ಮರದ ನೆರಳಿನಲ್ಲಿ ಆಗತಾನೇ ಬಂದಿದ್ದ ಲಾರಿ ಯಿಂದ ಇಳಿಸಿದ ಸಾಮಾನುಗಳನ್ನು ಇಡಲಾಗಿದ್ದಿತು.

ಮನೆಯು ಮೊದಲೇ ಕಸಕಡ್ಡಿಗಳಿಂದ ತುಂಬಿದ್ದಿತ್ತು. ಅದರ ಮೇಲೆ ಗಾರೆಯವರು ರಿಪೇರಿ ಮಾಡುತ್ತ ಮತ್ತಷ್ಟು ಕೊಳಕು ಮಾಡಿದ್ದರು. ಮನೆ ಯಲ್ಲಿರುವ ಕಸವನ್ನೆಲ್ಲವನ್ನೂ ತೆಗೆದು ಹಾಕಬೇಕು. ಗುಡಿಸಬೇಕು. ಚೊಕ್ಕಟವಾಗಿ ತೊಳೆಯಬೇಕು. ಇದಿಷ್ಟು ಮಾಡುವವರೆವಿಗೆ ಆ ಮನೆಯಲ್ಲಿ ಕಾಲಿಡುವಂತಿಲ್ಲ.

ವಿಮಲೆಯು ಮನೆಯನ್ನು ಚೊಕ್ಕಟ ಮಾಡುವ ಕೆಲಸದಲ್ಲಿ ತೊಡಗಿ ದಳು. ಶಂಕರನೂ ಶೀಲೆಯೂ ಅವಳಿಗೆ ಸಹಾಯ ಮಾಡಿದರು. ಮನೆ ಯನ್ನು ಗುಡಿಸಿ ಮುಗಿಸುವ ವೇಳೆಗೆ ಮೂರು ಗಂಟೆಯಾಯಿತು. ಎಲ್ಲರ ಬಟ್ಟೆಗಳೂ, ಮೈಯ್ಯೂ, ತಲೆಗೂದಲುಗಳೂ ಧೂಳಿನ ಮಯವಾಗಿದ್ದವು.

ವಾಸುವು ಓಡಿ ಬಂದು "ನಾವು ಬಂದೆವು" ಎಂದು ಹೇಳಿದನು.

ಮೂರು ಮಂದಿಯೂ ಹೊರಗೆ ಬಂದು ನೋಡಿದರು. ಸಾವಿತ್ರಮ್ಮ ನವರೂ ಶೀಲೆಯೂ ಆಗತಾನೇ ಗಾಡಿಯಲ್ಲಿ ಬಂದು ಇಳಿದಿದ್ದರು.

ವಿಮಲೆಯು ಅಡಿಗೆಯ ಮನೆಗೆ ಹೋಗಿ ಇಜ್ಜಲು ಒಲೆಯನ್ನು ಹಚ್ಚಿ ಟೀಗೆ ನೀರಿಟ್ಟಳು.

ಎಲ್ಲರೂ ಸೇರಿ ಹಳ್ಳದಿಂದ ಬಕ್ಕೆಟ್ಟುಗಳಲ್ಲಿ ನೀರು ತಂದು ಮನೆಗೆಲ್ಲಾ ಹಾಕಿ ತೊಳೆದರು. ಬಟ್ಟೆಯಿಂದ ಒರಸಿ ಸಾರಿಸಿದರು.

ವಿಮಲೆಯು ಉಪ್ಪಿಟ್ಟು ಮಾಡಿದಳು. ಉಪ್ಪಿಟ್ಟು ತಿಂದು ಟೀಯನ್ನು ಕುಡಿದರು. ಮರದ ಕೆಳಗಿದ್ದ ಸಾಮಾನುಗಳನ್ನು ತಂದು ಮನೆಯೊಳಗೆ ಅಚ್ಚುಕಟ್ಟಾಗಿಟ್ಟರು.

ಅನಂತರ ಹೊರಗೆ ಕುಳಿತು ಮಾತನಾಡುತ್ತಿರುವಾಗ ಶೀಲೆಯು "ಈ ಮನೆಯಲ್ಲಿ ಎಲೆಕ್ಟ್ರಿಕ್ ದೀಪಗಳಿಲ್ಲವಲ್ಲ, ರಾತ್ರಿ ಏನು ಮಾಡುವುದು?" ಎಂದು ಕೇಳಿದಳು.

ವಿದ್ಯುತ್ ದೀಪಗಳಲ್ಲಿಯೇ ಬೆಳೆದ ಆ ಮಕ್ಕಳು ಸಂಜೆಯಾಯಿತಲ್ಲ, ಇನ್ನು ಕತ್ತಲಾಗುತ್ತದೆಯಲ್ಲ, ದೀಪಕ್ಕೇನು ಮಾಡುವುದು ಎಂಬ ವಿಷಯವನ್ನೇ ಆಲೋಚನೆ ಮಾಡಿರಲಿಲ್ಲ. ಶೀಲೆಯು ಹೇಳಿದ ನಂತರ ಎಲ್ಲರೂ ಜಾಗೃತರಾದರು. ಲ್ಯಾಂಪುಗಳನ್ನು ತರಲು ಶಂಕರನು ಸಂಜೆಯ ರೈಲಿಗೆ ಬೆಂಗಳೂರಿಗೆ ಹೋದನು.

ವಿಮಲೆಯು ಹಣತೆಯಲ್ಲಿಯೇ ಅಡಿಗೆ ಮಾಡಿ ಆ ರಾತ್ರಿಯನ್ನು ಕಳೆಯಬೇಕಾಗುತ್ತದೆಂದು ಕೊಂಡಿದ್ದಳು. ಆದರೆ ಶಂಕರನು ಷಟಲ್ ಗಾಡಿಗೇ ಬಂದು ಬಿಟ್ಟನು.

ಎಲ್ಲರಿಗೂ ಕೆಲಸ ಮಾಡಿ ಆಯಾಸವಾಗಿದ್ದಿತು. ದೇಹವು ಬೇಡವೆನ್ನುತ್ತಿದ್ದರೂ ಮನಸ್ಸಿನ ಒತ್ತಾಯದಿಂದ ಎಲ್ಲರೂ ದುಡಿದು ದಣಿದಿದ್ದರು. ಕೆಲಸ ಮಾಡಿ ರೂಢಿ ಇಲ್ಲದ ಅವರಿಗೆ ಕೈಹೊಪ್ಪಳೆಗಳು ಬಂದಿದ್ದವು. ಊಟ ಮಾಡಿ ಎಲ್ಲರೂ ಮಲಗಿಬಿಟ್ಟರು.

ಮಾರನೆಯ ದಿನ ಬೆಳಗಾಯಿತು. ಸಂಜೆಯಾಯಿತು. ಪುನಃ ಬೆಳಗಾಯಿತು. ಹೀಗೆ ದಿನಗಳ ಮೇಲೆ ದಿನಗಳು ಕಳೆಯಲಾರಂಭವಾಯಿತು. ಅವರುಗಳು ಕೆಂಗೇರಿ ಮನೆಗೆ ಬಂದ ಮಾರನೆಯ ದಿನವೋ ಅದರಾಚೆಯ ದಿನವೋ ವೆಂಕಟರಾಯನು ಕಾರಿನಲ್ಲಿ ಬಂದಿದ್ದನು.

ಮಾತನಾಡುತ್ತಿದ್ದಾಗ ವೆಂಕಟರಾಯನು "ಏನು, ವಿಮಲಾದೇವಿ. ನಿಮ್ಮ ಹೊಸ ಜೀವನವು ಹೇಗಿದೆ?" ಎಂದು ಕೇಳಿದನು.

ಅದಕ್ಕೆ ವಿಮಲೆಯು "ಏನೋ ಇದೆ. ಊಟ ಮಾಡುತ್ತೇವೆ. ನಿದ್ದೆ ಮಾಡುತ್ತೇವೆ. ದಿನ ಕಳೆಯುತ್ತಿದೆ. ಮುಂದಿನ ದಿನಗಳು ಹೇಗೆ ಕಳೆಯುತ್ತವೆಯೋ ಗೊತ್ತಿಲ್ಲ. ಅದನ್ನು ಯೋಚಿಸುತ್ತಲೂ ಇಲ್ಲ. ನಾನೀಗ ಯೋಚಿಸುವುದನ್ನು ಸಹ ನಿಲ್ಲಿಸಿ ಬಿಟ್ಟದ್ದೇನೆ. ಯೋಚಿಸುವುದಕ್ಕೆ ಪುರಸತ್ತೇ ಇಲ್ಲ" ಎಂದು ಹೇಳಿದಳು.

ಅವಳ ಕಷ್ಟ ಸೈರಣೆಗೆ, ಸಹನೆಗೆ ವೆಂಕಟರಾಯನು ಮೆಚ್ಚಿಕೊಂಡಿದ್ದನು.

ಎಷ್ಟೋ ಬಾರಿ "ವಿಮಲಾ! ನೀವು ಈ ಹೊಸ ಜೀವನವನ್ನು ಆರಂಭ ಮಾಡಿದ ಮೇಲಂತೂ ನಿನ್ನ ವಿಷಯದಲ್ಲಿ ನನಗೆ ಗೌರವವು ವಿಪರೀತ ಹೆಚ್ಚಾಯಿತು" ಎಂದು ಹೇಳಿದ್ದನು.

ವಿಮಲೆಗೆ ತನ್ನ ಕಷ್ಟಗಳು ಜ್ಞಾಪಕಕ್ಕೆ ಬಂದಾಗಲೆಲ್ಲಾ ವೆಂಕಟರಾಯನು ಮೆಚ್ಚಿಕೊಂಡು ಆಡಿದ ಮಾತುಗಳು ನೆನಪಿಗೆ ಬರುತ್ತಿದ್ದವು. ಆ ಮೆಚ್ಚಿಗೆಯ ನೆನಪು ಕಷ್ಟದಲ್ಲಿ ಅವಳಿಗೆ ಸಮಾಧಾನವನ್ನು ತರುತ್ತಿತ್ತು.

೪

ರಾತ್ರಿ ಸುಮಾರು ಒಂಬತ್ತೂವರೆ ಗಂಟೆಯಾಗಿತ್ತು. ಮನೆಯಲ್ಲಿ ಅತ್ತೆಯೂ ಹುಡುಗರೂ ಊಟ ಮಾಡಿ ಮಲಗಿ ನಿದ್ದೆ ಮಾಡುತ್ತಿದ್ದರು. ಸಾಯಂಕಾಲದ ಗಾಡಿಯಲ್ಲಿ ಬೆಂಗಳೂರಿಗೆ ಹೋಗಿದ್ದ ಶಂಕರನು ಮನೆಗೆ ಬಂದಿರಲಿಲ್ಲ. ಷಟಲ್ ಗಾಡಿಯಲ್ಲಿ ಬರಲಿಲ್ಲವಾದ್ದರಿಂದ ಅವನು ಬರುವುದು ಇನ್ನು ಹನ್ನೊಂದು ಗಂಟೆಗೇ.

ವೆಂಕಟರಾಯನು ಜಗುಲಿಯ ಮೆಟ್ಟಲಿನ ಮೇಲೆ ಕುಳಿತುಕೊಂಡಿದ್ದನು. ವಿಮಲೆಯು ಕೆಳ ಮೆಟ್ಟಲಿನ ಮೇಲೆ ಅವನನ್ನು ಒರಗಿಕೊಂಡು ಕುಳಿತಿದ್ದಳು. ಅವರ ಮುಂದೆ ಹೊಸದಾಗಿ ಕಟ್ಟಿದ್ದ ವರಾಂಡದ ನೆರಳು ಕತ್ತಲಿನಂತೆ ಅವ್ಯಕ್ತವಾಗಿದ್ದಿತು. ಅದರಾಚೆ ತೋಪಿನ ಶುಭ್ರವಾದ ಆಕಾಶದ ಮಂದ ಪ್ರಕಾಶವು ಬಿದ್ದಿದ್ದಿತು.

ಯಾವುದೋ ಮಾತನಾಡುತ್ತಾ ಅವಳ ಮುಂಗೂದಲನ್ನು ನೇವರಿಸುತ್ತಿದ್ದ ವೆಂಕಟರಾಯನು "ಹಾಗಲ್ಲ. ವಿಮಲಾ. ನಿನ್ನನ್ನು ನೋಡಿದ ತಕ್ಷಣವೇ ನನಗೆ ಹಾಗಾಯಿತು" ಎಂದು ಹೇಳಿದನು.

ವಿಮಲೆಯು ನಕ್ಕು "ನನಗೂ ಅದು ಅರ್ಥವಾಗುವುದಿಲ್ಲ. ನಮ್ಮ ಅತ್ಯಂತ ಕಠಿಣ ಸ್ಥಿತಿಯಲ್ಲಿ ನಿಮ್ಮ ಪರಿಚಯವಾಯಿತು" ಎಂದಳು.

"ನಾನು ಹೇಳಲಿಲ್ಲವೆ? ನಿನ್ನನ್ನು ಈ ಕಷ್ಟ ಸ್ಥಿತಿಯಲ್ಲಿ ನೋಡಿದ್ದೇ ಉತ್ತಮವಾಯಿದು. ಅದರಿಂದ ನಿನ್ನಲ್ಲಿ ನನಗೆ ವಿಪರೀತ ಗೌರವು ಹೆಚ್ಚಿದೆ. ಇನ್ನಾರಾದರೂ ಆಗಿದ್ದರೆ ಹೆದರುತ್ತಿದ್ದರು. ಆದರೆ ನೀನು ಸಂತೋಷದಿಂದ ಸಹಿಸುತ್ತಿದ್ದೀಯೆ! ಅದು ಉತ್ತಮ ಗೃಹಿಣಿಯ ಲಕ್ಷಣ"

ವಿಮಲೆಯು ತನ್ನ ನಗು ಮುಖವನ್ನು ಮೇಲೆತ್ತಿ ಅವನ ಮುಖವನ್ನು ನೋಡಿದಳು.

ಅವನು "ನಿನ್ನಲ್ಲಿ ನನಗೆ ಇರುವ ಗೌರವವು ಹೆಚ್ಚೋ ಪ್ರೇಮವು ಹೆಚ್ಚೋ ಎಂದು ಎಷ್ಟೋ ದಿನದಿಂದ ಲೆಕ್ಕ ಹಾಕುತ್ತಿದ್ದೇನೆ. ಆದರೆ ಅದನ್ನು ನಿರ್ಧರಿಸಲು ಇನ್ನೂ ನನ್ನ ಕೈಲಾಗಿಲ್ಲ" ಎಂದು ಹೇಳಿದನು.

ನೆಲದ ಮೇಲೆ ಬಿದ್ದಿದ್ದ ಹುಲ್ಲಿನ ಕಡ್ಡಿಯನ್ನು ತೆಗೆದುಕೊಂಡು ಕಡಿಯುತ್ತಿದ್ದವಳು "ಇದೆಲ್ಲಾ ಸ್ವಪ್ನದಂತೆ ಇದೆ" ಎಂದು ಹೇಳಿದಳು.

ಅವನು "ಹೌದು! ಸ್ವಪ್ನದಂತೆಯೇ ಇದೆ' ಎಂದು ಹೇಳಿ ಅವಳ ಅಗಲವಾದ ಕೆನ್ನೆಗಳು, ಮೃದುವಾದ ತುಟಿಗಳು, ಕಣ್ಣು, ಹಣೆಗಳ ಮೇಲೆಲ್ಲಾ ಚುಂಬಿಸಿದನು.

ಅವನ ತುಟಿಗಳು ದಾಹಗೊಂಡಿದ್ದವು. ಅವು ಲಭ್ಯವಾದ ಎಡೆಗಳಲ್ಲೆಲ್ಲಾ ಬೇಗ ಬೇಗ ಮುತ್ತಿಟ್ಟು "ವಿಮ್ಮು-ವಿಮ್ಮು" ಎನ್ನುತ್ತಿದ್ದವು.

ಅವಳು ಅವನ ಪಕ್ಕದಲ್ಲಿ ದೇಹಕ್ಕೆ ದೇಹವು ತಗಲುವಂತೆ ಹತ್ತಿರವಾಗಿ ಕುಳಿತುಕೊಂಡು ಅವನ ಭುಜದಮೇಲೆ ಕೈ ಹಾಕಿಕೊಂಡಿದ್ದಳು. ಎಷ್ಟು ಹೊತ್ತಾದರೂ ಹಾಗೇಯೇ ಕುಳಿತಿರಬೇಕೆಂದು ಅವಳಿಗೆ ತೋರುತ್ತಿತ್ತು.

ಅವನೂ ಅವಳ ಪಕ್ಕದಲ್ಲಿಯೇ ಕುಳಿತಿದ್ದನು. ಅವಳನ್ನು ಮನಸಾರ ಚುಂಬಿಸಿದ್ದನು. ಆದರೆ ಅವನ ದಾಹವು ತೀರಿರಲಿಲ್ಲ.

ಅವನು ತನ್ನೆರಡು ಕೈಗಳಿಂದಲೂ ಅವಳ ಕೆನ್ನೆಗಳನ್ನು ಹಿಡಿದು ಅವನ ಮುಖವನ್ನು ತನ್ನ ಮುಖದ ಕಡೆಗೆ ತಿರುಗಿಸಿಕೊಂಡು, ಅವಳ ಮುಖವನ್ನು ಹತ್ತಿರಕ್ಕೆ ತೆಗೆದುಕೊಂಡು "ವಿಮಲಾ! ನೀನು ನನ್ನವಳಾಗ ಬಾರದೇಕೆ?" ಎಂದನು.

ಅವಳೇನೂ ಜವಾಬು ಹೇಳಲಿಲ್ಲ.

ಅವನು "ಹೂ ಎನ್ನು ವಿಮ್ಮೂ-ಹೂ ಎನ್ನು"ಎಂದನು.

ಅವಳು ಕೃತನಿಶ್ಚಯದಿಂದ "ನಮ್ಮ ಮದುವೆಯಾಗುವವರೆವಿಗೆ ಬೇಡ" ಎಂದಳು.

ವೆಂಕಟರಾಮನು ಗಂಭೀರವಾಗಿ "ಮದುವೆಗೆ ನನ್ನದೇನಾದರೂ ಅಡ್ಡಿ-

ಇದೆಯೆ? ವಿಮಲಾ! ನಾಳೆಯಾದರೂ ನಾನೇನು ಬೇಡವೆಂದು ಹೇಳುವುದಿಲ್ಲ" ಎಂದನು.

"ಯಾರದೂ ಅಡ್ಡಿಯಿಲ್ಲ. ನಮಗೆ ಈಗಲೇ ಮದುವೆಯಾಗುವುದು ದೇವರಿಗೆ ಇಷ್ಟವಿಲ್ಲ'' ಎಂದಳು.

ಸ್ವಲ್ಪ ಹೊತ್ತು ತಡೆದು "ಅದು ಹೇಗೆ ನಾನು ಈಗಲೇ ಈ ಮನೆಯನ್ನು ಬಿಟ್ಟು ಬರುವುದು. ಇವರನ್ನೆಲ್ಲಾ ನೋಡಿಕೊಳ್ಳುವವರಾರು? ನಾನೀಗ ಮದುವೆ ಮಾಡಿಕೊಂಡು ನಿಮ್ಮೊಂದಿಗೆ ಬಂದು ಬಿಟ್ಟರೆ ಈ ಮನೆಯು ಚಲ್ಲಾ ಪಿಲ್ಲಿಯಾಗಿ ಹೋಗುತ್ತದೆ" ಎಂದಳು.

ವೆಂಕಟರಾಯನು "ಅದು ಎಂದೆಂದಿಗೂ ಹೀಗೆಯೇ ಇರುತ್ತದೆ. ಹೀಗೆ ಆದರೆ ವಿಘ್ನೇಶ್ವರನ ಮದುವೆಗೆ ಸಾವಿರ ವಿಘ್ನಗಳು ಎಂಬಂತೆ ಆಗುತ್ತದೆ. ನೀನು ಇದೆಲ್ಲಾ ಸರಿಮಾಡಿಕೊಂಡು ಮದುವೆ ಮಾಡಿಕೊಳ್ಳೋಣವೆಂದರೆ. ಮದುವೆಯ ವೇಳೆಗೆ ನಾವಿಬ್ಬರೂ ಮುದುಕರಾಗಿ ಹೋಗುತ್ತೇವೆ" ಎಂದು ಹೇಳಿದನು.

ಅವನ ಮಾತನ್ನು ಕೇಳಿ ಆ ರಾತ್ರಿ ವಿಮಲೆಯು ನಕ್ಕಳು.

ಚಂದ್ರನ ಬೆಳಕು ಚೆನ್ನಾಗಿ ಮೂಡಿದ್ದಿತು. ಬೆಳದಿಂಗಳು ಹುಲ್ಲಿನ ಮೇಲೆ ಬಿದ್ದು ಅಮೃತ ವರ್ಷವನ್ನು ಕರೆದಿದೆಯೋ ಎಂಬಂತೆ ಇದ್ದಿತು ದೊಡ್ಡ ಮರಗಳ ಕೆಳಗೆ ಬಿದ್ದಿದ್ದ ದಪ್ಪವಾದ ನೆರಳು ಆ ಬೆಳದಿಂಗಳನ್ನು ಮತ್ತಷ್ಟು ಮೋಹಕವಾಗಿ ಮಾಡಿದ್ದಿತು. ಮರದೆಲೆಗಳನ್ನು ಆಡಿಸಿ ಶಬ್ದ ಮಾಡುತ್ತಾ ತಂಗಾಳಿಯು ಬೀಸುತ್ತಿದ್ದಿತು.

ಹಾಗಿದ್ದರೂ ಆಕಾಶದಲ್ಲಿ ಅಲ್ಲಲ್ಲಿ ಮೋಡಗಳಿದ್ದವು. ಚಂದ್ರನ ಮೇಲೆ ಮೋಡಗಳು ಹರಿದಾಗ ಪ್ರಪಂಚಕ್ಕೆ ಕರಿಯ ಪರದೆಯನ್ನು ಹಾಕಿದಂತಿರುತ್ತಿತ್ತು. ಚಂದ್ರನು ಮೋಡಗಳಿಂದ ಹೊರಗೆ ಬಂದಾಗ ಪ್ರಪಂಚದ ಮೇಲೆ ತಣ್ಣನೆಯ ಬೆಳಕು ಬಿದ್ದ ಹಾಗಾಗುತ್ತಿತ್ತು.

ಆ ಪ್ರಣಯಿಗಳ ಮನಸ್ಸಿನ ಸ್ಥಿತಿಯೂ ಹಾಗೇ ಇದ್ದಿತು ಒಮ್ಮೊಂದೊಮ್ಮೆ ಅವರಿಬ್ಬರ ಮನಸ್ಸುಗಳೂ ನಿರುತ್ಸಾಹದಿಂದ ಕುಗ್ಗುತ್ತಿದ್ದವು. ಕೆಲವೊಮ್ಮೆ ಸಂತೋಷದಿಂದ ಹಿಗ್ಗುತ್ತಿದ್ದವು. ಅವರ ನಿಟ್ಟುಸಿರುಗಳೂ ಸಂತೋಷಲಹರಿಗಳೂ ಆಗಾಗ ಕೇಳಿ ಬರುತ್ತಿದ್ದವು.

ಹೊತ್ತಾಗುತ್ತಾ ಬಂದಿತು. ವೆಂಕಟರಾಯನು ಹೊರಡುವ ಹೊತ್ತಾಯಿತು. ವಿಮಲೆಯು ಸದ್ಯದಲ್ಲಿ ಅಲ್ಲಿಯೇ ಇರತಕ್ಕದೆಂದೂ ಪರಿಸ್ಥಿತಿಗಳು ಸ್ವಲ್ಪ ಸುದಾರಿಸಿದ ಕೂಡಲೇ ಅವಳು ಮದುವೆಗೆ ಒಪ್ಪಬೇಕೆಂದೂ ಇಬ್ಬರೂ ಗೊತ್ತುಮಾಡಿಕೊಂಡರು. ಆ ಗೊತ್ತುವಳಿಯು ಆ ಕಾಲದಲ್ಲಿ ಅವರಿಬ್ಬರಿಗೂ ಅದು ಪ್ರಿಯುವಾಗಿದ್ದಿತು.

ವೆಂಕಟರಾಯನು ಎದ್ದು ಗೇಟಿನ ಕಡೆಗೆ ಹೊರಟನು. ವಿಮಲೆಯೂ ಅವನೊಡನೆ ಹೋದಳು. ವೆಂಕಟರಾಯನು ವಿಮಲೆಯನ್ನು ಆಲಂಗಿಸಿ ಚುಂಬಿಸಿದನು.

ಅವನ ಕಾರು ಹೊರಡುತ್ತಲೇ ವಿಮಲೆಯು ಪುನಃ ಮನೆಯ ಬಳಿಗೆ ಬಂದು ಮೊದಲು ಕುಳಿತಿದ್ದ ಕಡೆ ಮೆಟ್ಟಲಿನ ಮೇಲೆ ಕುಳಿತುಕೊಂಡಳು.

ಒಂದು ಬಾರಿ ಮೋಡಗಳ ನಡುವೆ ವೇಗವಾಗಿ ಓಡಿ ಹೋಗುತ್ತಿದ್ದ ಚಂದ್ರನನ್ನು ನೋಡಿದಳು. ಅನಂತರ ಚಂದ್ರನ ಬೆಳಕು ಬಿದ್ದಿದ್ದ ಭೂಮಿಯನ್ನು ನೋಡಿದಳು.

ಭೂಮಿಯನ್ನೇ ನೋಡುತ್ತಾ ಅವನತಶಿರಳಾಗಿ ಕುಳಿತುಕೊಂಡಳು.

ಅವಳಾಗಲೇ ವಿವಿಧವಾದ ಇಪ್ಪತ್ತು ವರ್ಷಗಳನ್ನು ನೋಡಿದ್ದಾಳೆ. ಆದರೆ ಹೆಚ್ಚು ಕಡಮೆ ಆ ಇಪ್ಪತ್ತು ವರ್ಷಗಳೂ ಒಂದೇ ವಿಧವಾಗಿ ಕಂಡು ಬಂದಿವೆ. ಆದರೆ ತಾಯಿಯು ಸತ್ತ ಈ ಕ್ಷಿಪ್ರ ಕಾಲದಲ್ಲಿ ಎಷ್ಟೊಂದು ಬದಲಾವಣೆಯಾಗಿದೆ. ಸ್ವಲ್ಪ ಕಾಲದ ಮೊದಲು ಅವಳು ಕಾಲೇಜಿನಲ್ಲಿ ಓದುತ್ತಿದ್ದಳು. ತೋರಿದಂತೆ ಓಡಿಯಾಡಿಕೊಂಡು ಹಕ್ಕಿಯಂತೆ ಇದ್ದಳು. ಆದರೆ ಈಗ ಹಾಗಿಲ್ಲ. ಅವಳು ಗೃಹಣಿಯಂತಾಗಿದ್ದಾಳೆ. ಸತ್ತ ತಾಯಿಯ ಪ್ರತಿನಿಧಿಯಾಗಿದ್ದಾಳೆ. ತಾನೇ ಸಾರಥಿಯಂತೆ ಗೃಹ ರಥವನ್ನು ನಡೆಸಿಕೊಂಡು ಹೋಗುತ್ತಿದ್ದಾಳೆ.

ಕೆಲವು ದಿನಗಳ ಮೊದಲೂ ಅವಳಿಗೆ ವಯಸ್ಸಾಗಿತ್ತು. ಯೌವನವಿದ್ದಿತು. ಆಗ ಅವಳು ತಾನು ನೋಡಿದ ಅವರಿವರನ್ನು ನೋಡಿ "ಈತನು ಚೆನ್ನಾಗಿದ್ದಾನೆ-ಈತನು ಚೆನ್ನಾಗಿದ್ದಾನೆ" ಎಂದು ಕೊಳ್ಳುತ್ತಿದ್ದಳು. ತಾನು

ಪ್ರಕಾಶನನ್ನು ಪ್ರೀತಿಸುತ್ತಿದ್ದೇನೆಂದು ಕೊಂಡಿದ್ದಳು. ಆದರೆ ಈಗ ಹಾಗಿಲ್ಲ. ಅವಳು ಎಷ್ಟೋ ಯೋಚನೆ ಮಾಡುತ್ತಾಳೆ. ತಾನು ವೆಂಕಟರಾಯನನ್ನು ಪ್ರೇಮಿಸುತ್ತಿದ್ದೇನೆಂದು ಅವಳಿಗೆ ತೋರುತ್ತದೆ. ತಾನು ಹಿಂದೆ ಚೆನ್ನಾಗಿದ್ದಾರೆ ಎಂದು ಕೊಂಡಿದ್ದ ಕೆಲವು ವ್ಯಕ್ತಿಗಳು ಅವಳಿಗೆ ಜ್ಞಾಪಕ ಬರುತ್ತದೆ. ಪ್ರಕಾಶನ ನೆನಪೂ ಅವಳಿಗೆ ಬರುತ್ತದೆ. ಆದರೆ ಅವೆಲ್ಲವೂ ಕ್ಷಣಾರ್ಧದಲ್ಲಿ ಮಾಯವಾಗಿ ವೆಂಕಟರಾಯನ ಮೂರ್ತಿಯು ಕಣ್ಣಿಗೆ ಕಟ್ಟಿದಂತೆ ಬಂದು ನಿಲ್ಲುತ್ತದೆ.

ಹೀಗೆ ಈಗ ವಿಮಲೆಯು ಒಂದು ನೆಲೆಗೆ ನಿಂತಿದ್ದಾಳೆ. ಅಥವಾ ಒಂದು ಇಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡಿದ್ದಾಳೆ.

ಒಂದೊಂದು ಬಾರಿ ಅವಳಿಗೆ ವೆಂಕಟರಾಯನನ್ನು ಮರೆತು ಬಿಡಬೇಕೆನ್ನಿಸುತ್ತದೆ. ಮತ್ತೊಮ್ಮೆ ಗೂಟ ಹೊಡೆದಂತೆ ಈ ಮನೆಯಲ್ಲಿ ತಾನೆಷ್ಟು ದಿನವಿರುವುದು-ಎಂಬ ಆಲೋಚನೆಯು ಬರುತ್ತದೆ.

ವೆಂಕಟರಾಯನು ಹೇಳುವುದೂ ಅವಳಿಗೆ ನ್ಯಾಯವಾಗಿಯೇ ಕಂಡು ಬರುತ್ತದೆ. ಅವನಿಗೆ ಇಪ್ಪತ್ತೈದು ಇಪ್ಪತ್ತಾರು ವರ್ಷಗಳು. ಆರೋಗ್ಯವಂತ. ರೂಪವಂತ. ತುಂಬು ಯೌವನ. ಕೈತುಂಬ ಹಣ ಬರುತ್ತದೆ. ಹಾಗಿರುವಾಗ ಮದುವೆ ಮಾಡಿಕೊಂಡು ಸುಖವಾಗಿರಬೇಕೆಂದು ಅವನಿಗೆ ತೋರುವುದು ನ್ಯಾಯವಾಗಿಯೇ ಇದೆ. ಈಗಲೇ ಮದುವೆ ಮಾಡಿಕೊಳ್ಳದೇ ಇದ್ದರೆ ಯೌವನದ ಸಂಧ್ಯಾಕಾಲದಲ್ಲಿ ಮದುವೆಯಾಗುವುದೇನು?

ಅದೇ ದಿನ ಅವನು "ವಿಮಲಾ! ನೀನು ಇನ್ನೂ ಹುಡುಗಿಯಲ್ಲ. ವಯಸ್ಸಾದವಳು. ಈ ವಯಸ್ಸಿಗೆ ನೀನು ಮದುವೆ ಮಾಡಿಕೊಂಡು ಸಂಸಾರ ಮಾಡಿಕೊಂಡಿರ ಬೇಕಾದವಳು. ನೀನು ಮದುವೆ ಮಾಡಿಕೊಂಡರೆ ಯಾರೂ ನಿನ್ನನ್ನು ಆಕ್ಷೇಪಣೆ ಮಾಡುವುದಿಲ್ಲ. ಜನಗಳೂ ಏನೂ ಅನ್ನುವುದಿಲ್ಲ" ಎಂದಿದ್ದನು.

ವಿಮಲೆಯು "ಯಾರೂ ಏನೂ ಅನ್ನದಿದ್ದರೂ ನನ್ನ ಕರ್ತವ್ಯವನ್ನು ನಾನು ಮಾಡಬೇಡವೇ ?" ಎಂದು ಕೇಳಿದಳು.

" ನನ್ನ ಮಾತು ಕೇಳು, ವಿಮಲಾ. ನಿನ್ನ ಕರ್ತವ್ಯವನ್ನು ಮಾಡು

ಎಂದೇ ನಾನು ನಿನಗೆ ಹೇಳುತ್ತಿರುವುದು. ನೀನು ತಪ್ಪು ತಿಳಿದುಕೊಂಡಿದ್ದೀಯೆ. ನಿನ್ನ ಕರ್ತವ್ಯವು ಇಲ್ಲಲ್ಲ. ಹೆಣ್ಣು ಮಗಳು ತವರು ಮನೆಗೆ ಸೇರಿದವಳಲ್ಲ. ಅವಳು ಗಂಡನ ಮನೆಗೆ ಸೇರಿದವಳು. ಅವಳ ಕರ್ತವ್ಯವು ಗಂಡನ ಮನೆಯಲ್ಲಿ"

"ನೀವು ಹೇಳಿದ ಮಾತು ನಿಜ. ಆದರೆ ನನಗಿನ್ನೂ ಮದುವೆಯಾಗಿಲ್ಲವಲ್ಲ" ಎಂದವಳು ಬುದ್ಧಿವಂತಿಕೆಯಿಂದ ಹೇಳಿದಳು.

ಅವನು ಅಷ್ಟೇ ಬುದ್ಧಿವಂತಿಕೆಯಿಂದ "ನಮ್ಮ ಮದುವೆಯಾಗಿ ಬಿಟ್ಟಿದೆ ವಿಮ್ಮ. ನಾನೂ ನೀನೂ ಎಂದು ಒಬ್ಬರನ್ನು ಒಬ್ಬರು ನೋಡಿದೆವೋ ಅಂದೇ ನಮ್ಮ ಮದುವೆಯಾಗಿದೆ" ಎಂದನು.

"ನೀವು ಹೇಳಿದುದನ್ನು ಒಪ್ಪಿಕೊಂಡರೂ ಸಹ ನಾನು ಈಗಿಲ್ಲಿರುವುದು ಆವಶ್ಯಕವಾದುದಲ್ಲವೇ ? ಯೋಚಿಸಿರಿ."

"ನಿಜ. ನೀನು ಈಗ ಇಲ್ಲಿರ ಬೇಕಾದದ್ದು ಸರಿ. ಇರು. ನಾನು ಬೇಡವೆನ್ನುವುದಿಲ್ಲ. ಆದರೆ ಗೊತ್ತು ಗುರಿಯಿಲ್ಲದೇ ನೀನು ಅದನ್ನು ಮುಂದು ಹಾಕಬಾರದು" ಎಂದು ಹೇಳಿದ್ದನು.

ಅವನು ಹೇಳಿದುದು ಸರಿ. ಗೊತ್ತು ಗುರಿಯಿಲ್ಲದೇ ಮುಂದೆ ಹಾಕಬಾರದು ಎಂದವಳಿಗೆ ತೋರಿತ್ತು. ಅವಳ ಗೆಳತಿಯರಲ್ಲಿ ಅನೇಕರಿಗೆ ಈಗಾಗಲೇ ಮದುವೆಯಾಗಿ ಅವರು ಗಂಡನ ಮನೆಯಲ್ಲಿದ್ದಾರೆ. ಕೆಲವರಿಗೆ ಇನ್ನೂ ಮದುವೆಯಾಗಿಲ್ಲ. ತನಗಿಂತಲೂ ಹೆಚ್ಚು ವಯಸ್ಸಾದವರು ಮದುವೆಯಿಲ್ಲದೇ ಇರುವ ಪ್ರಸಂಗಗಳು ಅವಳಿಗೆ ಗೊತ್ತಿತ್ತು. ಆದರೆ ಹೆಂಗಸು ವಯಸ್ಸಾದ ನಂತರ ಮದುವೆಯಾಗುವುದೇ ಸರಿ-ಎಂದವಳಿಗೆ ತೋರಿತು.

ಅವಳು ತನ್ನ ತಾಯಿಯ ಸ್ಥಾನವನ್ನು ತಾನೇ ಆಸೆಪಟ್ಟು ವಹಿಸಿಕೊಂಡಿದ್ದಾಳೆ. ಮನೆಯ ಎಲ್ಲ ಜವಾಬ್ದಾರಿಗಳನ್ನೂ ವಹಿಸಿದ್ದಾಳೆ. ಆದರೂ ಅವಳ ಒಳ ಮನಸ್ಸಿನಲ್ಲಿ ತನ್ನದೇ ಆದ ಒಂದು ಮನೆಯಿರಬೇಕೆಂದು ಆಸೆಯಾಗುತ್ತದೆ. ಆ ಒಳ ಮನಸ್ಸಿನಲ್ಲಿ ಗಂಡ, ಒಂದೆರಡು ಮಕ್ಕಳು, ಸುಖವಾದ ಸಂಸಾರ ಇವುಗಳು ಮಾಸಲು ಮಾಸಲಾಗಿ ಚಿತ್ರಿತವಾಗಿವೆ.

ಅವಳು ಮನಸ್ಸಿಗೆ ಬಂದ ವಿಷಯಗಳನ್ನೆಲ್ಲಾ ಚಿಂತಿಸುತ್ತಾ ಕುಳಿತಿರು

ವಂತೆಯೇ ಶಂಕರನು ಬಂದನು. ಎದ್ದು ಅವನಿಗೆ ಬಡಿಸಲು ಅಡಿಗೆಯ ಮನೆಗೆ ಹೋದಳು.

ಶಂಕರನು ಊಟ ಮಾಡುತ್ತಿರುವಂತೆ ಅತ್ತೆಗೆ ಎಚ್ಚರವಾಯಿತು.

ಅತ್ತೆಯು "ವಿಮಲಾ! ನಮ್ಮ ಚೀಲಿಗೆ ಮಾಂಸ ಹಾಕಿ ಎಷ್ಟೋ ದಿನ ವಾಯಿತು. ಅದೇಕೋ ಮಂಕಾಗಿದೆ. ಎದುರು ಹೊಲದ ಮಾರಪ್ಪನನ್ನು ಕರೆದು ಹೇಳಬಾರದೆಯೇ?" ಎಂದರು.

ಅತ್ತೆ ಹೇಳಿದ ಮಾತು ನಿಜ. ಕಳೆದ ಎರಡು ತಿಂಗಳಿಂದ ಕೆಂಗೇರೀ ಮನೆಗೆ ಬಂದ ಕಾಲದಿಂದ ಚೀಲಿಗೆ ಮಾಂಸ ಹಾಕಿರಲಿಲ್ಲ. ಅದನ್ನು ಯಾರೂ ಯೋಚಿಸಿಯೂ ಇರಲಿಲ್ಲ. ಆದರೆ ಈ ಕಷ್ಟಕಾಲದಲ್ಲಿ ಅದಕ್ಕೆ ಮಾಂಸ ವನ್ನು ಹಾಕದಿದ್ದರೆ ಮುಳುಗಿ ಹೋದುದೇನು? ಅಷ್ಟಕ್ಕೂ ಈ ಅರ್ಧರಾತ್ರಿ ಯಲ್ಲಿ ಅತ್ತೆ ಸುಖವಾಗಿ ಮಲಗಿ ನಿದ್ದೆ ಮಾಡದೇ ಈ ಮಾಂಸದ ಯೋಚನೆ ಯನ್ನೇಕೆ ಮಾಡಿದರು? ಯಾವಾಗಲೂ ಅತ್ತೆಯು ವಿಚಿತ್ರ ವ್ಯಕ್ತಿ.

ಅಣ್ಣ ತಂಗಿಯರು ಪರಸ್ಪರ ಮುಖವನ್ನು ನೋಡಿಕೊಂಡರು.

ಅನಂತರ ತಂಗಿಯು "ಆಗಲತ್ತೆ. ನಾಳೆಯ ದಿನ ಹೇಳಿ ಏರ್ಪಾಡು ಮಾಡುತ್ತೇನೆ" ಎಂದು ಹೇಳಿದಳು.

ಅಣ್ಣನಿಗೆ ಬಡಿಸಿ ವಿಮಲೆಯು ಹೊರಗೆ ಬಂದಳು. ಮಲಗಿರುವ ಮಕ್ಕಳನ್ನು ನೋಡಿದಳು. ವಾಸುವಿನ ಮೈಮೇಲೆ ಹೊದ್ದಿಕೆ ಇರಲಿಲ್ಲ. ಅವ ನಿಗೆ ಹೊದ್ದಿಸಿದಳು. ವರದಳು ಅಡ್ಡವಾಗಿ ತಿರುಗಿ ಬಿಟ್ಟಿದ್ದಳು. ವಿಮಲೆಯು ಅವಳನ್ನು ತಟ್ಟಿ ಎಬ್ಬಿಸಿ "ವರದ. ಸರಿಯಾಗಿ ಮಲಗಿಕೋ" ಎಂದು ಹೇಳಿ ಮಲಗಿಸಿದಳು.

ಇವಿಷ್ಟೂ ಮಾಡಿ ವಿಮಲೆಯು ಮಲಗಿಕೊಂಡಳು.

ಮಲಗಿರುವಾಗಲೂ ಅವಳಿಗೆ ಇದೇ ಯೋಚನೆ. ಶಂಕರನು ಬೆಳಗಿ ನಿಂದ ಸಾಯಂಕಾಲದವರೆವಿಗೆ ಹೋಗಿ ಕೆಲಸಕ್ಕೆ ಅಲೆಯುತ್ತಾನೆ. ಶೀಲೆಯು ತನ್ನೊಂದಿಗೆ ದುಡಿಯುತ್ತಿದ್ದಾಳೆ. ವರದಳು ಇನ್ನೂ ಹಸುಮಗುವಾಗಿಯೇ ಇದ್ದಾಳೆ. ನಿಶ್ಶಕ್ತಳಾದ ಅತ್ತೆ-ಹುಡುಗ ವಾಸು!

ತಾನು ಇವರೆಲ್ಲರನ್ನೂ ಹೀಗೇ ಬಿಟ್ಟು ಮದುವೆ ಮಾಡಿಕೊಂಡು ಹೊರಟು ಹೋಗುವುದೇ ?

ಆ ಆಲೋಚನೆಯಲ್ಲಿಯೇ ಅವಳಿಗೆ ನಿದ್ದೆ ಬಂದಿತು.

ವಿಮಲೆಯು ಬೆಳಗಾಗ ಬೇಗ ಎದ್ದು ಕಾಫೀ ಮಾಡ ತೊಡಗಿದಳು. ಯಾರೋ ಶಂಕರನಿಗೆ ಏರ್‌ಕ್ರಾಫ್ಟ್‌ನಲ್ಲಿ ಕೆಲಸ ಕೊಡಿಸುವುದಾಗಿ ಹೇಳಿದ್ದರು. ಅವರನ್ನು ನೋಡಲು ಅವನು ಐದೂವರೆಗೆ ಬರುವ ಗಾಡಿಯಲ್ಲಿಯೇ ಬೆಂಗಳೂರಿಗೆ ಹೋಗಬೇಕು.

ಶಂಕರನು ಕಾಫೀ ಕುಡಿದುಕೊಂಡು ಸ್ಟೇಷನ್ ಕಡೆಗೆ ಹೊರಟನು ವಿಮಲೆಯು ಮತ್ತೊಂದು ಲೋಟಾ ಕಾಫಿಯನ್ನು ತಾನೂ ಕುಡಿದು ಉಳಿದ ಡಿಕಾಕ್ಷನ್ ಮೇಲೆ ತಟ್ಟೆಯನ್ನು ಮುಚ್ಚಿಟ್ಟು ಹಜಾರಕ್ಕೆ ಬಂದಳು.

ಅಷ್ಟು ಹೊತ್ತಿನಲ್ಲಿ ಪುನಃ ಮಲಗಿಕೊಳ್ಳಲು ಅವಳಿಗೆ ಮನಸ್ಸು ಬರಲಿಲ್ಲ. ಹೊರಗಡೆ ಬಂದಳು. ಅಕ್ಕಪಕ್ಕದಲ್ಲಿ ಕೋಳಿಗಳು ಕೂಗುತ್ತಿದ್ದವು. ರಾತ್ರಿ ಪ್ರಕಾಶಮಾನವಾಗಿ ಬೆಳಗುತ್ತಿದ್ದ ಚಂದ್ರನು ತೇಜೋರಹಿತವಾಗಿದ್ದನು. ಹಕ್ಕಿಗಳ ಚಿಲಪಿಲ ಧ್ವನಿಯು ಆರಂಭವಾಗಿತ್ತು. ತಣ್ಣನೆಯ ಗಾಳಿಯು ಬೀಸುತ್ತಿದ್ದಿತು. ಸಣ್ಣ ಮಂಜು ಬೀಳುತ್ತಿದ್ದಿತು. .ಒಡೆದ ಅಭ್ರಕದ ಚೂರುಗಳಂತೆ ಕತ್ತಲೆಯು ತುಂಡು ತುಂಡಾಗಿ ಕೆಳಗೆ ಬೀಳುತ್ತಿತ್ತು. ಅವುಗಳ ನಡುವೆ ಹೊಸ ಬೆಳಕು ಹುಟ್ಟುತ್ತಿದ್ದಿತು.

ವಿಮಲೆಯು ಅಲ್ಲಿ ಮೆಲ್ಲನೆ ಓಡಿಯಾಡತೊಡಗಿದಳು. ಸ್ಫಟಿಕದಂತೆ ಶುಭ್ರವಾಗಿದ್ದ ಮನಸ್ಸಿನಲ್ಲಿ ಆಲೋಚನೆಗಳು ಬರಲಾರಂಭಿಸಿದವು ಆ ಆಲೋಚನೆಗಳು ಹೊಸನೇನೂ ಅಲ್ಲ. ಹಳೆಯವೇ ?

ಮನೆಯಲ್ಲಿ ಅವಳು, ಅವಳ ಅಣ್ಣ ಶಂಕರ ಇಬ್ಬರೇ ದೊಡ್ಡವರು. ಅವರೆಂದೂ ಯಾವುದಕ್ಕೂ ಅಲೋಚನೆ ಮಾಡಿದವರೇ ಅಲ್ಲ. ಒಂದು ವೇಳೆ ಆಲೋಚನೆ ಮಾಡಿದ್ದಿದ್ದರೆ ಆ ಆಲೋಚನೆಗಳು ಸಾರ್ಥಕವಾಗುತ್ತಿದ್ದವೋ ಇಲ್ಲವೋ ಅದನ್ನೂ ಹೇಳಲಾಗುವುದಿಲ್ಲ. ಪರಿಸ್ಥಿತಿಗಳು ಹೇಗೆ ಬಂದರೆ ಹಾಗೆ ಹೋಗುತ್ತಿದ್ದರು.

ಕೆಲವರು ತಾವು ಅತ್ಯಂತ ಮೇಧಾವಿಗಳೆಂದೂ ತಮ್ಮ ಆಲೊ ೬

ಗಳಂತೆಯೇ ಜೀವನವು ನಡೆಯುತ್ತದೆಂದೂ ಭಾವಿಸುತ್ತಾರೆ. ಆದರೆ ವಾಸ್ತವ ವಾದ ಪರಿಸ್ಥಿತಿಯೇ ಬೇರೆ! ಯಾರ ಆಲೋಚನೆಯಂತೆಯೂ ಯಾರ ಜೀವ ನವೂ ನಡೆಯುವುದಿಲ್ಲ. ಅದೆಲ್ಲಾ ಸುಳ್ಳು. ಪರಿಸ್ಥಿತಿಗಳಿಗೆ ಅನುಸಾರವಾಗಿಯೇ ನಡೆಯುತ್ತದೆ. ತಮ್ಮ ಜೀವನವೂ ಅಷ್ಟೇ!

ಅಪ್ಪ ಸಾಯುವ ಮೊದಲು ತಾವು ಹಣವನ್ನೇನು ಮಾಡಿದರೆಂಬು ದನ್ನು ಅಮ್ಮನಿಗೆ ಹೇಳಿಯೇ ಇದ್ದಿರಬೇಕು. ಅಮ್ಮ ಸಾಯುವ ಮೊದಲು ತಾವದನ್ನು ಕೇಳಿ ತಿಳಿದುಕೊಂಡಿದ್ದರೆ ಈಗ ಈ ಕಷ್ಟವಿರುತ್ತಿರಲಿಲ್ಲ. ಅದೇಕೆ ಕೇಳಿ ತಿಳಿದುಕೊಳ್ಳಲಿಲ್ಲ. ಕೇಳಿ ತಿಳಿದುಕೊಳ್ಳುವಂತಹ ಪರಿಸ್ಥಿತಿಯು ಅಂದು ಇರಲಿಲ್ಲ.

ಅಮ್ಮನಿಗೆ ರೋಗವು ಬಂದಿತು. ಅವರು ನರಳುತ್ತಿದ್ದರು. ಮಕ್ಕಳು ಅವರಿಗೆ ತಮ್ಮ ಕೈಲಾದ ಸೇವೆಯನ್ನು ಮಾಡುತ್ತಿದ್ದರು.

ಆಕೆ ಸತ್ತರು. ಮನೆಯನ್ನು ಬಿಡಬೇಕಾಯಿತು. ಬಿಟ್ಟು ಬಂದರು. ಇಂದು ಈಕಷ್ಟವನ್ನು ಸಹಿಸಬೇಕಾಗಿ ಬಂದಿದೆ. ಇದನ್ನೂ ಸಹಿಸುತ್ತಿದ್ದಾರೆ.

ಇದಕ್ಕೆಲ್ಲಾ ಕಾರಣವೇನು ? ಪರಿಸ್ಥಿತಿಯೇ ಆಗಿದೆ.

ಆದರೆ ಈಗೊಂದು ಹೊಸ ಪರಿಸ್ಥಿತಿಯು ಪ್ರಾಪ್ತವಾಗಿದೆ. ತನ್ನ ಜೀವನದಲ್ಲಿ ವೆಂಕಟರಾಯನೊಬ್ಬನು ಬಂದಿದ್ದಾನೆ. ತಾನಾರು ? ಅವನಾರು? ತಮ್ಮಿಬ್ಬರನ್ನೂ ಪರಿಸ್ಥಿತಿಯೇ ಹತ್ತಿರ ಮಾಡಿದೆ. ಆದರೆ ಅವನ ಗುಣ ವೇನೋ ? ಅವನ ಮನೋಭಾವವೇನೋ ? ಅವನಿಗೂ ತನಗೂ ಸರಿ ಹೊಂದುತ್ತದೆಯೋ? ಅವನು ಅನುಕೂಲವಾದಾಗ ಮನೆಯನ್ನು ನಿರ್ಮಾಣ ಮಾಡಬಲ್ಲನೋ ? ಸುಖವಾದ ಸಂಸಾರವನ್ನು ನಡೆಸಬಲ್ಲನೋ ? ತಾನೂ ಮಕ್ಕಳು ಮರಿಗಳನ್ನು ಹೆತ್ತು ನಾಲ್ಕು ಜನರು ಸರಿ ಎನ್ನುವಂತೆ ಬದುಕು ವುದು ಸಾಧ್ಯವಾಗುತ್ತದೆಯೋ ?

ಈ ಪ್ರಶ್ನೆಗಳೆಲ್ಲದಕ್ಕೂ ಅವಳು ಜವಾಬು ಕೊಡಲಾರದವಳಾಗಿದ್ದಳು. ಪ್ರಶ್ನೆಗಳು ಅವಳ ಮನಸ್ಸಿನಲ್ಲಿ ಗರಗರನೆ ತಿರುಗುತ್ತಿದ್ದುವು. ಉತ್ತರ ಕಾಣ ದಿದ್ದರೂ ಮನಸ್ಸಿಗೆ ಬಂದ ಆ ಭಾವನೆಗಳು ತನಗೆ ವಯಸ್ಸಾಗಿದೆಯೆಂದು ಅವಳಿಗೆ ತೋರುವಂತೆ ಮಾಡಿದುವು. ಆ ಭಾವಗಳೆಂಬ ವಿಹಂಗಗಳು

ಬಾಲ್ಯದಿಂದ ಅವಳನ್ನು ಸ್ತ್ರೀತ್ವಕ್ಕೆ ಪಾರಿಸಿಕೊಂಡು ಬಂದುವು.

ಮನೆಯ ಆಲೋಚನೆಯೂ ಸಹ ಅವಳಿಗೆ ಬರದೇ ಇರಲಿಲ್ಲ. ಶಂಕರನಿಗೆ ಅನುಕೂಲವಾದ ಕೆಲಸವು ಸಿಗುವುದೇ ? ತಂಗಿಯರೆಲ್ಲರಿಗೂ ಮದುವೆ ಮಾಡಿ ಅವರನ್ನು ಗಂಡಂದಿರ ಮನೆಗಳಿಗೆ ಕಳಿಸಲಾಗುವುದೇ ? ಅತ್ತೆಯು ಬದುಕಿರುವವರೆಗೆ ಅವರನ್ನು ಸುಖವಾಗಿ ಸಾಕಲಾಗುವುದೇ ? ಎಂಬ ಆಲೋಚನೆಗಳು ಸಹ ಅವಳಿಗೆ ಬಂದುವು.

ತಂಗಿಯರಿಗೆ ಮದುವೆ ಮಾಡಿ ಗಂಡಂದಿರ ಮನೆಗಳಿಗೆ ಕಳಿಸಿ, ಅಣ್ಣನಿಗೆ ಮದುವೆ ಮಾಡಿ ಅಣ್ಣನನ್ನೂ, ತಮ್ಮನನ್ನೂ, ಅತ್ತೆಯನ್ನೂ, ಅತ್ತಿಗೆಗೆ ಒಪ್ಪಿಸಿದರೆ ಅವಳು ತನ್ನ ಕರ್ತವ್ಯವನ್ನು ನಿರ್ವಹಿಸಿದಂತಾಯಿತು.

ಆ ಆಲೋಚನೆಗಳು ಎಂದಾದರೂ ವೆಂಕಟರಾಯನಿಗೆ ಬಂದಿದ್ದುವೇನು ? ವಿಮಲೆಗೆ ತಿಳಿದಂತೆ ಇಲ್ಲ. ಅವನ ಯೋಚನೆಯ ರೀತಿಯೇ ಬೇರೇ! ಭವಿಷ್ಯದ ಬಗ್ಗೆ ಅವನಿಗೆ ಸ್ವಲ್ಪವೂ ಸಂದೇಹವಿಲ್ಲ. ಅವನಿಗೆ ಜೀವನವು ಪ್ರಕಾಶಮಾನವಾಗಿಯೇ ಕಂಡು ಬರುತ್ತದೆ. ಅವನು ಷೇರುಗಳನ್ನು ಕೊಳ್ಳುವಾಗ ಅವುಗಳ ಬೆಲೆಯು ಹೇಗೆ ಹೆಚ್ಚುತ್ತದೆ ಎಂಬುದಾಗಿ ನಿರೀಕ್ಷೆ ಮಾಡುತ್ತಾನೆಯೋ ಜೀವನವನ್ನು ಆರಂಭಿಸುವಾಗ ಅದು ಸುಖವಾಗಿಯೇ ಇರುತ್ತದೆಂದು ಆಶಾಭರಿತನಾಗಿದ್ದಾನೆ. ಅವನ ಸಂಸಾರ ಚಿತ್ರವು ಚೆನ್ನಾಗಿಯೇ ಇದ್ದಿತು. ಎಕ್ಸ್‌ಟೆನ್ಷನ್ನಲ್ಲಿ ಸೊಗಸಾದ ಮನೆ. ಚೆಂದಾದ ಹೆಂಡತಿ. ಮೋಟಾರು ಕಾರು. ಬ್ಯಾಂಕಿನಲ್ಲಿ ದುಡ್ಡು ಇವುಗಳೆಲ್ಲವನ್ನೂ ಲೆಕ್ಕ ಹಾಕಿದ್ದನು.

ವಿಮಲೆಯ ಅಣ್ಣ, ತಮ್ಮ, ತಂಗಿಯರು ಮತ್ತು ಅತ್ತೆಯ ವಿಷಯದಲ್ಲಿ ಅವನು ಕಠಿಣ ಮನಸ್ಕನಾಗಿರಲಿಲ್ಲ. ಅವರೆಲ್ಲರಿಗೂ ಸಾಧ್ಯವಾದಷ್ಟು ಸಹಾಯ ಮಾಡಬೇಕೆಂದು ಅವನಿಗಿದ್ದಿತು. ಆದರೆ ತಾನು ಮನಸಾರ ಪ್ರೀತಿಸಿದಂತಹ ಹೆಣ್ಣು ತನಗೆ ಬೇಕೆಂದಿದ್ದಿತಷ್ಟೇ !

ಅವನ ಆಸೆ ಭರವಸೆಗಳಲ್ಲಿ ವಿಮಲೆಗೆ ಮೆಚ್ಚುಗೆ ಇದ್ದಿತು. ಆದರೆ ಅದಕ್ಕಾಗಿ ಈ ಕೂಡಲೇ ಅವಳು ತನ್ನವರನ್ನು ತ್ಯಜಿಸಲಾರದವಳಾಗಿದ್ದಳು.

ಅವಳ ಮನೆಯ ಸ್ಥಿತಿಗತಿಗಳು ಮೊದಲಿನಂತೆಯೇ ಇರಲಿಲ್ಲ. ಅದು

ಉತ್ಸಾಹಪೂರ್ಣವಾಗಿದ್ದಿತು. ಅತ್ತೆಯಲ್ಲಿ ಯಾವ ಬದಲಾವಣೆಯನ್ನೂ ನಿರೀಕ್ಷಿಸುವುದು ಸಾಧ್ಯವಿರಲಿಲ್ಲ. ಅವಳು ಅದನ್ನು ನಿರೀಕ್ಷೆಮಾಡಿಯೂ ಇರಲಿಲ್ಲ. ತಮ್ಮ ತಂಗಿಯರು ಮೊದಲಿಗಿಂತ ಎಷ್ಟೋ ಸರಿಹೋಗಿದ್ದರು. ಅಮ್ಮ ಬದುಕಿದ್ದಾಗ ಹಠ ಮಾಡುತ್ತಿದ್ದಂತೆ ಮಾಡದೇ ಹೇಳಿದ ಮಾತು ಕೇಳುತ್ತಿದ್ದರು. ಕೆಲಸ ಕಾರ್ಯದಲ್ಲಿ ಸಹಾಯ ಮಾಡುತ್ತಿದ್ದರು. ಬಹಳ ಒಮ್ಮ ಸಮ್ಮತಿಯಿಂದ ಇದ್ದರು. ಶಂಕರನಲ್ಲಿಯೂ ಅಷ್ಟೆ. ಪೂರ್ಣವಾಗಿ ಬದಲಾವಣೆಯಾಗಿದ್ದಿತು.

ಇದೆಲ್ಲಾ ಒಂದು ವಿಧವಾಗಿ ವೆಂಕಟರಾಯನಿಗೆ ಅನುಕೂಲಕರವಾದ ಪರಿಸ್ಥಿತಿಯಾಗಿದ್ದಿತು.

ನಿಜವಾಗಿಯೂ ವಿಮಲೆಯು ವೆಂಕಟರಾಯನನ್ನು ಮನಸಾರ ಪ್ರೀತಿಸುತ್ತಿದ್ದಳು. ಮರೆಯಾಗುತ್ತಿರುವ ಚಂದ್ರನನ್ನು ನೋಡಿ ಅಂದುಕೊಂಡಳು. ಅವನ ಪರಿಚಯವಾದ ನಂತರ ಅವನೆಷ್ಟೋ ಬೇಕಾದವನಾಗಿದ್ದಾನೆ. ಅವನು ಆ ಮನೆಗೆ ಒಳ್ಳೆಯ ಸ್ನೇಹಿತನಾಗಿದ್ದಾನೆ. ತಾನೂ ಅವನನ್ನು ಪ್ರೀತಿಸುವಾಗ ಅವನನ್ನು ಮದುವೆಯಾಗಿ ಅವನೊಂದಿಗೆ ಸಂಸಾರ ಮಾಡಲು ಅವಳಿಗೆ ಆಕ್ಷೇಪಣೆಯೇನೂ ಇಲ್ಲ. ಆದರೆ ಇದ್ದಕ್ಕೆ ಇದ್ದಂತೆಯೇ ಅವನೊಡನೆ ಹೊರಟು ಹೋಗುವುದೆಂದರೆ ಅದಕ್ಕೆ ಮನ ಒಪ್ಪುವುದಿಲ್ಲ.

ವೆಂಕಟರಾಯನಿಗೆ ಆ ಮಾತು ಹೇಳಿದರೆ ಅದಕ್ಕೆ ಅವನೇನು ಉತ್ತರವನ್ನು ಕೊಡುತ್ತಾನೆಂಬುದೂ ಅವಳಿಗೆ ಗೊತ್ತಿತ್ತು. "ವಿಮಲಾ! ನಾನು ಇದೆಲ್ಲಕ್ಕೂ ಒಪ್ಪಿಕೊಳ್ಳುತ್ತೇನೆ. ಆದರೆ ನನ್ನ ನ್ಯಾಯವನ್ನೂ ಸ್ವಲ್ಪ ಕೇಳು. ಕೆಲವು ದಿನಗಳ ಕಾಲ ನೀನು ಇವರೊಂದಿಗೆ ಇರುತ್ತೇನೆಂದರೆ ನಾನು ಬೇಡವೆನ್ನುವುದಿಲ್ಲ. ಆದರೆ ಆಯುಷ್ಯವನ್ನೆಲ್ಲಾ ಇಲ್ಲಿಯೇ ಕಳೆಯುತ್ತೇವೆಂದು ನೀನು ಭಾವಿಸುವುದಾದರೆ ನಾನದನ್ನು ವಿರೋಧಿಸುತ್ತೇನೆ" ಎಂಬುದಾಗಿ ಹೇಳುತ್ತಾನೆ.

ಆ ಮಾತಿಗೆ ವಿಮಲೆಯ ಬಳಿ ಜವಾಬು ಇರಲಿಲ್ಲ.

## 2

ಆ ದಿನ ಮಧ್ಯಾಹ್ನ ಸುಮಾರು ನಾಲ್ಕು ಗಂಟೆಯ ಸಮಯದಲ್ಲಿ ವಿಮಲೆಯು ಕಾರಿನಲ್ಲಿ ಕುಳಿತು ಮೈಸೂರಿನ ಕಡೆಗೆ ಹೋಗುತ್ತಿದ್ದಳು. ಅವಳ ಪಕ್ಕದಲ್ಲಿಯೇ ಕುಳಿತು ವೆಂಕಟರಾಯನು ಕಾರು ನಡೆಸುತ್ತಿದ್ದನು. ಹೊಸದಾದ ಆ ಕಾರು ಏರುಪೇರುಗಳಿಲ್ಲದ ನೇರವಾದ ಸಿಮೆಂಟ್ ರಸ್ತೆಯ ಮೇಲೆ ಸರಾಗವಾಗಿ ಹರಿದು ಹೋಗುತ್ತಿತ್ತು.

ಬಹಳ ದಿನಗಳಿಂದಲೂ ಎಲ್ಲಿಯಾದರೂ ಒಂದೆರಡು ದಿನ ಹೊರಗೆ ಹೋಗಬೇಕೆಂದು ವೆಂಕಟರಾಯನು ವಿಮಲೆಯನ್ನು ಬಲಾತ್ಕಾರ ಮಾಡುತ್ತಿದ್ದನು. ಎಷ್ಟೋ ಬಾರಿ ಅವಳು ಇಲ್ಲನಲ್ಲದ ನೆವಗಳನ್ನು ಹೇಳಿ ಅದನ್ನು ಮುಂದೆ ಹಾಕಿದ್ದಳು. ಒತ್ತಾಯದ ಮೇಲೆ ಒತ್ತಾಯವು ಬಂದು ಅವಳು ಒಪ್ಪಿಕೊಂಡಳು. ಒಪ್ಪಿಕೊಂಡ ನಂತರವೂ ಅನೇಕ ದಿನ ತಪ್ಪಿಸಿಕೊಂಡಳು.

ಕಡೆಗೊಂದು ದಿನ ಭಾನುವಾರ ಎಲ್ಲರೂ ಇದ್ದಾಗ ವೆಂಕಟರಾಯನು ಮನೆಗೆ ಬಂದಿದ್ದನು.

ಮಾತನಾಡುತ್ತಾ ಕುಳಿತಿರುವಾಗ ವಿಮಲೆಯು" ಶಂಕರ. ನಾನೊಂದು ಬಾರಿ ಮೈಸೂರಿಗೆ ಹೋಗಿ ಬರಬೇಕೆಂದಿದ್ದೇನೆ " ಎಂದು ಹೇಳಿದಳು.

ಶಂಕರನು " ನಿನಗೂ ಬೇಜಾರಾಗಿಬಹುದು. ಎರಡು ದಿನ ಹೋಗಿ ಬಾ. ವರದಾ, ಶೀಲೆಯರು ಮನೆಯನ್ನು ನೋಡಿಕೊಳ್ಳುತ್ತಾರೆ. ಆದರೆ ಮೈಸೂರಿಗೆ ಹೋದರೆ ಎಲ್ಲಿಳಿಯುತ್ತೀಯೆ ?" ಎಂದು ಕೇಳಿದನು.

ವಿಮಲೆಯು ತನ್ನ ಗೆಳತಿ ಇಂದಿರೆಯ ಮನೆಯಲ್ಲಿ ಇಳಿಯುವುದಾಗಿ ಹೇಳಿದಳು.

ಹೋಗುವುದು ನಿರ್ಣಯವಾದ ನಂತರ ಎಂದು ಹೊರಡುವುದೆಂಬ ವಿಷಯದಲ್ಲಿ ಚರ್ಚೆಯು ಬಂದಿತು. ಅದಕ್ಕಿಂತಲೂ ಸ್ವಾರಸ್ಯವಾದ ಬೇರೊಂದು ವಿಷಯವು ಅವರಿಗೆ ಚರ್ಚೆಗೆ ಇರಲಿಲ್ಲ.

ಆಗ ಸೂಕ್ಷ್ಮವಾಗಿ ವೆಂಕಟರಾಯನು ತಾನು ಮೈಸೂರಿನಿಂದ ಒಂದು ಕಾಗದ ಬರುವ ನಿರೀಕ್ಷೆಯಲ್ಲಿರುವುದಾಗಿಯೂ, ಅದೇನಾದರೂ ಬಂದರೆ ಅದೇ ವಾರ ಪ್ರಯಾಣ ಮಾಡುವುದಾಗಿಯೂ, ವಿಮಲೆಯು ಬಂದರೆ ಕರೆದು ಕೊಂಡು ಹೋಗಲು ತನಗೆ ಅಡ್ಡಿ ಇಲ್ಲವೆಂದೂ ಹೇಳಿದನು. ಆದರೆ ವಾಪ್ಸು ಬರುವಾಗ ತನ್ನ ಸ್ನೇಹಿತರೊಬ್ಬರು ಮೈಸೂರಿನಿಂದ ಬರುವುದರಿಂದ ವಿಮ ಲೆಯು ರೈಲಿನಲ್ಲಿ ಬರಬೇಕೆಂದೂ ಸೂಚಿಸಿದನು.

ಅದನ್ನು ಎಲ್ಲರೂ ಒಪ್ಪಿದರು.

ಈ ರೀತಿಯಾಗಿ ಆ ಪ್ರಣಯಿಗಳು ತಮ್ಮ ಪ್ರಯಾಣವನ್ನು ಅನುವು ಗೊಳಿಸಿದ್ದರು.

ಹೋಗುತ್ತ ಹೋಗುತ್ತಾ ವೆಂಕಟರಾಯನು "ವಿಮ್ಮು! ನಿನ್ನನ್ನು ಬಲಾತ್ಕಾರ ಮಾಡಿ ಕರೆದುಕೊಂಡು ಬಂದುದರಿಂದ ನೀನು ಖುಷಿಯಾಗಿರು ವುದಿಲ್ಲವೆಂದಿದ್ದೆ. ಆದರೆ ಹಾಗಾಗದೇ ನೀನು ಖುಷಿಯಾಗಿದ್ದೀಯೆ. ಅದು ನನ್ನ ಪುಣ್ಯ"ವೆಂದು ಹೇಳಿದನು.

ವಿಮಲೆಯು ಖುಷಿಯಾಗಿಯೇ ಇದ್ದಳು. ಈ ಪ್ರಯಾಣವು ಅವ ಳನ್ನು ಬಹಳ ಉತ್ಸುಕಳನ್ನಾಗಿ ಮಾಡಿದೆ. ಕಾರಿನ ಪ್ರಯಾಣವು ಅವಳಿಗೆ ಹೊಸದೇನೂ ಅಲ್ಲ. ಎಷ್ಟೋ ಬಾರಿ ಕಾರಿನಲ್ಲಿ ಅವಳು ಹೋಗಿದ್ದಾಳೆ. ಈಗ ಹೋಗುತ್ತಿರುವುದಕ್ಕಿಂತಲೂ ಉತ್ತಮವಾದ ಕಾರಿನಲ್ಲಿ ಹೋಗಿದ್ದಾಳೆ. ಮೈಸೂರಿಗೂ ಎಷ್ಟೋ ಬಾರಿ ಕಾರಿನಲ್ಲಿಯೇ ಹೋಗಿದ್ದಾಳೆ. ಆದರೆ ಆಗ ಹೋಗುತ್ತಿದ್ದುದಕ್ಕೂ ಈಗ ಹೋಗುತ್ತಿರುವುದಕ್ಕೂ ಬಹಳ ವ್ಯತ್ಯಾಸವಿದೆ.

ಆಗ ಮನೆಯವರೊಂದಿಗೋ ಅಥವಾ ಗೆಳತಿಯರೊಂದಿಗೋ ಹೋಗುತ್ತಿದ್ದಳು. ಈಗವಳು ಮನದನ್ನನೊಂದಿಗೆ ಹೋಗುತ್ತಿದ್ದಾಳೆ.

ಎಂದಿಗಿಂತಲೂ ಅವಳಿಗೆ ರಸ್ತೆಯೂ ವಾತಾವರಣವೂ ಮೋಹಕವಾಗಿ ಕಂಡಿತು. ದಾರಿಯಲ್ಲಿ ಸಿಕ್ಕಿದ ಪ್ರತಿ ಮರವೂ ಹಸಿರು ತೋರಣ ಕಟ್ಟಿ ದಂತೆ ಕಂಡು ಬರುತ್ತಿತ್ತು. ಎದುರಿಗೆ ಕಂಡ ದೊಡ್ಡ ಕಲ್ಲುಬಂಡೆಗಳಲ್ಲಿಯೂ

ಏನೋ ಹೊಸ ಸೊಗಸು ಕಂಡಿತು. ಭರ್ರನೆ ಬೀಸುತ್ತಿದ್ದ ಗಾಳಿಯು ಮನಸ್ಸಿಗೆ ಬಹಳ ಪ್ರಿಯವಾಗಿದ್ದಿತು.

ಇಂತಹ ಸುಖ ಪ್ರಯಾಣವನ್ನು ಎಂದೂ ಮಾಡಿಲ್ಲವೆನಿಸುತ್ತಿತ್ತು.

ಮದ್ದೂರಿನ ರೈಲ್ವೆ ಸ್ಟೇಷನ್ ಬಳಿಗೆ ಬರುವ ವೇಳೆಗೆ ಐದು ಗಂಟೆಯಾಗಿದ್ದಿತು. ಇಬ್ಬರೂ ಅಲ್ಲಿನ ವಡೆಗಳನ್ನು ತಿಂದು ಕಾಫಿಯನ್ನು ಕುಡಿದು ಮುಂದೆ ಹೊರಟರು.

ಟ್ರಾವಲರ್ಸ್ ಬಂಗಲೆಯನ್ನು ದಾಟಿದ ನಂತರ ವಿಮಲೆಯು "ನಾವು ಮದುವೆಯಾಗುವುದನ್ನು ನಿಮ್ಮ ತಾಯಿತಂದೆಗಳು ಒಪ್ಪುತ್ತಾರೆಯೇ ?" ಎಂದು ಕೇಳಿದಳು.

ಅವನು ಉತ್ಸಾಹದಿಂದ "ಒಪ್ಪದೇ ಏನು ?" ಎಂದನು.

"ಅವರು ಯಾವ ಹುಡುಗಿಯನ್ನೂ ನೋಡಿಲ್ಲವೆ ?"

"ನೋಡುತ್ತಿದ್ದಾರೆ. ಹುಡುಗಿಯರೂ ಬರುತ್ತಿದ್ದಾರೆ. ಆದರೆ ನನ್ನನ್ನು ಕೇಳದೇ ಅವರೇನೂ ಮಾಡುವುದಿಲ್ಲ. ನಾನು ಹೇಳಿದುದಾವುದಕ್ಕೂ ಅವರು ಬೇಡವೆನ್ನುವುದಿಲ್ಲ. ನನ್ನನ್ನು ಕೇಳದೇ ಅವರು ಏನೂ ನಿರ್ಧರ ಮಾಡುವುದಿಲ್ಲ. "

ವಿಮಲೆಯು ನಗುತ್ತಾ "ತಾಯಿತಂದೆಗಳಿಗೆ ಒಬ್ಬನೇ ಮಗನಾಗಿರುವುದು ಬಹಳ ಒಳ್ಳೆಯದೆಂದು ಕಾಣುತ್ತದೆ" ಎಂದಳು.

ವೆಂಕಟರಾಯನು ಆ ಮಾತಿಗೆ ನಕ್ಕುಬಿಟ್ಟನು.

ಇನ್ನೂ ಸ್ವಲ್ಪ ಹೊತ್ತು ತಡೆದು ವಿಮಲೆಯು "ನನ್ನ ವಿಷಯವೇನಾದರೂ ಅವರಿಗೆ ಬರೆದಿದ್ದೀರಾ ?" ಎಂದು ಕೇಳಿದನು.

ಅವನು ತನ್ನ ಎಡಗೈಯನ್ನು ಅವಳ ಸೊಂಟದಸುತ್ತಲೂ ಹಾಕಿ ಅವಳನ್ನು ಮತ್ತೂ ಸಮೀಪಕ್ಕೆ ಎಳೆದುಕೊಂಡನು. ಅವಳೂ ಒರಗಿಕೊಂಡಳು.

ವೆಂಕಟರಾಯನು "ಇಲ್ಲ, ವಿಮ್ಮು. ಈಗೀಗ ನಮ್ಮ ಪರಿಚಯವಾದ ಮೇಲೆ ನಾನು ಊರಿಗೆ ಕಾಗದವನ್ನೇ ಬರೆದಿಲ್ಲ" ಎಂದನು.

"ಯಾಕೆ ಬರೆದಿಲ್ಲ ?"

"ಯಾವಾಗಲೂ ಹಾಗೆಯೇ ! ಕಾಗದಗಳನ್ನು ಬರೆಯುವುದು ನನಗೆ ಅಭ್ಯಾಸವಿಲ್ಲ"

ವಿಮಲೆಯು ಅವನ ಮುಖವನ್ನು ನೋಡುತ್ತಾ “ ನಮಗೆ ಮದುವೆ ಯಾದ ಮೇಲೆ ನಿಮಗೇನಾದರೂ ಕೆಲಸ ಬೀಳುತ್ತದೆ ಎಂದುಕೊಳ್ಳಿ. ಆಗ ನೀವು ಹೋಗುತ್ತೀರಿ. ಅಲ್ಲಿಯೇ ಕೆಲವು ದಿನಗಳಿರ ಬೇಕಾಗುತ್ತದೆ. ಆಗ ನನಗೂ ಅಷ್ಟೇ. ನಾನು ನಿಮ್ಮ ಕಾಗದಗಳೂ ಸಹ ಇಲ್ಲದೆ ಕೊರಗ ಬೇಕಾಗಬಹುದಲ್ಲವೇ ?” ಎಂದಳು.

ಅವನು ಅವಳನ್ನು ಚುಂಬಿಸಿ “ ಎಲ್ಲಿಯಾದರೂ ಉಂಟೆ, ಚಿನ್ನಾ ! ನನ್ನ ಹೆಂಡತಿಗೆ ಕಾಗದಗಳನ್ನು ಬರೆಯದಿರಲು ನನ್ನ ಮನಸ್ಸು ಒಪ್ಪುತ್ತ ದೆಯೇ ? ಕಾಗದಗಳನ್ನು ಬರೆದು ಕಳಿಸಲು ಆಗದಿದ್ದಾಗ ಯಕ್ಷನು ಮೇಘ ದೊಂದಿಗೆ ಪ್ರಿಯೆಗೆ ಸಂದೇಶವನ್ನು ಕಳಿಸುತ್ತಿದ್ದಂತೆ. ನಾನೂ ಹಾಗೆಯೇ ಅಲ್ಲವೇ, ವಿಮ್ಮಿ. ನನ್ನ ವಿಮ್ಮಿಗೆ ದಿನವೂ ಕಾಗದಗಳನ್ನು ಬರೆಯು ತ್ತೇನೆ ” ಎಂದನು.

ಅವಳು ಆ ಮಾತನ್ನು ಪೂರ್ಣವಾಗಿ ನಂಬಿದಳೋ, ಇಲ್ಲವೋ ? ಅಂತೂ ಆ ಮಾತು ಅವಳಿಗೆ ಪ್ರಿಯವಾಗಿದ್ದಿತು.

ಪುನಃ ಅವನು “ ವಿಮ್ಮಿ, ನಾನು ನಿನ್ನನ್ನು ನೋಡಿದ ನಂತರ ನನಗೇನೂ ಬೇಡವಾಗಿದೆ. ಮನೆ ಬೇಡ. ಮಠ ಬೇಡ. ತಾಯಿತಂದೆ ಗಳು ಬೇಡ. ಈ ವ್ಯಾಪಾರವೂ ಬೇಡ. ಹೀಗಾಗಿದೆ. ನಾನು ಹುಚ್ಚನಾಗಿ ಹೋಗಿದ್ದೇನೆ. ಹೀಗಿರುವಾಗ ಕಾಗದ ಬರೆಯಲು ಮನಸ್ಸು ಬರುತ್ತ ದೆಯೇ ?” ಎಂದನು.

“ ಕಾಗದಗಳನ್ನು ಬರೆಯದಿದ್ದರೂ ಬೇಡ. ಹುಚ್ಚರಾಗಬೇಡಿ ” ಎಂದು ಹೇಳಿ ವಿಮಲೆಯು ನಕ್ಕಳು.

ಪ್ರಣಯಿಗಳಿಬ್ಬರೂ ಸುಖ ಪ್ರಯಾಣ ಮಾಡಿದರು. ದಾರಿಯಲ್ಲಿ ಯಾರೂ ಇಲ್ಲದಿರುವಾಗ ಹತ್ತಿರ ಹತ್ತಿರ ಕುಳಿತುಕೊಂಡು ಹೋಗುತ್ತಿ ದ್ದರು. ಯಾರಾದರೂ ದಾರಿ ಹೋಕರು ಕಂಡರೆ ಸರಿದು ಕೂರುತ್ತಿದ್ದರು. ಬೇಕಾದ ಹಾಗೆ ನಗುತ್ತಿದ್ದರು. ನಕ್ಕು ಮಾತನಾಡುತ್ತಿದ್ದರು. ಮೌನ ದಿಂದ ಸಾಗುತ್ತಿದ್ದರು. ಹೀಗವರು ಪ್ರಯಾಣ ಮಾಡಿದರು.

ಮೈಸೂರು ಸಿಗುತ್ತಲೇ ವೆಂಕಟರಾಯನು ಬೃಂದಾವನಕ್ಕೆ ಟೆಲಿಫೋನ್

ಮಾಡಿ ಇಬ್ಬರು ಬರುವುದಾಗಿಯೂ, ಒಂದು ಕೋಣೆಯನ್ನೂ ಎರಡು ಊಟಗಳನ್ನೂ ಸಿದ್ಧ ಮಾಡಿರಬೇಕೆಂದು ಫೋನ್ ಮಾಡಿದನು.

ಅನಂತರ "ವಿಮಲಾ! ಸ್ವಲ್ಪ ಕಾಫಿ ಕುಡಿದು ಬೃಂದಾವನಕ್ಕೆ ಹೊರಟು ಹೋಗೋಣ. ಶನಿವಾರ ದೀಪಗಳನ್ನು ಹಾಕಿರುತ್ತಾರೆ. ಜನರ ಗದ್ದಲವೂ ಇರುವುದಿಲ್ಲ" ಎಂದು ಹೇಳಿದನು.

ಸುಮಾರು ಏಳು ಏಳೂವರೆ ಗಂಟೆಯ ವೇಳೆಗೆ ಅವರು ಬೃಂದಾವನವನ್ನು ಸೇರಿದರು. ಹೊರಗೆ ಕಾರು ಬಿಟ್ಟು ಕೋಣೆಗೆ ಹೋಗಿ ಸಾಮಾನುಗಳನ್ನಿಟ್ಟರು. ಆ ದಿನ ಚಳಿಯಾಗಿದ್ದರೂ ಪ್ರಯಾಣದಿಂದ ಮೈಬೆವರಿದ್ದಿತು. ಬಿಸಿ ನೀರಿನಲ್ಲಿ ಸ್ನಾನ ಮಾಡಿ ಬಟ್ಟೆಗಳನ್ನು ಬದಲಾಯಿಸಿ ಹೊರಗೆ ಬಂದು ಕುಳಿತುಕೊಂಡರು.

ವೆಂಕಟರಾಯನು ವಿಮಲೆಯ ಅಪ್ಪಣೆಯನ್ನು ಪಡೆದು ವಿಸ್ಕಿಯನ್ನು ತೆಗೆದುಕೊಂಡನು ವಿಮಲೆಯು ನಿಂಬೇ ಹಣ್ಣಿನ ಷರಬತ್ತು ಕುಡಿದಳು.

ಇದಿಷ್ಟಾದ ನಂತರ ಜಗನ್ಮೋಹಕವಾದ ಆ ಉದ್ಯಾನ ವನದಲ್ಲಿ ಬಹಳ ಹೊತ್ತು ಸಂಚರಿಸುತ್ತಿದ್ದರು. ಯಾರೂ ಇಲ್ಲದ ಆ ಪ್ರದೇಶದಲ್ಲಿ ಅವರು ಜೊತೆ ಪಾರಿವಾಳಗಳಂತೆ ಉಬ್ಬುತ್ತಾ, ಹಿಗ್ಗುತ್ತಾ ಓಡಿಯಾಡಿದರು.

ಒಂಬತ್ತು ಗಂಟೆಯ ವೇಳೆಗೆ ಹೋಟಲಿಗೆ ಹೋದರು. ಮೇಜದ ಮೇಲೆ ಊಟಗಳನ್ನು ಒಪ್ಪವಾಗಿ ಅಣಿ ಮಾಡಲಾಗಿತ್ತು. ಕುಳಿತು ಊಟ ಮಾಡಿದರು. ಭೋಜನಾ ನಂತರದಲ್ಲಿ ಹೋಟಲಿನ ಬಲ ಭಾಗದಲ್ಲಿ ಮರದ ಕೆಳಗೆ ಚೆನ್ನಾಗಿ ಬೆಳೆದಿದ್ದ ಹುಲ್ಲಿನ ಮೇಲೆ ಬಲು ಹೊತ್ತು ಅವರಿಬ್ಬರೂ ಅಲ್ಲಿ ಕುಳಿತು ಮಾತನಾಡುತ್ತಿದ್ದರು. ತೋರಿದ ಮಾತುಗಳನ್ನು ಮನ ಬಂದಂತೆ ಆಡುತ್ತ ಕುಳಿತಿದ್ದ ಅವರಿಗೆ ಕಾಲದ ಪರಿವೆಯೇ ಇರಲಿಲ್ಲ.

ಅವರು ಕುಳಿತುಕೊಂಡಿದ್ದ ಪ್ರದೇಶಕ್ಕೆ ಎದುರಾಗಿ ಕಟ್ಟೆಯಿಂದ ನಾಲೆಗೆ ನೀರು ಹರಿಯುತ್ತಿತ್ತು. ನೀರು ಬೋರ್ಗರೆಯುತ್ತಾ ಕೆಳಗೆ ಧುಮುಕುತ್ತಿತ್ತು. ಬೀಳುವ ನೀರಿನ ಮೇಲೂ ಹರಿಯುವ ನೀರಿನ ಮೇಲೆಯೂ ಬೆಳಕು ಚೆಲ್ಲಿತ್ತು. ಆ ಪ್ರಕಾಶವು ಪ್ರಣಯಿಗಳ ಮೇಲೆ ಬಿದ್ದಿದ್ದಿತು.

ವೆಂಕಟರಾಯನು ಪ್ರತಿ ಕ್ಷಣವೂ ಅವಳನ್ನು ಒಲಿಸಿಕೊಳ್ಳುವುದು ಹೇಗೆಂದು ಯೋಚಿಸುತ್ತಿದ್ದನು. ಒಂದು ಕ್ಷಣದಲ್ಲಿ ಅವಳು ಅವನ ಕೈಗೆ

ಸಿಕ್ಕಿದಂತೆ ಭಾಸವಾಗುತ್ತಿದ್ದಿತು. ಮತ್ತೊಂದು ಕ್ಷಣ ಅವಳು ಕೈ ತಪ್ಪಿಸಿ ಕೊಂಡು ಹಾರಿ ಹೋದಂತೆ ತೋರಿತ್ತಿದ್ದಿತು.

ಅಂತೂ ವೆಂಕಟರಾಯನು ಅವಳನ್ನು ಸಮೀಪಿಸಲು ಧೈರ್ಯ ಬರದೇ ಸಂಕೋಚ ಪಡುತ್ತಿದ್ದನು.

ಹೀಗಿರುವಾಗ ವಿಮಲೆಯು " ನಿದ್ದೆ ಬರುವಂತಿದೆ. ಹೋಗಿ ಮಲಗಿ ಕೊಳ್ಳೋಣವೇ ?" ಎಂದು ಕೇಳಿದಳು.

ಅವನು ವಿಮಲೆಗೆ ಎದುರಾಗಿ ಕುಳಿತುಕೊಂಡಿದ್ದನು. ಅವಳು ಸಣ್ಣ ಮರವೊಂದನ್ನು ಒರಗಿಕೊಂಡು ಕುಳಿತುಕೊಂಡಿದ್ದಳು. ನೀರಿನ ಮೇಲೆ ಬಿದ್ದ ಪ್ರಕಾಶವು ಅವಳ ಮೇಲೆ ಪ್ರತಿಬಿಂಬಿಸುತ್ತಿದ್ದಿತು. ಆ ಪ್ರಕಾಶವು ಬೆಳದಿಂಗಳಿಗಿಂತಲೂ ಮನೋಹರವಾಗಿದ್ದಿತು. ತಾಂಬೂಲವನ್ನು ಹಾಕಿ ಕೊಂಡ ಅವಳ ತುಟಿಗಳು ರಕ್ತಾರುಣ ವರ್ಣದಿಂದ ಕಂಗೊಳಿಸುತ್ತಿದ್ದವು. ನಿದ್ದೆಯಿಂದ ಅವಳ ಕಣ್ಣುಗಳು ಅರ್ಧ ಮುಚ್ಚಿಕೊಂಡಿದ್ದವು. ಮರಕ್ಕೆ ಒರಗಿ ಕುಳಿತಿದ್ದ ಅರೆ ಮುಚ್ಚಿದ ಕಣ್ಣಿನ ಆ ಸುಂದರಿಯು ಮದಾಲಸೆ ಯಂತೆ ಕಂಡು ಬರುತ್ತಿದ್ದಳು.

ಅದನ್ನು ನೋಡಿದುದರಿಂದ ಉಂಟಾದ ಭಾವೋದ್ರೇಕದಿಂದ ಮನಸ್ಸಿ ನಲ್ಲಿದ್ದ ಸಂಕೋಚವು ಮರೆಯಾಯಿತು. ಅವನು ಅವಳನ್ನು ಸಮೀಪಿಸಿ ಆಲಂಗಿಸಿದನು. ಚುಂಬಿಸ ತೊಡಗಿದನು.

ಅದು ಅವಳಿಗೂ ಪ್ರಿಯವಾಗಿದ್ದಿತೋ ಏನೋ, ವಿಮಲೆಯು ಪ್ರತಿ ರೋಧ ಮಾಡಲಿಲ್ಲ.

ಹಾಗೆಯೇ ಸ್ವಲ್ಪ ಹೊತ್ತು ಕಳೆಯಿತು. ವಿಮಲೆಯು ಪ್ರತಿರೋಧ ಮಾಡುತ್ತಾ ಎದ್ದು ನಿಂತಳು.

ಅವನೂ ಎದ್ದು ನಿಂತು ತೊದಲುತ್ತಾ " ವಿಮ್ಮಾ. ಈ ದಿನ ನೀನು ನನ್ನವಳಾಗಬೇಕು " ಎಂದು ಹೇಳಿದನು.

ಅವಳು ಮಾತನಾಡಲಿಲ್ಲ.

ವೆಂಕಟರಾಯನು ಅವಳ ಕಡೆಗೆ ನೋಡಲಿಲ್ಲ. ಅವಳ ಮುಖ ಭಾವ ವನ್ನು ಗಮನಿಸಲಿಲ್ಲ. ಅವಳ ಸೊಂಟಕ್ಕೆ ಕೈ ಹಾಕಿ ಅವಳನ್ನು ಎಳೆದು ಕೊಂಡು ಹೋಟಲಿನ ಕಡೆಗೆ ಹೋದನು.

ಆಗ ರಾತ್ರಿ ಹನ್ನೊಂದು ಹನ್ನೊಂದೂವರೆಯಾಗಿದ್ದಿತು. ಹೋಟಲಿ ನಲ್ಲಿ ಆಳುಕಾಳುಗಳಾಗಲೀ ವೈಟರ್‌ಗಳಾಗಲೀ ಇರಲಿಲ್ಲ. ಇದ್ದಿದ್ದರೆ ನಡು ರಾತ್ರಿಯಲ್ಲಿ ವಯಸ್ಸಿಗೆ ಬಂದ ಆ ಹೆಂಗಸನ್ನು ಎತ್ತಿಕೊಂಡು ಹೋಗುತ್ತಿದ್ದ ಗಂಡಸನ್ನವರು ನೋಡುತ್ತಿದ್ದರು.

ಎರಡು ದಿನಗಳ ನಂತರ ತಾನು ಮನೆಯಲ್ಲಿ ಹೇಳಿದ್ದಂತೆ ವಿಮಲೆಯು ವಾಪ್ಸು ಬಂದಳು. ಅವಳು ವೆಂಕಟರಾಯನ ಕಾರಿನಲ್ಲಿ ಬರಲಿಲ್ಲ. ರೈಲಿ ನಲ್ಲಿ ಬಂದಳು. ವೆಂಕಟರಾಯನು ಹೇಳಿದ್ದಂತೆ ಎರಡು ದಿನಗಳ ನಂತರ ಬರಲಿಲ್ಲವೆಂದೂ ಅದರಿಂದ ರೈಲಿನಲ್ಲಿ ಬರಬೇಕಾಯಿತೆಂದೂ ಹೇಳಿದಳು.

ಅವಾದ ಮೂರು ನಾಲ್ಕು ದಿನಗಳ ನಂತರ ವೆಂಕಟರಾಯನು ಬಂದನು. ತನ್ನೊಡನೆ ಬರಬೇಕಾಗಿದ್ದ ಸ್ನೇಹಿತರು ಬರಲಿಲ್ಲವೆಂದೂ ಆದರೂ ಯಾವುದೋ ಕೆಲಸವಿದ್ದುದರಿಂದ ವಿಮಲೆಯನ್ನು ವಾಪ್ಸು ಕರತರ ಲಾಗಲಿಲ್ಲವೆಂದು ಹೇಳಿ ಕ್ಷಮಾಯಾಚನೆ ಮಾಡಿದನು.

ಈ ರೀತಿಯಾಗಿ ಪ್ರಣಯಿಗಳ ಬೃಂದಾವನದ ಯಾತ್ರೆಯು ಯಾರಿಗೂ ಆಸಕ್ತಿಯನ್ನು ಉಂಟುಮಾಡದೇ ಕೊನೆಗಂಡಿತು.

ತುಂಬಿದ ಕೊಳದಪ್ಪಲೆಯಿಂದ ಚೆಂಬಿನಷ್ಟು ನೀರು ತೆಗೆದರೆ ನೀರಿನಲ್ಲಿ ಹಳ್ಳವಾಗುವುದಿಲ್ಲ. ಹಾಗೆಯೇ ತಾಯಿಯು ಸತ್ತರೂ ಬಡತನವು ಬಂದರೂ ಅವರು ಉಪವಾಸವಿರಲಿಲ್ಲ, ಸಾಯಲಿಲ್ಲ.

ಶೀಲಳು ಮೊದಲಿನಿಂದಲೂ ಒಳ್ಳೆಯವಳು. ಕಷ್ಟ ಸುಖ ಎಂಬು ದನ್ನು ಅರ್ಥ ಮಾಡಿಕೊಂಡು ನಡೆಯುತ್ತಿದ್ದಳು. ವಿಮಲೆಗೆ ಮೊದಲಿನಿಂ ದಲೂ ವರದಳದೇ ಯೋಚನೆಯಾಗಿ ಹೋಗಿದ್ದಿತು. ಅವಳೂ ಈಗೀಗ ಸರಿಮಾಡಿಕೊಂಡು ಹೋಗುತ್ತಿದ್ದಳು. ವಾಸುವು ಹೆಚ್ಚಾಗಿ ಹಠ ಮಾಡು ತ್ತಿರಲಿಲ್ಲ. ಹೇಳಿದಂತೆ ಕೇಳುತ್ತಿದ್ದಾನೆ.

ಸೋದರತ್ತೆ ಮೊದಲಿನಂತೆಯೇ ಇದ್ದಾರೆ. ಅವರಲ್ಲಿ ಯಾರೂ ಬದಲಾವಣೆಯನ್ನು ಅಪೇಕ್ಷಿಸುತ್ತಿರಲಿಲ್ಲ.

ವಿಮಲೆಗೆ ಶಂಕರನನ್ನು ನೋಡಿದಾಗಲಂತೂ ಆಶ್ಚರ್ಯವಾಗುತ್ತದೆ. ಹೊಸಿಲು ಇಳಿದು ಹೋದರೆ ಅವನಿಗೆ ಮನೆಯ ವಿಷಯವು ಮರೆಯುವುದು ಹಾಗಿರಲಿ, ಮನೆಯಲ್ಲಿದ್ದಾಗ ಸಹ ಅದವನಿಗೆ ನೆನಪಿರುತ್ತಿರಲಿಲ್ಲ. ತಾಯಿಗೆ ಆಗಾಗ ಖಾಯಿಲೆಯು ಉಲ್ಬಣವಾಗುತ್ತಿತ್ತು. ಅಂತಹ ಸಮಯದಲ್ಲಿ ಕೂಡಾ ಅವನು ಮನಸ್ಸಿಗೆ ಹಚ್ಚಿಕೊಳ್ಳದೇ ಇರುತ್ತಿದ್ದನು. ಅಮ್ಮನು ಸಹ ಅವನ ರೀತಿಯನ್ನು ನೋಡಿ ಮನೆಗೆ ಇವನು ಯಜಮಾನನಾದರೆ ಹುಡುಗರು ಮಕ್ಕಳ ಗತಿಯೇನು ಎಂದು ಕೊರಗುತ್ತಿದ್ದರು.

ಆದರೆ ಈಗವನು ಹಿಂದಿನಂತೆ ಅಲ್ಲ. ಅವನಿಗೆ ಏರ್ ಕ್ರಾಫ್ಟ್‌ನಲ್ಲಿ ಕೆಲಸವಾಗಿದೆ. ತಿಂಗಳಿಗೆ ನೂರ ಇಪ್ಪತ್ತು ರೂಪಾಯಿಗಳ ಸಂಬಳವು ಬರುತ್ತದೆ. ಮಧ್ಯಾಹ್ನ ಅರೆ ಹೊಟ್ಟೆ ತಿಂದು ಒಂದು ಕಾಸನ್ನೂ ಪೋಲು ಮಾಡದೇ ಸಂಬಳವನ್ನು ಮನೆಗೆ ತರುತ್ತಾನೆ. ತಂಗಿಯರನ್ನೂ, ತಮ್ಮನನ್ನೂ ಒಂದು ಬಾರಿಯೂ ಗದ್ದರಿಸಿಕೊಳ್ಳುವುದಿಲ್ಲ. ವಿಮಲೆಗೆ ತಂದೆಯನ್ನು ನೋಡಿದ ನೆನಪಿದೆ. ಆದರೆ ಆ ದಿನಗಳು ಚೆನ್ನಾಗಿ ಜ್ಞಾಪಕವಿಲ್ಲ. ಒಂದೊಂದು ದಿನ ಶಂಕರನನ್ನು ನೋಡಿ ನಮ್ಮ ತಂದೆ ನಮ್ಮ ವಿಷಯದಲ್ಲಿ ಇಷ್ಟೇ ವಿಶ್ವಾಸದಿಂದ ಇರುತ್ತಿದ್ದರೇನೂ ಎಂದುಕೊಳ್ಳುತ್ತಾಳೆ.

ಒಂದು ದಿನ ನಡೆದುದನ್ನಂತೂ ವಿಮಲೆಯು ಬದುಕಿರುವವರೆವಿಗೆ ಮರೆಯುವುದಿಲ್ಲ. ಆ ದಿನ ಶಂಕರನಿಗೆ ಮೈ ಚೆನ್ನಾಗಿಲ್ಲದೇ ರಜಾ ತೆಗೆದು ಕೊಂಡು ಮನೆಯಲ್ಲಿಯೇ ಇದ್ದ. ಸಿಗರೇಟು ಸೇದಬೇಕೆಂದು ಒಂದಾಣೆ ಜತೆ ಮಾಡಿಕೊಂಡು ಹೊರಗೆ ಹೊರಟಿದ್ದ. ಅದು ತಿಂಗಳ ಕಡೆ. ಒಂದು ಕಾಸೂ ಇಲ್ಲ. ವಿಮಲೆಯು ಸಾಸುವೆ ಡಬ್ಬಿಯಲ್ಲಿ ಎಂದೋ ಹಾಕಿದ್ದ ಮೂರು ಕಾಸು ಸಹ ತೆಗೆದು ಕೊಟ್ಟಿದ್ದಳು. ಅದೂ ಸೇರಿ ಒಂದಾಣೆಯಾಗಿತ್ತು.

ಆಗ ಬೆಳಗಾಗ ಹತ್ತು ಗಂಟೆ ಇರಬಹುದು. ವಾಸುವು ಊಟ ಮಾಡಿಕೊಂಡು ಸ್ಕೂಲಿಗೆ ಹೊರಟ. ಅವನು ಕೆಂಗೇರಿಯಲ್ಲಿದ್ದ ಮಿಡಲ್ ಸ್ಕೂಲಿಗೆ ಹೋಗುತ್ತಿದ್ದ. ಅವರ ಮನೆಗೆ ಸ್ಕೂಲು ಒಂದೂವರೆ ಎರಡು

ಮೈಲಿಗಳ ದೂರ. ಮಧ್ಯಾನ್ಹ ಊಟಕ್ಕೆ ಬಿಟ್ಟಾಗ ಅವನು ಇಷ್ಟು ದೂರ ಬರಲಾಗುತ್ತಿರಲಿಲ್ಲ. ಅದರಿಂದ ದಿನವೂ ವಿಮಲೆಯು ಏನಾದರೂ ಸ್ವಲ್ಪ ತಿಂಡಿಯನ್ನು ಕೊಡುತ್ತಿದ್ದಳು. ಆ ದಿನ ಕಟ್ಟಿ ಕಳಿಸುವುದಕ್ಕೆ ಏನೂ ಇರಲಿಲ್ಲ.

ವಾಸುವು ಮಧ್ಯಾನ್ಹ ತಿನ್ನುವುದಕ್ಕೆ ಏನಾದರೂ ಬೇಕೆಂದು ಕೇಳಿದನು.

ವಿಮಲೆಯು ಏನೂ ಇಲ್ಲವೆಂದು ಹೇಳಿದಳು.

ಅವನು “ ಸ್ಕೂಲು ಬಿಟ್ಟಾಗ ಹಸಿವಾಗುವುದಕ್ಕಾ ” ಎಂದನು.

ಎಷ್ಟೋ ದಿನ ಹಸಿವಾಗಿ ಅವನಿಗೆ ಅದು ಅನುಭವವಾಗಿದ್ದಿತು.

ಅಕ್ಕನು ತಮ್ಮನ ಗಲ್ಲವನ್ನು ಮೃದುವಾಗಿ ಹಿಡಿದುಕೊಂಡು “ ಈ ದಿನ ಏನೂ ಇಲ್ಲಮ್ಮ, ಹೋಗಿ ಬಂದು ಬಿಡು, ಕಂದ. ಸಂಜೆ ಬಂದ ಕೂಡಲೇ ಅನ್ನ ಹಾಕುತ್ತೇನೆ” ಎಂದು ಒಳ್ಳೆಯ ಮಾತನಾಡಿ ಕಳುಹಿಸಿದಳು.

ವಾಸುವು ಖಿನ್ನನಾಗಿ ಮನೆಯಿಂದ ಹೊರಟನು.

ವಿಮಲೆಗೆ ಆ ಸನ್ನಿವೇಶವು ದುಃಖವನ್ನು ಉಂಟು ಮಾಡಿತು. ಅವಳು ಹೊರಗಡೆ ಬಂದು ಸ್ಕೂಲಿಗೆ ಹೋಗುತ್ತಿರುವ ತಮ್ಮನನ್ನು ನೋಡುತ್ತಾ ನಿಂತುಕೊಂಡಳು.

ವಾಸುವು ಸ್ವಲ್ಪ ದೂರ ಹೋದ ನಂತರ ಶಂಕರನು ಅವನ ಹಿಂದೆ ಹೋದನು. ಅವನು ಮನೆಯ ಕಡೆಗೆ ತಿರುಗಿ ನೋಡಿದನು. ವಿಮಲೆಯು ನಿಂತಿರುವುದು ಅವನಿಗೆ ಕಂಡು ಬರಲಿಲ್ಲವೆಂದು ತೋರುತ್ತದೆ. ತಮ್ಮನನ್ನು ಕರೆದು ಜೇಬಿನಲ್ಲಿದ್ದುದನ್ನು ಅವನ ಕೈಗೆ ತೆಗೆದು ಕೊಟ್ಟು ಏನೋ ಹೇಳಿ ವಾಪ್ಸು ಬಂದನು.

ಶಂಕರನು ವಾಸುವಿಗೆ ಒಂದಾಣೆಯನ್ನು ಕೊಟ್ಟು ತಿಂಡೀ ತೆಗೆದುಕೊಳ್ಳುವಂತೆ ಹೇಳಿದನೆಂದು ವಿಮಲೆಯು ಅರ್ಥ ಮಾಡಿಕೊಂಡಳು.

ಅದನ್ನು ನೋಡಿ ವಿಮಲೆಗೆ ಬಿಕ್ಕಿ ಬಿಕ್ಕಿ ಅಳುವು ಬಂದಿತು.

ಮನೆಯ ಕಡೆ ಬರುತ್ತಿರುವ ಅಣ್ಣನು ತಾನು ಅಳುತ್ತಿರುವುದನ್ನು ನೋಡದಿರಲೆಂದು ಸೆರಗಿನಿಂದ ಕಣ್ಣು ಒರಸಿಕೊಳ್ಳುತ್ತಾ ಅಡಿಗೆಯ ಮನೆಯ ಕಡೆಗೆ ಹೊರಟು ಹೋದಳು.

ಈ ಘಟನೆಯು ಅವಳಿಗೆ ಆಗಾಗ ನೆನಪಿಗೆ ಬರುತ್ತಿದ್ದಿತು. ಅದು ನೆನಪಿಗೆ ಬಂದಾಗಲೆಲ್ಲಾ ತಾನು ಕರ್ತವ್ಯ ಬ್ರಷ್ಟಳಾಗಿದ್ದೇನೆಂದು ಅವಳಿಗೆ ತೋರುತ್ತಿದ್ದಿತು.

೮

ವಿಜಯದಶಮಿ ಬಂದಿತು.

ತಾಯಿ ಸತ್ತ ವರ್ಷವಾದುದರಿಂದ ಹಬ್ಬವಿಲ್ಲ. ಆ ನೆವವಿಲ್ಲದಿದ್ದರೂ ಹಬ್ಬ ಮಾಡುವುದಕ್ಕೆ ಆಗುತ್ತಿದ್ದಿತೋ ಇಲ್ಲವೋ ?

ಹಿಂದಿನ ವರ್ಷ ನವರಾತ್ರಿಯು ಅವರ ಮನೆಯಲ್ಲಿ ಎಷ್ಟೋ ವಿಜೃಂಭಣೆಯಿಂದ ನಡೆಯಿತು. ಹತ್ತು ದಿನವೂ ಪೂಜೆ ಪುನಸ್ಕಾರಗಳೂ ಜಪ ಪುರಾಣ ಪಠಣಗಳು ನಡೆದುವು. ದಿನಕ್ಕೆ ಒಂದೊಂದು ಬಗೆ ಅಡಿಗೆಯನ್ನು ಮಾಡಿದ್ದರು. ವಿಜಯದಶಮಿಯ ಪ್ರಾತಃಕಾಲ ಅಮ್ಮ ಅತ್ತೆಯ ವಿನಾ ಉಳಿದವರು ಕಾರಿನಲ್ಲಿ ಮೈಸೂರಿಗೆ ಹೋದರು. ದಸರಾ ಮೆರವಣಿಗೆ, ಎಗ್ಸಿಬಿಷನ್‌ಗಳನ್ನು ನೋಡಿಕೊಂಡು ಎರಡು ಮೂರು ದಿನಗಳ ನಂತರ ವಾಪ್ಸು ಬಂದಿದ್ದರು.

ಈ ಮನೆಯಲ್ಲಿ ಆ ಐಶ್ವರ್ಯವೂ ಇಲ್ಲ. ಆ ಆನಂದವೂ ಇಲ್ಲ. ಆದರೆ ಒಂದೇ ಒಂದು ಅನುಕೂಲವು ಮಾತ್ರ ಇಲ್ಲಿದೆ. ಈ ಮನೆಯು ಊರಿಗೆ ಒಂದೆರಡು ಮೈಲಿಗಳ ದೂರದಲ್ಲಿದೆ. ನೆರೆ ಹೊರೆಯ ಮನೆಗಳಿದ್ದು ಅವರು ಹಬ್ಬ ಮಾಡಿದ್ದು ಇವರುಗಳು ಏನೂ ಇಲ್ಲದೇ ಇದ್ದಿದ್ದರೆ ಮನಸ್ಸಿಗೆ ಬಹಳ ನೋವಾಗುತ್ತಿದ್ದಿತು. ಅದರಿಂದ ನೆರೆ ಹೊರೆ ಇಲ್ಲದ ಈ ಮನೆಯು ಒಂದು ಆನುಕೂಲವೇ ಆಗಿದ್ದಿತು.

ಮುಖ್ಯವಾಗಿ ಹಬ್ಬವನ್ನು ಮಾಡದೇ ಇರುವುದಕ್ಕೆ ತಾಯಿ ಸತ್ತ ವರ್ಷವೆಂದು ಒಂದು ನೆವವಿದ್ದಿತು.

ವಿಜಯದಶಮಿಯಾದರೂ ಆ ದಿನ ಸಾಧಾರಣವಾದ ಅಡಿಗೆ ಮಾಡಿ ಊಟ ಮಾಡಿದರು.

ಸಾಯಂಕಾಲ ಸುಮಾರು ಆರೂವರೆ ಏಳು ಗಂಟೆಯ ಸಮಯವಿರ

ಬಹುದು. ಜೇಳಿಗೆ ಹೆಸರಿಟ್ಟು ವಿಮಲೆಯು ಹೊರಗೆ ಬಂದು ಕುಳಿತುಕೊಂಡಳು. ಶಂಕರನೂ ಹುಡುಗರೂ ಒಳಗೆ ಕೇರಂ ಆಡುತ್ತಾ ಕುಳಿತಿದ್ದರು. ಯಾರಾದರೂ ಹೊರಗೆ ಬಂದು ತನ್ನೊಡನೆ ಮಾತನಾಡುತ್ತಿರಬಾರದೇ ಎಂದು ಅವಳಿಗೆ ತೋರಿತು. ಅನಂತರ " ಬೇಡ, ಎಷ್ಟೋ ಉತ್ಸಾಹದಿಂದ ಆಟವಾಡುತ್ತಿದ್ದಾರೆ. ಆಡಿಕೊಳ್ಳಲಿ " ಎಂದುಕೊಂಡಳು.

ಇತ್ತೀಚೆಗೆ ವಿಮಲೆಯು ಏಕಾಂತವಾಗಿ ಕುಳಿತುಕೊಂಡಾಗಲೆಲ್ಲಾ ಶಂಕರನನ್ನೂ ತನ್ನನ್ನೂ ಹೋಲಿಸಿಕೊಳ್ಳುತ್ತಿದ್ದಳು. ಈ ದಿನವೂ ಅವಳಿಗೆ ಅದೇ ಆಲೋಚನೆಯು ಬಂದಿತು. ಅವನು ಈ ಸಂಸಾರಕ್ಕಾಗಿ ದುಡಿಯುತ್ತಿದ್ದಾನೆ. ಇದರ ನಿರ್ವಹಣವೇ ತನ್ನ ಕರ್ತವ್ಯವೆಂದು ಕೊಂಡಿದ್ದಾನೆ. ಅದಕ್ಕಾಗಿ ದೇಹವನ್ನು ಸವೆಸುತ್ತಿದ್ದಾನೆ. ಆದರೆ ತಾನು ಮಾತ್ರ ಹಾಗಲ್ಲ. ಸಂಸಾರದಿಂದ ದೂರ ಹೋಗುತ್ತಿದ್ದಾಳೆ. ತನ್ನ ಮತ್ತು ವೆಂಕಟರಾಯನ ಸಂಬಂಧವು ತನ್ನನ್ನು ಕರ್ತವ್ಯಚ್ಯುತಳಾಗಿ ಮಾಡುತ್ತಿದೆ.

ಮರುಕ್ಷಣದಲ್ಲಿಯೇ " ಇಲ್ಲ. ಹೀಗೆ ಯೋಚಿಸುವುದರಿಂದ ನಾನು ಅವನಿಗೆ ದ್ರೋಹ ಮಾಡುತ್ತಿದ್ದೇನೆ " ಎನ್ನಿಸಿತು. ಆದರೆ ಮೊದಲಿನ ಭಾವನೆಯು ಸಮುದ್ರದ ದೊಡ್ಡ ಅಲೆಯಂತೆ ಬಂದು ಹೊಡೆಯಿತು. ಅಣ್ಣನಿಗೆ, ತಂಗಿಯರಿಗೆ, ತಮ್ಮನಿಗೆ, ಅತ್ತೆಗೆ ತಾನು ಬೇಕು. ಇವರೊಂದಿಗೆ ಇದ್ದು ಇವರೊಂದಿಗೆ ಬೆಳೆದ ತನ್ನನ್ನು ಇಂತಹ ಸಮಯಲ್ಲಿ ಎಳೆದುಕೊಂಡು ಹೋಗಲು ಯಾರಿಗೆ ತಾನೇ ಅಧಿಕಾರವಿದೆ ? ಈ ವೆಂಕಟರಾಯನಿಗೆ ತಾನೇ ಈ ಅಧಿಕಾರವೆಲ್ಲಿದೆ ?

ಜನಗಳೇಕೆ ಪ್ರೇಮ ಮಾಡುತ್ತಾರೆ ? ಅವರೇಕೆ ಮದುವೆ ಮಾಡಿಕೊಳ್ಳುತ್ತಾರೆ ? ತಾನು ಅವನನ್ನು ಪ್ರೇಮ ಮಾಡಿದುದೇಕೆ ? ಅದರಿಂದ ಏನು ಲಾಭವಾದ ಹಾಗಾಯಿತು? ಈಗ ತಾನು ಎಲ್ಲಾ ವಿಧವಾಗಿಯೂ ಅವನಿಗೆ ಅಧೀನವಾದಂತೆ ಆಯಿತು.

ಮೊನ್ನೆಯ ದಿನ ವೆಂಕಟರಾಯನು ಬಂದಿದ್ದಾಗ ಅವಳ ಕೈಯನ್ನು ತನ್ನ ಕೈಯಲ್ಲಿಟ್ಟುಕೊಂಡು ಮತ್ತೊಂದು ಕೈಯಿಂದ ಸವರುತ್ತಾ " ಏನೇ ಹೇಳು, ವಿಮ್ಮಿ. ನೀನು ಈ ರೀತಿಯಾಗಿರುವುದು ನನಗೆ ಸಮಾಧಾನವಿಲ್ಲ.

ಅಬ್ಬಾ. ಈ ಮೃದುವಾದ ಕೈಗಳಿಂದ ನೀನು ಮುಸುರೆ ತಿಕ್ಕುವುದನ್ನು ನೋಡುವಾಗಲಂತೂ ನನಗೆ ಹೇಗಾಗುತ್ತದೆ, ಬಲ್ಲೆಯಾ ?" ಎಂದಿದ್ದನು.

ಆ ಮಾತುಗಳು ವಿಮಲೆಗೆ ಜ್ಞಾಪಕಕ್ಕೆ ಬಂದುವು. ಅವನಿಗೆ ಏನೂ ಗೊತ್ತಾಗುವುದಿಲ್ಲ-ವೆಂದು ಕೊಂಡಳು. ಅವಳು ಮನೆಯ ಕೆಲಸಗಳೆಲ್ಲ ವನ್ನೂ ಮಾಡದೇ ಸಂಸಾರವು ನಡೆಯುವಂತಿಲ್ಲ. ವೆಂಕಟರಾಯನು ಮುಸುರೆಯುವಳನ್ನಾದರೂ ಇಟ್ಟುಕೊಳ್ಳಬೇಕೆಂದು ಸಲಹೆ ಮಾಡಿದ್ದ. ವಿಮ ಲೆಗೆ ಅಷ್ಟೂ ಗೊತ್ತಿಲ್ಲವೇ? ಅವಳು ಎಷ್ಟೋ ಸಲ ಹಾಗೆಂದು ಕೊಂಡಿದ್ದಳು. ತಿಂಗಳಿಗೆ ಎರಡು ರೂಪಾಯಿಗಳನ್ನಾದರೂ ಕೊಡದೇ ಮುಸುರೆಯುವಳು ಸಿಗುವುದಿಲ್ಲ. ವಾಸುವು ಹತ್ತು ಹನ್ನೆರಡು ದಿನಗಳಿಂದಲೂ ಹರಕಲು ಬನಿಯನ್ನು ಹಾಕಿಕೊಳ್ಳುತ್ತಾ ಇದ್ದಾನೆ. ಅದೇ ರೂಪಾಯಿ ಇದ್ದಿದ್ದರೆ ಅವನಿಗೊಂದು ಬಟ್ಟೆಯು ಬರುತ್ತಿರಲಿಲ್ಲವೇ ?

ವಿಮಲೆಯು ಒಂದೆರಡು ದಿನಗಳ ಕಾಲ ಮನೆಯಲ್ಲಿಲ್ಲದಿದ್ದರೆ ತಂಗಿ ಯರು ಹೇಗೋ ನಿರ್ವಹಿಸುತ್ತಾರೆ. ಆದರೆ ಅವೆಲ್ಲವೂ ಅವ್ಯವಸ್ಥೆ. ದಂಧ ರಾಳಿತನ. ಪದಾರ್ಥಗಳನ್ನು ಅನ್ಯಾಯವಾಗಿ ಪೋಲು ಮಾಡುತ್ತಾರೆ. ಅವಳು ಹಿಂದಿನ ಬಾರಿ ವೆಂಕಟರಾಯನೊಂದಿಗೆ ಎರಡು ದಿನ ಹೊರಗೆ ಹೋಗಿ ಬರುವುದರೊಳಗಾಗಿ ಒಂದು ದೊಡ್ಡ ಬಟ್ಟಲಿನಷ್ಟು ಎಣ್ಣೆಯನ್ನು ಖರ್ಚು ಮಾಡಿಬಿಟ್ಟಿದ್ದರು. ಅರ್ಧ ಬಾರಿನಷ್ಟು ಸೋಪು ಮಾಯವಾಗಿ ದ್ದಿತು. ಮನೆಯಲ್ಲಿದ್ದ ಇದ್ದಿಲೆಲ್ಲವೂ ಮುಗಿದು ಹೋಗಿ ಶಂಕರನಿಗೆ ಸಂಬ ಳವು ಬರುವವರೆವಿಗೆ ಇದ್ದಿಲಿಲ್ಲದೇ ವಿಮಲೆಯು ಬಹಳ ಕಷ್ಟ ಪಡಬೇ ಕಾಯಿತು.

ವಿಮಲೆಯು ಬಹಳ ಹೊತ್ತು ಈ ಯೋಚನೆಗಳಲ್ಲಿಯೇ ಮಗ್ನಳಾಗಿ ರಲಿಲ್ಲ. ಬೇಯುತ್ತಿದ್ದ ಬೇಳೆಯು ಅವಳನ್ನು ಕರೆಯುತ್ತಿತ್ತು. ಹೋಗಿ ಅಡಿಗೆಯನ್ನು ಪೂರೈಸಿ ಎಲ್ಲರನ್ನೂ ಊಟಕ್ಕೆ ಎಬ್ಬಿಸಿದಳು. ಕಡೆಯಲ್ಲಿ ತಾನು ಊಟಕ್ಕೆ ಕುಳಿತುಕೊಂಡಳು. ಅವಳ ಜೊತೆಗಾಗಿ ಶಂಕರನೂ ಕುಳಿ ತಿದ್ದನು.

ಊಟದ ನಡುವೆ ವಿಮಲೆಯು " ಅಣ್ಣಾ. ನನ್ನ ಸ್ನೇಹಿತೆ ಮಾಲ ತಿಯು ಕರೆದಿದ್ದಳು. ಈ ಹಬ್ಬ ಮುಗಿಸಿಕೊಂಡು ಬರುವುದಾಗಿ ಹೇಳಿದ್ದೆ

ನಾಳೆಯ ದಿನ ಹೋಗಿ, ಎರಡು ದಿನಗಳು ಇದ್ದುಕೊಂಡು ಬರೋಣವೆಂದಿದ್ದೇನೆ" ಎಂದು ಹೇಳಿದಳು.

ಶಂಕರನು ಅದಕ್ಕೆ ಅಡ್ಡಿ ಹೇಳಲಿಲ್ಲ. ಮನೆಯಲ್ಲಿ ಎಲ್ಲರಿಗೂ ಗೊತ್ತಾದ ನಂತರವೂ ಅವರು ಅದಕ್ಕೆ ಪ್ರತಿ ಹೇಳಲಿಲ್ಲ.

ವಾಸ್ತವವಾಗಿ ವಿಮಲೆಯನ್ನು ಅವಳ ಗೆಳತಿಯು ಕರೆದಿರಲಿಲ್ಲ. ಕಳೆದ ನಾಲ್ಕೈದು ದಿನಗಳಿಂದಲೂ ವೆಂಕಟರಾಯನು ದಸರಾಗೆ ಮೈಸೂರಿಗೆ ಬರಬೇಕೆಂದು ಬಲಾತ್ಕಾರ ಮಾಡುತ್ತಿದ್ದನು. ವಿಧಿ ಇಲ್ಲದೇ ವಿಮಲೆಯು ಅದನ್ನು ಒಪ್ಪಿಕೊಂಡಳು. ಅದನ್ನೇ ಬೇರೆಯ ವಿಧವಾಗಿ ಮನೆಯವರಿಗೆ ತಿಳಿಸಿದ್ದಳು.

ಮಾರನೆಯ ದಿನ ಮಧ್ಯಾಹ್ನ ಊಟ ಮಾಡಿಕೊಂಡು ಬೆಂಗಳೂರಿಗೆ ಹೋದಳು. ವೆಂಕಟರಾಯನು ಅವಳ ಬರುವಿಕೆಯನ್ನೇ ಕಾದಿದ್ದನು. ಅವರಿಬ್ಬರೂ ಮೈಸೂರಿನ ಕಡೆಗೆ ಹೊರಟರು.

ಹೊರಡುವವರೆವಿಗೆ ಹಾಗೆ ಹೋಗುವುದು ಅವಳಿಗೆ ಇಷ್ಟವಿರಲಿಲ್ಲ. ಹೊರಟ ನಂತರ ಪ್ರವಾಸವು ಅವಳಿಗೆ ಸುಖಕರವೆನ್ನಿಸಿತು. ಪ್ರಕಾಶಮಾನವಾದ ಬಿಸಿಲು, ತಣ್ಣಗೆ ಬೀಸುತ್ತಿದ್ದ ಗಾಳಿ, ನಾಲು ಮರಗಳ ಶೀತಲವಾದ ಛಾಯೆ, ನೀಲವಾದ ಶುಭ್ರಾಕಾಶ, ಹಾರುವ ಹಕ್ಕಿಗಳು ಇವೆಲ್ಲವೂ ವಿಮಲೆಯ ಮನಸ್ಸಿನಲ್ಲಿ ಆಹ್ಲಾದವನ್ನು ಉಂಟು ಮಾಡುತಿದ್ದವು.

ಈ ದಿನ ಸಾಯಂಕಾಲ ಅವಳು ಅಡಿಗೆಯನ್ನು ಮಾಡಬೇಕಾಗಿಲ್ಲ. ಮುಸುರೆಯನ್ನು ತೊಳೆಯಬೇಕಾಗಿಲ್ಲ. ಅವಳು ಸಿನಿಮಾಗೆ ಹೋಗಿ ವರ್ಷವಾಗಿದ್ದಿತು. ಈ ದಿನ ಬೇಕಾದರೆ ಸಿನಿಮಾಗೆ ಹೋಗಬಹುದು. ಬೇಕಾದರೆ ಎಗ್ಸಿಬಿಷನ್ನಲ್ಲಿ ಓಡಿಯಾಡಬಹುದು.

ತನ್ನ ನಗುವನ್ನೂ ತನ್ನ ಮಾತನ್ನೂ ಕೇಳುವಂತಹ ಪ್ರಿಯನೊಂದಿಗೆ ವೇಗವಾಗಿ ಜಾರುವ ಕಾರಿನಲ್ಲಿ ಕುಳಿತು ಹೋಗುವುದು ಅತ್ಯಾನಂದಕರವಾಗಿದ್ದಿತು.

ಮೈಸೂರಿನಲ್ಲಿ ಅವರು ಮಾಡರ್ನ ಹೋಟಲಿನಲ್ಲಿ ತಂಗಿದರು. ವಿಮ

ಳಿಗೆ ಆದಷ್ಟು ಬೇಗ ಎಗ್ಸಿಬಿಷನ್ನಿಗೆ ಹೋಗಬೇಕೆಂಬ ಆತುರವಿದ್ದಿತು. ಬಾತ್‌ರೂಂಗೆ ಹೋಗಿ ಮುಖದ ಮೇಲೆ ನೀರು ಹಾಕಿಕೊಂಡಳು. ಸೋಪು ಹಚ್ಚಿಕೊಂಡಳು. ಕಣ್ಣು ಬಿಟ್ಟು ನೊರೆಯು ಮುಚ್ಚಿಕೊಂಡಿದ್ದ ಮುಖ ವನ್ನು ನೋಡಿಕೊಂಡಳು. ಅದೆಷ್ಟೋ ಚೆನ್ನಾಗಿ ಕಂಡು ಬಂದಿತು. ತಣ್ಣೀರು ಹಾಕಿ ತೊಳೆದುಕೊಂಡು ಕನ್ನಡಿಯಲ್ಲಿ ಮುಖವನ್ನು ನೋಡಿ ಕೊಂಡಳು. ಅದನ್ನು ನೋಡಿಕೊಂಡ ಅವಳಿಗೆ " ನಾನು ಇಷ್ಟು ಚೆನ್ನಾಗಿ ದ್ದೇನೆಯೇ ?" ಎಂದೆನಿಸಿತು.

ವಿಮಲೆಯು ಹೊರಗೆ ಬಂದು ತಲೆ ಬಾಚಿಕೊಂಡು ಸೀರೆಯನ್ನುಟ್ಟು ಸಿದ್ಧವಾದಳು. ಅಷ್ಟು ಹೊತ್ತಿಗೆ ವೆಂಕಟರಾಯನೂ ಹೊರಗೆ ಹೊರಡಲು ತಯಾರಾಗಿದ್ದನು. ಇಬ್ಬರೂ ಎಕ್ಸಿಬಿಷನ್‌ಗೆ ಹೋದರು.

ಒಂದು ಗಂಟೆಯ ಕಾಲ ಎಗ್ಸಿಬಿಷನ್ನಲ್ಲಿ ತಿರುಗಾಡಿಕೊಂಡು ಅವರು ವಾಪ್ಸು ಬಂದರು.

ಹೋಟಲಿನ ರೂಮಿನಲ್ಲಿ ಹಾಸಿಗೆಯ ಮೇಲೆ ಕುಳಿತುಕೊಂಡ ನಂತರ ವಿಮಲೆಯು " ಈ ಬಾರಿ ಎಗ್ಸಿಬಿಷನ್ ಬಹಳ ಚೆನ್ನಾಗಿದೆ " ಎಂದು ಹೇಳಿದಳು.

ವೆಂಕಟರಾಯನು " ನೀನಿಲ್ಲಿಗೆ ಬಂದು ಎಷ್ಟು ವರ್ಷವಾಯಿತು, ವಿಮಲಾ " ಎಂದನು.

" ಹೋದ ವರ್ಷ ಕೂಡಾ ಬಂದಿದ್ದೆನಲ್ಲಾ "

ಇಬ್ಬರೂ ಹೋಗಿ ಮಣೆಗಳ ಮೇಲೆ ಕುಳಿತು ಊಟ ಮಾಡಿದರು. ಊಟ ಮಾಡುವಾಗಲೂ ವಿಮಲೆಯು ಖುಷಿಯಾಗಿಯೇ ಇದ್ದಳು.

ಊಟ ಮುಗಿಸಿಕೊಂಡು ಕೋಣೆಗೆ ಬಂದರು. ಕೋಣೆಯೊಳಗೆ ಬಂದೊಡನೆಯೇ ವೆಂಕಟರಾಯನು ವಿಮಲೆಯ ಹೆಗಲಿನ ಮೇಲೆ ಕೈ ಹಾಕಿ " ವಿಮ್ಮು, ಈ ದಿನ ಎಗ್ಸಿಬಿಷನ್ನಲ್ಲಿ ಹೋಗುತ್ತಿದ್ದಾಗ ನನಗೆಷ್ಟು ಹೆಮ್ಮೆ ಯಾಯಿತು, ಬಲ್ಲೆಯಾ ?" ಎಂದು ಕೇಳಿದನು.

ವಿಮಲೆಯು ಮಂಚದ ಮೇಲೆ ಕುಳಿತುಕೊಂಡ ನಂತರ ನವಿಲಿನಂತೆ ತಲೆಯನ್ನು ಮೇಲೆತ್ತಿ " ಯಾಕೆ ?" ಎಂದಳು.

ವೆಂಕಟರಾಯನು " ನಾವು ಹೋಗುತ್ತಿದ್ದಾಗ ಎಲ್ಲರೂ ನಿನ್ನ ಕಡೆಗೇ

ನೋಡುತ್ತಿದ್ದರು. ಅಂತಹ ನಿನ್ನೊಡನೆ ಹೋಗುತ್ತಿದ್ದರೆ ಹೆಮ್ಮೆಯಲ್ಲವೆ ?" ಎಂದು ಕೇಳಿದನು.

ಪುನಃ ಅವನೇ ಒಂದು ಗಳಿಗೆಯ ಹೊತ್ತು ತಡೆದು " ಅಲ್ಲಿ ಓಡಿಯಾಡುವಾಗ ನಿನಗೆ ಸಂತೋಷವಾಗುತ್ತಿರಲಿಲ್ಲವೇ ?" ಎಂದನು.

ಅವಳಾ ಮಾತಿಗೆ ಉತ್ತರವನ್ನು ಹೇಳಲಿಲ್ಲ. ತನ್ನ ಕೆದರಿದ್ದ ಮುಂಗೂದಲನ್ನು ಸರಿಮಾಡಿಕೊಂಡಳು.

" ಬಹಳ ದಿನಗಳಿಂದ ನನಗೆ ಒಂದು ಯೋಚನೆ ಇದ್ದಿತು, ವಿಮ್ಮು. ಪ್ರೀತಿಸಿ ಮದುವೆ ಮಾಡಿಕೊಳ್ಳುವುದೊಂದು ಬಗೆ. ಮದುವೆ ಮಾಡಿ ಪ್ರೀತಿಸುವುದೊಂದು ಬಗೆ. ಇದರಲ್ಲಿ ಯಾವುದು ಸರಿ ಎಂದು ಬಲು ಕಾಲದಿಂದ ಇತ್ಯರ್ಥವಾಗಿರಲಿಲ್ಲ. ಈಗ ನಮ್ಮ ಸ್ನೇಹವಾದ ಮೇಲೆ ಪ್ರೀತಿಸಿ ಮದುವೆಯಾಗುವುದೇ ಸರಿ ಎಂಬ ತೀರ್ಮಾನಕ್ಕೆ ಬಂದಿದ್ದೇನೆ " ಎಂದವನು ಹೇಳಿದನು.

" ಈ ನಮ್ಮ ಪ್ರೇಮ ವಿವಾಹವನ್ನು ನಿಮ್ಮ ತಾಯಿತಂದೆಗಳು ಒಪ್ಪುತ್ತಾರೇನು ?"

" ಒಪ್ಪುತ್ತಾರೆ. ಒಂದು ವೇಳೆ ಒಪ್ಪದಿದ್ದರೂ ನಾನು ಅದನ್ನು ಲಕ್ಷ್ಯ ಮಾಡುವುದಿಲ್ಲ "

ಅವನು ಮಂಚದ ಪಟ್ಟಿಯನ್ನು ಒರಗಿಕೊಂಡು ಕುಳಿತುಕೊಂಡಿದ್ದನು. ವಿಮಲೆಯು ಅವನ ವಕ್ಷ ಸ್ಥಳದ ಮೇಲೆ ವಾಲಿಕೊಂಡು ಅವನ ಎರಡು ಕೈಗಳನ್ನೂ ತನ್ನ ಕೈಗಳಲ್ಲಿ ತೆಗೆದುಕೊಂಡು ನೋಡುತ್ತಿದ್ದಳು.

ಆಗವಳು " ಬಲು ಬೇಗ ಬೆಳೆದ ಪ್ರೇಮವು ಬಲು ಬೇಗಲೇ ಆರಿ ಹೋಗುವ ಸಂಭವವುಂಟೇ ?" ಎಂದು ಕೇಳಿದಳು.

" ಅದೆಲ್ಲಾ ಇಲ್ಲ, ವಿಮ್ಮು. ನಮ್ಮ ಪ್ರೇಮವು ಅಮರವಾದುದು. ಈ ನಮ್ಮ ಗೆಳತನವು ಶಂಕರನಿಗೆ ಗೊತ್ತೇ ? ಅವನು ಒಪ್ಪುತ್ತಾನೆಯೇ ಎಂದೇ ನನಗೆ ಯೋಚನೆ "

ವಿಮಲೆಯು ಈಗ ತಾನೇ ಆ ವಿಷಯವನ್ನು ಕೂಲಂಕಶವಾಗಿ ಯೋಚಿಸ ತೊಡಗಿದಳು. ಅವಳು ಕ್ಷಣ ಕಾಲ ಆಲೋಚನೆ ಮಾಡಿ ಒಂದೊಂದು ಬಾರಿ ಅವನಿಗೆ ಗೊತ್ತೇನೋ ಎಂದೆನಿಸುತ್ತದೆ. ಅವನು

ಬಹಳ ಬುದ್ಧಿವಂತ. ತಿಳಿದುಕೊಂಡಿದ್ದರೂ ತಿಳಿದುಕೊಂಡಿರಬಹುದು. ಅವನಿಗೆ ತಿಳಿದರೂ ಅವನು ಆಕ್ಷೇಪಿಸಲಾರ " ಎಂದಳು.

" ನಾನೂ ಹಾಗೆಯೇ ಎಂದುಕೊಂಡೆ "

" ನಾನು ನಿಮ್ಮೊಂದಿಗೆ ಇದ್ದಾಗ ಎಲ್ಲವೂ ಸರಿಯಾಗಿದೆ ಎಂದೆನಿಸುತ್ತದೆ. ನೀವು ದೂರವಾಗಿದ್ದಾಗ-ಎದುರಿಗಿಲ್ಲದಿದ್ದಾಗ ನನಗೆ ತಪ್ಪು ಮಾಡುತ್ತಿದ್ದೇನೆ ಏನೋ ಎನ್ನಿಸುತ್ತದೆ. ಕೆಲವು ಸಲವಂತೂ ನನಗೆ ಹುಚ್ಚು ಹಿಡಿದಂತೆ ಆಗುತ್ತದೆ "

" ಅದು ನಿನ್ನ ದೌರ್ಬಲ್ಯ, ವಿಮ್ಮು. ನಾವು ಪರಸ್ಪರ ಪ್ರೇಮ ಮಾಡುತ್ತೇವೆ. ಈಗದು ರಹಸ್ಯವಾಗಿದೆ. ಆದರೆ ಎಂದಾದರೊಂದು ದಿನ ಇದು ಬಹಿರಂಗವಾಗಲೇ ಬೇಕಷ್ಟೇ. ಈ ದಿನವೇ ಎಲ್ಲರಿಗೂ ಹೇಳಿ ಬಿಡುವುದಕ್ಕೆ ನಾನು ತಯಾರು. ನೀನು ಒಪ್ಪುವುದಿಲ್ಲವಲ್ಲಾ-ಎಂದು ಸುಮ್ಮನಿದ್ದೇನೆ. ಈಗಲೇ ಶಂಕರನು ಸಂಪಾದನೆ ಮಾಡುತ್ತಿದ್ದಾನೆ. ಏರ್ ಕ್ರಾಫ್ಟ್‌ನಲ್ಲಿ ಎಲ್ಲರೂ ಅವನನ್ನು ವಿಶ್ವಾಸ ಮಾಡುತ್ತಾರೆ. ಅವನಿಗೆ ಸಂಪಾದನೆ ಹೆಚ್ಚಾಗಬಹುದು. ವರದಳಿಗೆ ಮದುವೆಯಾಗುತ್ತದೆ. ನಾವೊಂದು ಸೊಗಸಾದ ಮನೆಯನ್ನು ಮಾಡಿಕ್ಕೊಂಡು ಬೇರೇ ಹೋಗೋಣ. ವಾಸುವನ್ನು ನಮ್ಮ ಮನೆಯಲ್ಲಿ ಇಟ್ಟುಕೊಳ್ಳೋಣ. ಶೀಲ, ಸಾವಿತ್ರಮ್ಮ ಇವರು ಶಂಕರನೊಂದಿಗೆ ಇರಲಿ "

" ಅದೆಲ್ಲಾ ಸರಿಯಾಗಿದೆ. ಆದರೆ ಇದೆಲ್ಲಾ ಆಗುವದರೊಳಗೆ........"

" ಅದೇನು ಚಿನ್ನಾ "

ಅವಳು ಉತ್ತರ ಹೇಳಲಿಲ್ಲ.

ವೆಂಕಟರಾಯನು ಅವಳ ಮುಖದ ಬಳಿ ಮುಖವನ್ನಿಟ್ಟು ಅವಳ ಗಲ್ಲವನ್ನು ಹಿಡಿದು ಮೆಲ್ಲನೆ ಒತ್ತುತ್ತಾ " ಅದೇನು ಹೇಳು " ಎಂದನು.

ಅವಳು ಹೇಳಲಿಲ್ಲ.

" ನಾನು ಹೇಳಲೇ ?"

ಅವಳು ಸುಮ್ಮನಿದ್ದಳು.

" ಅಷ್ಟರಲ್ಲಿ ನಮಗೆ ಒಂದು ಪುಟ್ಟ ಮಗುವಾದರೆ–ಎಂದು ಯೋಚಿಸುತ್ತಿದ್ದೀ, ಅಲ್ಲವೇ ?"

ವಿಮಲೆಯು ನಾಚಿಕೆಯಿಂದ ತಲೆ ತಗ್ಗಿಸಿಕೊಂಡಳು.

" ಅದಕ್ಕಾಗಿ ನಾಚಿಕೆ ಪಡಬೇಕಾದುದೇನೂ ಇಲ್ಲ, ವಿಮ್ಮು. ಹಾಗಾದರೆ ಒಳ್ಳೆಯದೇ ಆಯಿತು. ಈ ನಮ್ಮ ರಹಸ್ಯ ಪ್ರೇಮವನ್ನು ಬಹಿರಂಗ ಮಾಡಲು ಒಳ್ಳೆಯ ಅವಕಾಶವೇ ಸಿಕ್ಕಿದಂತಾಯಿತು "

" ನೀವು ಹೇಳುವುದೆಲ್ಲಾ ತಮಾಷೆಯಾಗಿದೆ "

" ಅದರಲ್ಲಿ ತಮಾಷೆ ಏನು ಬಂದಿತು ? ನಾವೇಕೆ ಹೆದರಬೇಕು ? ನು ತಪ್ಪು ಮಾಡಿದ್ದೇವೆ ?"

" ನಾವೇನೂ ತಪ್ಪು ಮಾಡಿಲ್ಲ, ಯಾರಿಗೂ ಹೆದರಬೇಕಾಗಿಲ್ಲ " ಎಂದು ಹೇಳಿ ವಿಮಲೆಯು ಅವನ ಆಲಿಂಗನದಿಂದ ತಪ್ಪಿಸಿಕೊಂಡಳು.

ಅವರು ಕಿಟಕಿಯ ಮಗ್ಗುಲಲ್ಲಿ ಮಲಗಿಕೊಂಡಿದ್ದರು. ವೆಂಕಟರಾಯನಿಗೆ ಬಹಳ ಬೇಗ ನಿದ್ದೆಯು ಬಂದು ಬಿಟ್ಟಿತು. ಆದರೆ ವಿಮಲೆಗೆ ನಿದ್ದೆಯು ಬರಲೇ ಇಲ್ಲ. ಕಣ್ಣು ಬಿಟ್ಟು ನೋಡಿದಾಗಲೆಲ್ಲಾ ಕತ್ತಲಿನಲ್ಲಿ ಮೈಸೂರಿನ ಬೀದಿಯ ಬುರುಡೆಯ ನಾಲು ದೀಪಗಳು ಕಂಡು ಬರುತ್ತಿದ್ದವು.

ಹೊತ್ತಾಗುತ್ತಾ ಬಂದಿತು. ಗಂಟೆಯ ಮೇಲೆ ಗಂಟೆಗಳಾಗುತ್ತಾ ಬಂದುವು. ಅವಳಿಗೆ ನಿದ್ದೆಯು ಬರಲಿಲ್ಲ.

ಒಂದು ಬಾರಿ " ನಾನೇಕೆ ಪ್ರೇಮ ಮಾಡಿದೆ ? ಇಂದಂತೂ ನಾನು ಈತನ ಹೆಂಡತಿ ಎಂಬ ಭಾವನೆಯು ನನ್ನ ಮನಸ್ಸಿನಲ್ಲಿ ಬಂದಿಲ್ಲ. ಆ ಭಾವನೆಯು ನನಗೆ ಎಂದಾದರೂ ಬರುತ್ತದೆಯೆ ? ಎಂದಾದರೊಂದು ದಿನ ನಾವು ಗಂಡಹೆಂಡಿರಂತೆ ಬದುಕುತ್ತೇವೆಯೆ ?" ಎಂದುಕೊಂಡಳು.

ಆ ಮಾತನ್ನು ಗಟ್ಟಿಯಾಗಿ ಆಡಿದೆನೇನೋ ಎನ್ನುವಂತೆ ಅವಳು ಹಾಗೆಂದುಕೊಂಡಳು. ವೆಂಕಟರಾಯನು ತಾನಾಡಿದ ಮಾತನ್ನು ಕೇಳಿಬಿಟ್ಟನೇನೋ ಎಂದು ಅವನ ಕಡೆಗೆ ನೋಡಿದಳು. ಅವನು ನಡು ರಾತ್ರಿಯಲ್ಲಿ ಗಾಢ ನಿದ್ರೆಯಲ್ಲಿದ್ದನು.

ಈಗ ಕೈ ಮಿಂಚಿ ಹೋಗಿದೆ. ಅಂದು, ಆ ರಾತ್ರಿ ಬೃಂದಾವನದಲ್ಲಿ ಅವಳು ತನ್ನನ್ನು ಅವನಿಗೆ ಒಪ್ಪಿಸಿಬಿಟ್ಟಿದ್ದಾಳೆ. ಪುನಃ ಅವಳು ತನ್ನನ್ನು

ವಾಪ್ಸು ತೆಗೆದುಕೊಳ್ಳುವಂತಿಲ್ಲ. ಅವರಿಬ್ಬರ ನಡುವೆ ಜಗಳವಿಲ್ಲ. ತನ್ನ ಗಂಡನಾಗುವವನು ಹೇಗಿರಬೇಕೆಂದು ಅವಳು ಭಾವನೆ ಮಾಡುತ್ತಿದ್ದಳೋ ಇವನು ಹಾಗೆಯೇ ಇದ್ದಾನೆ. ಅವನು ತಾನು ಏನೆಂದು ತೋರ್ಪಡಿಸಿಕೊಂಡ್ಡಾನೆಯೋ ಅದರಲ್ಲಿ ಸುಳ್ಳಿಲ್ಲ. ಹಾಗೆಯೇ ಇದ್ದಾನೆ. ಅವನು ಈಗಿನಂತೆಯೇ ಅವಳನ್ನು ಪ್ರೇಮ ಮಾಡುತ್ತಿರುವಾಗ ಅವಳು ಅವನನ್ನು ಬಿಟ್ಟು ಹೋಗುವುದು ಹೇಗೆ ?

ಆದರೆ ಅವಳ ಅಂತರಾತ್ಮವು ಬೇರೊಂದು ವಿಧವಾಗಿ ಹೇಳುತ್ತಿದ್ದಿತು. " ನೀನು ಇಲ್ಲಿಂದ ಹೊರಟು ಹೋಗು. ನಿನ್ನ ಸಹೋದರರ ಬಳಿಗೆ ಸಹೋದರಿಯರ ಬಳಿಗೆ ಹೋಗು. ಇವನು ನಿನ್ನನ್ನು ಪ್ರೇಮ ಮಾಡಿದ್ದಾನೆ. ನೀನೂ ಇವನನ್ನು ಪ್ರೇಮ ಮಾಡಿದ್ದೀ. ಆದರೆ ನೀನು ಅಲ್ಲಿಗೆ ಸೇರಿದವಳು. ಅಲ್ಲಿ ನಿನ್ನ ಕರ್ತವ್ಯವಿದೆ. ನಿನ್ನನ್ನು ಇನ್ನೊಬ್ಬರಿಗೆ ಕೊಡಲು ನಿನಗೆ ಅಧಿಕಾರವಿಲ್ಲ. ಇವನಿಗೆ ಹೆಂಡತಿಯಾಗಿ ಮನೆಯ ಗೃಹಣಿಯಾಗಿ ಮಕ್ಕಳಿಗೆ ತಾಯಿಯಾಗಿ ಬದುಕಲು ನಿನಗೆ ಅಧಿಕಾರವಿಲ್ಲ " ಎಂದು ಹೇಳುತ್ತಿದ್ದಿತು.

ಅವಳ ಮನಸ್ಸು ಹಾಗೆಯೇ ಮಾಡಬೇಕೆಂದು ಅಪೇಕ್ಷೆ ಮಾಡುತ್ತಿದ್ದಿತು. ಆದರೆ ಈಗ ಕೈ ಮಿಂಚಿ ಹೋಗಿದೆ. ಮೃದುವಾದ ದಿಂಬು ಅವಳ ತಲೆಗೆ ಗಟ್ಟಿಯಾಗಿ ಕಂಡಿತು. ಎದ್ದು ಕುಳಿತುಕೊಂಡಳು. ಅವನ ಕಡೆಗೆ ನೋಡಿದಳು. ಅವನಿಗೆ ಚೆನ್ನಾಗಿ ನಿದ್ದೆ ಬಂದಿದ್ದಿತು. ಯಾರೋ ಅಪರಿಚಿತನು ಅಲ್ಲಿ ಮಲಗಿರುವಂತೆ ಅವಳಿಗೆ ಭಾಸವಾಯಿತು. " ನಾನಾರು, ನಾನೇಕೆ ಇಲ್ಲಿದ್ದೇನೆ, ಪರಪುರುಷನೊಡನೆ ಏಕಶಯ್ಯೆಯಲ್ಲಿ ಏಕಿದ್ದೇನೆ"– ಎಂದು ತೋರಿತು. ಬಲು ದಿನಗಳಿಂದಲೂ ಒಡನೆ ಓಡಿಯಾಡಿದ ವೆಂಕಟರಾಯನು ಅವನೆಂದು ಮನಸ್ಸಿನಲ್ಲಿ ಧಾರಣ ಮಾಡಲು ಅವಳು ಪ್ರಯತ್ನ ಮಾಡಿದಳು. ಆದರೆ ಅದು ಸಾಧ್ಯವಾಗಲಿಲ್ಲ. ಎಂದೋ ಎಲ್ಲಿಯೋ ನೋಡಿದಂತೆ ಮಾತ್ರ ಅವಳ ಮನಸ್ಸಿಗೆ ಬಂದಿತು.

ಅವಳು ಮೃದುವಾದ ಹಾಸಿಗೆಯ ಮೇಲೆ ಕುಳಿತುಕೊಂಡಿದ್ದಳು. ಅತ್ಯುತ್ತಮವಾದ ಬೆಚ್ಚನೆಯ ಬ್ಲಾಂಕೆಟ್ ತೊಡೆಗಳ ಮೇಲೆ ಬಿದ್ದಿದ್ದಿತು. ಎಷ್ಟೋ ಸುಖಕರವಾಗಿರಬೇಕಾಗಿದ್ದ ಆ ಸನ್ನಿವೇಶವು ಅವಳಿಗೆ ಕಷ್ಟಕರವಾಗಿ ಕಂಡಿತು.

ಕೆಂಗೇರಿಯ ಮನೆಯಲ್ಲಿದ್ದ ಹಳೆಯ ಹಾಸಿಗೆ, ಹರಕಲು ರಗ್ಗು ಅವಳಿಗೆ ಪ್ರಿಯವಾಗಿ ಕಂಡಿತು. ವರದ, ಶೀಲ, ವಾಸುಗಳ ಗಲಾಟೆಯೂ ಪ್ರಿಯವಾಯಿತು. ಆ ಅಡಿಗೆಯ ಮನೆಯ ಕೆಲಸ, ತೊಳೆಯ ಬೇಕಾದ ಮುಸುರೆಯ ಪಾತ್ರೆಗಳು ತನ್ನವೆಂದೆನಿಸಿತು.

ಬಿಡಿಸಲಾರದ ಜಂಜಾಟದಲ್ಲಿಯೇ ಅವಳು ರಾತ್ರಿಯನ್ನು ಕಳೆದಳು.

## ೬

" ಅಣ್ಣಾ ! ಶಕುಂತಲೆಗೆ ಮದುವೆಯಂತೆ " ಎಂದು ವಿಮಲೆಯು ಹೇಳಿದಳು.

" ನಿನಗೆ ಹೇಗೆ ಗೊತ್ತಾಯಿತು " ಎಂದು ಅವನು ಕೇಳಿದನು.

" ನಾನು ಮೊನ್ನೆಯ ದಿನ ಮೈಸೂರಿಗೆ ಹೋಗಿದ್ದೆನಲ್ಲಾ, ಆಗ ಗೊತ್ತಾಗಿದ್ದಿತು. ಅದು ಅಲ್ಲದೇ ನಿನ್ನೆಯ ದಿನ ಅವಳೇ ಹೇಳಿದಳು "

" ಗಂಡು ಯಾರಂತೆ "

" ಯಾರೋ ಕಾದಂಬರಿಕಾರರಂತೆ "

" ಹಾಗೇನು, ಯಾವನೋ ಐಶ್ವರ್ಯವಂತನಿರಬೇಕೆಂದು ಕೊಂಡಿದ್ದೆ "

" ತಕ್ಕಮಟ್ಟಿಗೆ ಐಶ್ವರ್ಯವಂತನೂ ಹೌದೆಂದು ಕೇಳಿದ್ದೇನೆ "

"ವಿಮಲಾ. ಶಕುಂತಲೆಯು ಒಳ್ಳೆಯ ಭಾರೀ ಕೆಲಸದಲ್ಲಿರುವವನನ್ನೋ ಅಥವಾ ದೊಡ್ಡ ಬಿಸ್‌ನೆಸ್ ಮ್ಯಾಗ್ನೆಟ್ಟನ್ನೋ ಆರಿಸದೇ ಈ ಕತೆ ಬರೆಯುವವನನ್ನು ಆರಿಸಿದುದು ಅಸಹಜವಲ್ಲವೇ ?"

" ಒಂದು ವಿಧವಾಗಿ ನೀನು ಹೇಳುವುದು ನಿಜ. ನೀನು ಈಗ ಶಕುಂತಲೆಯನ್ನು ನೋಡಿಲ್ಲ. ಬಹಳ ಬದಲಾಯಿಸಿ ಹೋಗಿದ್ದಾಳೆಯಂತೆ. ಸಂಗೀತದಲ್ಲಿ ಪರಿಣತೆ ನರ್ತನವನ್ನು ಬೇರೇ ಕಲಿತಿದ್ದಾಳಂತೆ. ಕಲಾವಿದರು ಕಲಾವಿದರನ್ನು ವರಿಸುವುದರಲ್ಲಿ ಆಶ್ಚರ್ಯವೇನಿದೆಯಣ್ಣಾ "

" ಸರಿ, ನಮ್ಮನ್ನು ಏನಾದರೂ ಕರೆದಿದ್ದಾರೆಯೋ ?"

" ಯಾಕೆ ಹಾಗೆ ಕೇಳುತ್ತಿ ?"

" ಇಲ್ಲ. ಕರೆದಿದ್ದಾರೆಯೋ ಇಲ್ಲವೋ, ಎಂದು ತಿಳಿದುಕೊಳ್ಳಲು ಕೇಳಿದೆ, ಅಷ್ಟೆ.

" ನಮ್ಮನ್ನೆಲ್ಲಾ ಬರಬೇಕೆಂದು ಕರೆದಿದ್ದಾರೆ. ನನ್ನನ್ನಂತೂ ಒಂದು ವಾರ ಅಲ್ಲಿಯೇ ಇರಬೇಕೆಂದು ಹೇಳಿದ್ದಾರೆ "

ಶಂಕರನು ಆಶ್ಚರ್ಯದಿಂದ " ಅವರಿಗೆ ನಾವು ಇನ್ನೂ ಕಣ್ಣಿಗೆ ಕಾಣುತ್ತಿದ್ದೇವಲ್ಲ " ಎಂದನು.

" ನೀನು ಹೇಳುವುದೂ ಸರಿ. ಆದರೆ ಅವರು ನಮ್ಮನ್ನು ತಾತ್ಸಾರದಿಂದ ನೋಡಲಿಲ್ಲ. ಬಹಳವಾಗಿ ಹೇಳಿದರು "

" ಮದುವೆ ಗಂಡಿನ ಹೆಸರೇನು, ವಿಮಲಾ "

" ಅವನ ಹೆಸರು ನಟರಾಜ "

ಶಂಕರನು ತಂಗಿಯ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡುತ್ತಾ "ವಿಮಲಾ. ನಿನ್ನ ಜೊತೆಯ ಹುಡುಗಿಯರಿಗೆಲ್ಲಾ ಮದುವೆಯಾಗುತ್ತಿರುವುದನ್ನು ನೋಡಿದರೆ ನಿನಗೂ ಮದುವೆಯಾಗ ಬೇಕೆನ್ನಿಸುವುದಿಲ್ಲವೇ ?" ಎಂದನು.

ವಿಮಲೆಯು ಅಣ್ಣನ ಕಡೆಯಿಂದ ಬೇರೆಯ ಕಡೆಗೆ ನೋಡುತ್ತಾ ನಕ್ಕುಬಿಟ್ಟಳು.

ವರದಳು " ಯಾಕಕ್ಕಾ ! ನೀನು ಮದುವೆ ಮಾಡಿಕೊಳ್ಳುವುದಿಲ್ಲವೆ?" ಎಂದಳು.

" ಹುಡುಗರಿಗೆಲ್ಲಾ ಮದುವೆಯ ಯೋಚನೆ ಏಕೆ ?" ಎಂದು ಅವಳು ತಂಗಿಯನ್ನು ದಬಾಯಿಸಿ ಬಿಟ್ಟಳು.

ಶಂಕರನು " ನಟರಾಜನು ಬರೆದ ಯಾವುದಾದರೂ ಪುಸ್ತಕಗಳನ್ನು ಓದಿದ್ದೀಯಾ ?" ಎಂದನು.

" ಇಲ್ಲ. ಅವರು ಬಹಳ ಚೆನ್ನಾಗಿ ಬರೆಯುತ್ತಾರೆಯಂತೆ. ನಾನಾವ ಪುಸ್ತಕವನ್ನೂ ಓದಿಲ್ಲ. ಈ ಬಾರಿ ಶಕುಂತಲೆಯ ಮನೆಗೆ ಹೋದಾಗ ಅವರು ಬರೆದಿರುವ ಪುಸ್ತಕಗಳೆಲ್ಲವನ್ನೂ ತೆಗೆದುಕೊಂಡು ಬರುತ್ತೇನೆ "

ಮನೆಯವರೆಲ್ಲರೂ ಸೇರಿ ಮಾತನಾಡಿ ವಿಮಲೆಯು ಮಾತ್ರ ಶಕುಂತ

ಳೆಯ ಮದುವೆಗೆ ಹೋಗುವುದೆಂದೂ ಉಳಿದವರು ಧಾರೆಯ ದಿನ ರಾತ್ರಿ ಊಟಕ್ಕೆ ಹೋಗಿ ಬರುವುದೆಂದೂ ಗೊತ್ತು ಮಾಡಿದರು.

ವಿಮಲೆಯೊಬ್ಬಳೇ ಶಕುಂತಲೆಯ ಮದುವೆಗೆ ಹೋಗಳು. ನಾಲ್ಕು ದಿನಗಳ ಮೊದಲೇ ಅಲ್ಲಿಗೆ ಹೋದಳು. ಶಕುಂತಲೆಯೇ ಬಂದು ಬಲಾತ್ಕಾರ ಮಾಡಿ ತನ್ನ ಗೆಳತಿಯನ್ನು ಕರೆದುಕೊಂಡು ಹೋದಳು.

ಶಕುಂತಲೆಯ ಮನೆಗೆ ಹೋದ ಕೂಡಲೇ ವಿಮಲೆಗೆ ತನ್ನ ಹಳೆಯ ಮನೆಯ ನೆನಪು ಬಂದಿತು. ದೊಡ್ಡ ದೊಡ್ಡ ಕೋಣೆಗಳು. ನೆಲಕ್ಕೆ ಮೃದುವಾದ ರತ್ನಗಂಬಳಿಗಳು. ರತ್ನಗಂಬಳಿಗಳ ಬಣ್ಣಕ್ಕೆ ಸರಿಹೋಗುವಂತೆ ಅಳವಡಿಸಿಟ್ಟ ಸುಖಾಸನಗಳು. ಜಾಜ್ವಲ್ಯಮಾನವಾದ ದೀಪಗಳು. ಹೊರಗೆ ಬೆಳೆದಿರುವ ಹೂ ಗಿಡಗಳ ವಾಸನೆಯನ್ನು ಸಣ್ಣ ಗಾಳಿಯು ಎತ್ತಿಕೊಂಡು ಬರುತ್ತಿರುವುದರ ಜೊತೆಗೆ ಮನೆಯಲ್ಲಿನ ಪುಷ್ಪಧಾನಿಗಳಲ್ಲಿನ ಹೂಗೊಂಚಲುಗಳ ಸೌರಭ. ರೇಡಿಯೋದ ಸುಖವಾದ ರಾಗ. ಅದರ ಹಿನ್ನಲೆಯಲ್ಲಿ ಜನರ ಸಂಭಾಷಣೆ ನಗು.

ರಾತ್ರಿ ಊಟಕ್ಕೆ ಹೆಚ್ಚು ಹೊರಗಿನವರಾರೂ ಇರಲಿಲ್ಲ.

ಶಕುಂತಲೆಯ ತಾಯಿ ಲಲಿತಮ್ಮನವರು ವಿಮಲೆಯನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡಿದ್ದರು. ಶಕುಂತಲ, ಅವಳ ತಂದೆ ವೆಂಕಟರಾಮಯ್ಯನವರು, ಪ್ರಕಾಶ ಎಲ್ಲರೂ ಕುಳಿತಿದ್ದರು.

ಲಲಿತಮ್ಮನವರು ವಿಮಲೆಯನ್ನು ಪ್ರೀತಿಯಿಂದ ಮಾತನಾಡಿಸುತ್ತಾ ಮನೆಯ ಯೋಗಕ್ಷೇಮಗಳನ್ನು ವಿಚಾರಿಸಿದರು. ಅನಂತರ "ವಿಮಲಾ. ನಿಮ್ಮ ಸೋದರತ್ತೆ ಹೇಗಿದ್ದಾರೆ ?" ಎಂದು ಕೇಳಿದರು.

" ಅವರು ಒಂದೇ ವಿಧವಾಗಿದ್ದಾರೆ "

ಲಲಿತಮ್ಮನವರಿಗೆ ವಿಮಲೆಯ ಮನೆಯವರ ಯೋಗಕ್ಷೇಮವೆಲ್ಲವೂ ಗೊತ್ತಿದ್ದಿತು. ಮರೆತಿದ್ದರೋ ಅಥವಾ ಮತ್ತೇನೋ, " ಆಗ ಅವರ ದೇಹಕ್ಕೇನಾದರೂ ಪೆಟ್ಟು ಬಿದ್ದಿತೇ ?" ಎಂದು ಕೇಳಿದರು.

" ಅಂತಹ ಪೆಟ್ಟೇನೂ ಬಿದ್ದಿರಲಿಲ್ಲ. ಆದರೆ ಅಂದಿನಿಂದ ಅವರ ಜ್ಞಾನವೇ ಸರಿಯಿಲ್ಲ " ಎಂದು ವಿಮಲೆಯು ಹೇಳಿದಳು.

ವೆಂಕಟರಾಮಯ್ಯನವರು ನಡುವೆ ಬಾಯಿ ಹಾಕಿ " ನಿಮ್ಮ ತಂದೆಯವರು ಮರಣ ಹೊಂದಿದುದು ಅದೇ ಆಕ್ಸಿಡೆಂಟಿನಲ್ಲಿ ಅಲ್ಲವೇ ?" ಎಂದು ಕೇಳಿದರು.

ವಿಮಲೆಯು ಹೌದೆಂದು ಹೇಳಿದಳು.

" ಜ್ಞಾನ ಸರಿಯಿಲ್ಲವೆಂದರೆ ಏನು ?" ಎಂದು ಲಲಿತಮ್ಮನವರು ಕೇಳಿದರು.

" ಈಗ ಜ್ಞಾನ ಸರಿಯಾಗಿದೆ. ಆದರೆ ಅವರಿಗೆ ಹಳೆಯದೊಂದೂ ಜ್ಞಾಪಕವೇ ಇಲ್ಲ, ಅತ್ತೆ " ಎಂದಳು.

ಮೊದಲು ವಿಮಲೆಯು ಲಲಿತಮ್ಮನವರನ್ನು ಅತ್ತೆ ಎಂದು ಕರೆಯುತ್ತಿದ್ದಳು. ಈಗ ಬಹಳ ದಿನಗಳಿಂದ ಹಾಗೆ ಕರೆದಿರಲಿಲ್ಲ. ಬಾಯಿ ತಪ್ಪಿ ಅವಳ ಬಾಯಲ್ಲಿ ಅತ್ತೆ ಎಂದುಬಂದು ಬಿಟ್ಟಿತು. ಅದಕ್ಕೆ ಯಾರೇನೂ ಆಕ್ಷೇಪಣೆ ಮಾಡಲಿಲ್ಲ. ಆದರೆ ತನ್ನ ಈ ಸ್ಥಿತಿಯಲ್ಲಿ ಅವರನ್ನು ಹಾಗೆ ಕರೆದುದು ವಿಮಲೆಗೇ ಸಂಕೋಚವಾಯಿತು.

ವಿಮಲೆಯು ಆ ದಿನ ಬಹಳ ಸಂತೋಷವಾಗಿದ್ದಳು. ಎಲ್ಲರೊಡನೆಯೂ ನಗುನಗುತ್ತಾ ಮಾತನಾಡುತ್ತಿದ್ದಳು. ಮದುವೆಗೆ ಬಂದುದೊಂದೇ ಅವಳ ಸಂತೋಷಕ್ಕೆ ಕಾರಣವಲ್ಲ. ಅಲ್ಲಿದ್ದವರೆಲ್ಲರೂ ಅವಳ ಪರಿಚಯಸ್ಥರು. ಅಲ್ಲಿದ್ದವರೆಲ್ಲರೂ ಅವಳನ್ನು ವಿಶ್ವಾಸ ಮಾಡುತ್ತಿದ್ದರು. ಅವಳನ್ನು ಗೌರವಿಸಿ ಮಾತನಾಡಿಸುತ್ತಿದ್ದರು. ಅವಳ ಮತ್ತಿಬ್ಬರು ಗೆಳತಿಯರು ಮಾಲತಿ ಮತ್ತು ವಸುಮತಿಯರು ಸಹ ಬಂದಿದ್ದರು. ಅವರಿಗೆ ಅಲ್ಲಿ ಅಗೌರವವಾಗದಿದ್ದರೂ ವಿಮಲೆಗೆ ಇದ್ದಷ್ಟು ಮನ್ನಣೆಯು ಇರಲಿಲ್ಲ. ಆ ಸಮೂಹದಲ್ಲಿ ವಿಮಲೆಯು ತನ್ನ ತಾಯಿಯು ಬದುಕಿದ್ದಾಗ ಹೇಗಿದ್ದಳೋ ಹಾಗೆಯೇ ಇದ್ದಳು.

ಎಲ್ಲರೂ ಊಟವನ್ನು ಮುಗಿಸಿ ಬಂದು ಹಜಾರದಲ್ಲಿ ಸೋಫಾಗಳ ಮೇಲೆ ಕುಳಿತುಕೊಂಡು ಎಲೆ ಅಡಿಕೆ ಹಾಕಿಕೊಳ್ಳುತ್ತಾ ಮಾತನಾಡ

ತೊಡಗಿದರು. ವೆಂಕಟರಾಮಯ್ಯನವರೂ ಬಂದು ಇವರೊಡನೆ ಮಾತಿಗೆ ಸೇರಿಕೊಂಡರು.

ವೆಂಕಟರಾಮಯ್ಯನವರು " ವಿಮಲಾ. ನೀವುಗಳು ಇಲ್ಲಿಂದ ಹೋಗಿ ಏಳೆಂಟು ತಿಂಗಳುಗಳಾಗಿರಬಹುದಲ್ಲವೇ ?" ಎಂದು ಕೇಳಿದರು.

ವಿಮಲೆಯು ಹೌದೆಂದಳು.

ಅವರು " ಈ ಏಳೆಂಟು ತಿಂಗಳುಗಳಿಂದಲೂ ಇಷ್ಟೊಂದು ಬೆಳೆದು ಬಿಟ್ಟಿದೀಯೇನೇ ? ವಯಸ್ಸಾದ ಹೆಂಗಸಿನಂತೆ ಕಂಡು ಬರುತ್ತೀಯಲ್ಲೇ ?" ಎಂದರು.

ಪ್ರತ್ಯುತ್ತರ ರೂಪವಾಗಿ ವಿಮಲೆ ನಕ್ಕು ಬಿಟ್ಟಳು.

" ಶಕುಂತಲೆ ದೊಡ್ಡವಳಂತೆ ಕಾಣುವುದು ಮಾತ್ರವೇ ಅಲ್ಲಪ್ಪ. ಚೆನ್ನಾಗಿಯೂ ಕಂಡು ಬರುತ್ತಾಳೆ " ಎಂದಳು.

ವಿಮಲೆ ಆ ಮಾತು ಹೇಳಿದ ಶಕುಂತಲೆಯ ಕಡೆಗೆ ತಿರುಗಿ ನೋಡಿದಳು. ಬಲು ಹತ್ತಿರ ನೋಡಿದವರು ಶಕುಂತಲೆ ಸಣಕಲು ಎನ್ನಬಹುದಾದರೂ ಲತೆಯಂತೆ ಬಳುಕುವ ಶರೀರ. ಮುಖವು ಆ ಲತೆಯಲ್ಲಿ ಅರಳಿದ ಹೂವಿನಂತೆ ಇದೆ. ಕುಚಗಳು ಹೂವಿನ ಕೆಳಗೆ ಇರುವ ಎರಡು ಸಣ್ಣ ಮೊಗ್ಗುಗಳಂತೆ ಇವೆ. ಸಣ್ಣದಾದ ನಡು. ಅಷ್ಟು ದಪ್ಪವಲ್ಲದಿದ್ದರೂ ದೇಹಕ್ಕೆ ತಕ್ಕುದಾದಂತಹ ಜಘನಗಳು. ಮಾಸಲು ನೀಲಿಯ ಬಣ್ಣದ ನವುರಾದ ಸೀರೆಯುಟ್ಟು ಬಿಳಿಯ ಸಿಲ್ಕ್ ರವಿಕೆಯನ್ನು ಧರಿಸಿದ್ದಳು. ಕೈಕಾಲುಗಳ ಉಗುರುಗಳಿಗೆ ಕೆಂಪು ಬಣ್ಣವನ್ನು ಹಚ್ಚಿದ್ದಳು. ಹುಬ್ಬುಗಳನ್ನು ಕಪ್ಪು ಮಾಡಿಕೊಂಡಿದ್ದಳು. ತುಟಿಗಳಿಗೆ ಹಚ್ಚಿದ್ದ ಸಿಂಧೂರವು ಊಟ ಮಾಡುವಾಗ ಅಳಸಿ ಹೋಗಿದ್ದರೂ ಎಲೆ ಅಡಿಕೆಯನ್ನು ಹಾಕಿಕೊಂಡಿದ್ದುದರಿಂದ ತೆಳುವಾದ ಅವಳ ಅಧರಗಳು ರಕ್ತವರ್ಣವಾಗಿದ್ದವು.

ಶಕುಂತಲೆಯನ್ನು ವಿಮಲೆಯನ್ನು ಪುನಃ ಪುನಃ ನೋಡಿದಳು. ವಿಮಲೆಯ ಕಣ್ಣಿಗೆ ಅವಳು ಚೆನ್ನಾಗಿಯೇ ಕಂಡು ಬಂದಳು.

ವೆಂಕಟರಾಮಯ್ಯನವರು ಎದ್ದು ಹೊರಟು ಹೋದರು.

ಇನ್ನೂ ಗೆಳತಿಯರು ತನ್ನ ವಿಷಯದ ಮಾತನ್ನೇ ಆಡುತ್ತಾರೆಂದು ಸೂಕ್ಷ್ಮವನ್ನರಿತ ವಿಮಲೆಯು ಮಾತು ಬದಲಾಯಿಸಿ" ಶಕುಂ

ನಿನ್ನ ಗಂಡನು ಹೇಗಿದ್ದಾನೆ, ಹೇಳು. ಒಪ್ಪಿ ಒಪ್ಪಿ ಮದುವೆ ಮಾಡಿಕೊಳ್ಳುತ್ತೀ ಎಂದು ಕೇಳಿದ್ದೇನೆ " ಎಂದಳು.

ವಸುಮತಿಯು ನಗುತ್ತಾ " ಹೇಗಾದರೂ ಇರಲಿ, ಅಳಿಯಂದಿರು ಮದುವೆಯ ಕಾಲಕ್ಕೆ ಸರಿಯಾಗಿ ಬರುತ್ತಾರೆಯೋ ? ಅಥವಾ ವರಪೂಜೆಯ ಸಮಯದಲ್ಲಿ ನಾವುಗಳು ತಿಂಡಾಡಬೇಕಾಗುತ್ತದೆಯೋ, ಅದನ್ನು ನೋಡಿಕೋ " ಎಂದಳು.

" ಹಾಗೆಂದರೆ ?"

" ಶಕುಂತಲೆಯ ಮಾತಿನಲ್ಲಿಯೇ ಹೇಳಬೇಕೆಂದರೆ, ಅವರು ಭಾವೋದ್ರೇಕ ಪೂರಿತರಾದವರು. ದೇಹ ಒಂದು ಕಡೆ, ಆಲೋಚನೆ ಮತ್ತೊಂದು ಕಡೆ. ಆ ಪುಣ್ಯಾತ್ಮರಿಗೆ ಮದುವೆ ಯಾವತ್ತೆಂಬುದೇ ಮರೆತು ಹೋದರೇನು ಗತಿ ?" ಎಂದು ವಸುಮತಿಯು ವಿಷಯವನ್ನು ವಿಸ್ತಾರ ಮಾಡಿ ಹೇಳಿದಳು.

ವಿಮಲೆ ಮದುವಣಗಿತ್ತಿಯ ಕಡೆಗೆ ನೋಡುತ್ತಾ " ಏನು ನಮ್ಮ ಸಾವಿತ್ರಿಯು ಹುಡುಕಿದ ಸತ್ಯವಾನನು ಸರಿಹೋಗದಿರುವುದು ಹೇಗೆ ?" ಎಂದಳು.

ಶಕುಂತಲೆ "ಅವಳ ಮಾತು ಬಿಡು, ವಿಮಲಾ.ಅವರು ಗ್ರಂಥಕರ್ತರು, ಭಾವನಾ ಸಂಪನ್ನರು ಎಂದು ಹೇಳಿದ ಮಾತಿಗೆ ಇವಳು ಇಲ್ಲಸಲ್ಲದ ಅರ್ಥಗಳನ್ನು ಮಾಡುತ್ತಾಳೆ " ಎಂದಳು.

ಮಾಲತಿ " ಗ್ರಂಥಕರ್ತರು ಭಾವನಾ ಸುಂದರಿಯಲ್ಲಿ ಮಗ್ನರಾಗಿ ಈ ಸುಂದರಿಯನ್ನು ಮರೆತು ಬಿಟ್ಟರೆ ?" ಎಂದಳು.

ಶಕುಂತಲೆ ಆ ತುಂಟ ಹುಡುಗಿಯರನ್ನು ಗಮನಿಸದೆ ವಿಮಲೆಯನ್ನು ಕುರಿತು " ನೀನು ಅವರನ್ನು ನೋಡಬೇಕು, ವಿಮಲಾ. ಅವರೊಬ್ಬ ಮಹಾ ಪುರುಷರು. ಅವರು ತಪಸ್ವಿಗಳಂತೆ. ನಾನು ಅವರನ್ನು ಮದುವೆಗೆ ಒಪ್ಪಿಸಬೇಕಾದರೆ ಸಾಕು ಸಾಕಾಗಿ ಹೋಯಿತು. ಕಡೆಗೆ ಒಪ್ಪಿಕೊಂಡರು " ಎಂದಳು.

ಆ ಮಾತಿನೊಡನೆ ಸಾಹಿತ್ಯ, ಕಲೆ,ನರ್ತನ ಮುಂತಾದ ಎಷ್ಟೋ ವಿಷಯಗಳನ್ನು ಆ ಗೆಳತಿಯರು ಮಾತನಾಡಿದರು.

ಶಕುಂತಲೆಯು ತಾನು ನರ್ತನವನ್ನು ಕಲಿಯಲು ಪಟ್ಟ ಪಾಡುಗಳೆಲ್ಲ ವನ್ನೂ ಹೇಳಿದಳು. ಅವಳು ಬೇಲೂರು ಹಳೇಬೀಡುಗಳಲ್ಲಿ ತಿಂಗಳು ತಿಂಗಳು ತಿಂಗಳಗಳನ್ನು ಕಳೆದಿದ್ದಳು. ಅಲ್ಲಿನ ವಿವಿಧವಾದ ವಿಗ್ರಹಗಳನ್ನು ನೋಡಿ, ಅದೇ ಸ್ಥಳದಲ್ಲಿ ನರ್ತನಾಚಾರ್ಯರಿಂದ ನರ್ತನಗಳನ್ನು ಕಲಿತಳು. ಶಿಲಾ ಪುತ್ಥಳಿಗಳ ಭಾವ ಭಂಗಿಗಳು ತನ್ನ ದೇಹದಲ್ಲಿ ಮೂರ್ತೀಭವಿಸಲು ಬಲು ಹೆಣಗಾಡಿದಳು. ಮಲಬಾರಿಗೆ ಹೋಗಿ ಹಗಲು ರಾತ್ರಿಗಳನ್ನದೆ ಪ್ನೈ ಬೆವ ರುತ್ತಿದ್ದರೂ ಕುಣಿದು ದಣಿದಿದ್ದಳು. ದಕ್ಷಿಣ ದೇಶದಲ್ಲೆಲ್ಲಾ ಸಂಚಾರ ಮಾಡಿ ವಿವಿಧ ನರ್ತಕರನ್ನು ಕಂಡಳು. ಅನೇಕರಲ್ಲಿ ಶಿಷ್ಯ ವೃತ್ತಿಯನ್ನು ಮಾಡಿದಳು.

ಶಕುಂತಲೆಯು ತಾನು ದಕ್ಷಿಣ ದೇಶದಲ್ಲಿ ಸಂಚಾರ ಮಾಡುತ್ತಿದ್ದಾಗ ನಟರಾಜನನ್ನು ನೋಡಿದುದಾಗಿ ಹೇಳಿದಳು.

ರಾತ್ರಿ ಬಹಳ ಹೊತ್ತಾಗಿದ್ದಿತು. ಎಲ್ಲರೂ ಹೋಗಿ ಮಲಗಿಬಿಟ್ಟರು.

ವಿಮಲೆಗೆ ಮಾಮೂಲಿನಂತೆ ಬೆಳಗಾಗ ಬಹಳ ಬೇಗ ಎಚ್ಚರವಾ ಯಿತು. ಅವಳ ಗೆಳತಿಯರು ಎದ್ದಿರಲಿಲ್ಲ. ಹೋಗಿ ಮುಖವನ್ನು ತೊಳೆ ದುಕೊಂಡಳು. ಕಾಫಿಯು ಇನ್ನೂ ತಯಾರಾಗಿರಲಿಲ್ಲ. ಏನು ಮಾಡುವು ದಕ್ಕೂ ತೋರದೆ ಕಾಂಪೌಂಡಿನಲ್ಲಿ ಸುತ್ತಾಡಿಕೊಂಡು ಬರೋಣವೆಂದು ಹೊರಟಳು.

ಶಕುಂತಲೆಯ ಮನೆಯ ಸುತ್ತಲೂ ದೊಡ್ಡ ತೋಟ. ಅಲ್ಲಲ್ಲಿ ದೊಡ್ಡ ಮರಗಳು. ಬೇಕಾದಷ್ಟು ಪುಟ್ಟ ಗಿಡಗಳು. ನಡುವೆ ಗಿಡಗಳಲ್ಲಿ ಕೆಂಪು ಹೂಗಳು ಅರಳಿವೆ. ಮತ್ತೆ ಕೆಲವು ಅರಳುತ್ತಿವೆ. ನಡೆಯಲು ಮಾಡಿರುವ ಸಣ್ಣ ದಾರಿಗಳ ಪಕ್ಕದಲ್ಲಿ ಗರಿಕೆಯ ಹುಲ್ಲು ಹುಲುಸಾಗಿ ಬೆಳೆ ದಿದೆ. ಅವುಗಳ ಮೇಲೆಲ್ಲಾ ಇಬ್ಬನಿಯು ಮುತ್ತುಗಳಂತೆ ಕುಳಿತಿವೆ. ಅವು ಗಳ ಮೇಲೆಲ್ಲಾ ಬಿಳಿಯ ತೆಳುವಾದ ಪರದೆಯನ್ನು ಹಾಕಿದಂತೆ ಮಂಜು ಬೀಳುತ್ತಿದೆ.

ಇನ್ನೂ ಸೂರ್ಯೋದಯವಾಗಿರಲಿಲ್ಲ.

ಹಾಗೆಯೇ ವಿಮಲೆಯು ಓಡಿಯಾಡುತ್ತಿದ್ದಳು. ಅನತಿ ದೂರದಲ್ಲಿ ತಮ್ಮ ಮನೆಯು ಕಂಡು ಬಂದಿತು. ಇಂದು ಅವರದಲ್ಲದಿದ್ದರೂ ಉತ್ಸಾಹ

ದಿಂದ ಅದರ ಕಡೆಗೆ ನೋಡಿದಳು. ಅಲ್ಲಿ ಯಾರೂ ವಾಸ ಮಾಡುತ್ತಿರು ವಂತೆ ಕಂಡು ಬರಲಿಲ್ಲ. ಇನ್ನೂ ಬ್ಯಾಂಕಿನವರು ಯಾರೂ ಬಾಡಿಗೆ ಕೊಟ್ಟಿ ಲ್ಲವೆಂದು ಕಂಡು ಬರುತ್ತದೆ. ಆ ಮನೆಯು ಕಳಾರಹಿತವಾಗಿ ಕಾಣು ತ್ತಿತ್ತು. ಗಾಳಿಗೆ ಕಿಟಕಿಯ ಬಾಗಿಲುಗಳು ಆಡುತ್ತಿದ್ದವು. ಹಿಂದೆ ಅವರಿ ದ್ದಾಗ ಹಾಕಿದ್ದ ಪರದೆಗಳು ಮಲಿನವಾಗಿ ಹರಕಾಗಿ ಅಲ್ಲಾಡುತ್ತಿದ್ದವು. ಸುತ್ತಲ ತೋಟದಲ್ಲಿ ಗಿಡಗಳೂ ಪೊದೆಗಳೂ ಬೇಕಾದ ಹಾಗೆ ಬೆಳೆದುಕೊಂ ಡಂತೆ ಕಂಡು ಬರುತ್ತಿದ್ದವು. ಅದನ್ನು ನೋಡಿ ವಿಮಲೆಗೆ " ಅಯ್ಯೋ " ಎಂದೆನಿಸುತ್ತಿತ್ತು. ಆದರೂ ಅವಳು ಅಲ್ಲಿಯೇ ನಿಂತುಕೊಂಡಿದ್ದಳು. ಆ ಸಂಕಟವೂ ಅವಳಿಗೆ ಸುಖಕರವಾಗಿದ್ದಿತೋ, ಏನೋ ?

ಎಷ್ಟು ಹೊತ್ತಾಗಿದ್ದಿತೋ, ಮಾಲತಿಯು ಬಂದು ವಿಮಲೆಯನ್ನು ಕಾಫಿಗೆ ಕರೆದುಕೊಂಡು ಹೋದಳು.

೮

ಮದುವೆಗೆ ಇನ್ನೂ ಎರಡು ದಿನಗಳಿದ್ದವು.

ವಿಮಲೆಯು " ಅಳಿಯಂದಿರು ಬಂದರೇನೇ ?" ಎಂದು ಕೇಳಿದಳು.

ಶಕುಂತಲೆಯು " ಈ ದಿನ ಬೆಳಗಾಗ ಬಂದರು. ನಿನಗೆ ಗೊತ್ತಾಗಲಿಲ್ಲವೇನೇ ? ಅವರು ಎರಡು ದಿನ ಮೊದಲೇ ಬಂದುದು ಅದೃಷ್ಟ. ಅದೇ ನನಗೆ ಹೆದರಿಕೆಯಾಗಿದ್ದಿತು. ಆದರೇನಮ್ಮಾ, ನಿನ್ನೆಯ ದಿನ ರಾತ್ರಿ ಎಲ್ಲವೂ ಅವ್ಯವಸ್ಥೆಯಾಗಿ ಹೋಯಿತು " ಎಂದಳು.

ಅದೇನು ಎಂಬಂತೆ ವಿಮಲೆಯು ಗೆಳತಿಯ ಮುಖವನ್ನು ನೋಡಿದಳು.

" ಅಯ್ಯೋ. ಈ ದಿನ ಬರುವುದಾಗಿ ತಂತೀ ಕೊಟ್ಟಿದ್ದರು. ಆ ಹೊಸ ಡ್ರೈವರ್ ಬಂದಿದ್ದಾನಲ್ಲ, ಅವನೊಬ್ಬ ಕತ್ತೆ. ನಿನ್ನೆಯ ದಿನ ರಾತ್ರಿಯೇ ಹೇಳಿದ್ದೆ. ಅವರು ಬರುತ್ತಾರೆ. ಮದರಾಸ್ ಗಾಡಿ ಬರುವ ಮೊದಲೇ ರೈಲ್ವೆ ಸ್ಟೇಷನ್ನಿಗೆ ಹೋಗು. ನೋಡಿ, ಅವರನ್ನು ಕರೆದುಕೊಂಡು ಬಾ ಎಂದು ಹೇಳಿದ್ದೆ. ಅವರ ಚಹರೆ ಸಹ ಹೇಳಿದ್ದೆ. ಅವನು ಅವಿವೇಕ ಮಾಡಿಬಿಟ್ಟ. ನಾನೇ ಹೋಗಿದ್ದರೆ ಚೆನ್ನಾಗಿದ್ದಿತು "

" ಈಗೇನು ಅನಾಹುತವಾಯಿತು, ಶಕು "

" ಆಗುವುದೇನು, ಏನಾಗಬಾರದಾಗಿದ್ದಿತೋ ಅದೆಲ್ಲವೂ ಆಯಿತು. ಆಂಥೋನಿ ಬೆಪ್ಪ, ವಿಮಲಾ. ಅವನು ಸರಿಯಾಗಿ ಗಾಡಿಯಲ್ಲಿ ನೋಡಲೇ ಇಲ್ಲ. ಬರಲಿಲ್ಲವೆಂದು ವಾಪ್ಸು ಬಂದು ಬಿಟ್ಟ. ಅವರು ಹತ್ತು ನಿಮಿಷ

ಗಳೊಳಗಾಗಿ ಟ್ಯಾಕ್ಸಿಯಲ್ಲಿ ಬಂದು ಬಿಟ್ಟರು ”

ವಿಮಲೆಯು ನಕ್ಕು, “ ಈಗ ಮುಳುಗಿ ಹೋದುದೇನಂತೆ ? ಅಂತೂ ಬಂದು ಬಿಟ್ಟರಲ್ಲ ” ಎಂದು ಸಮಾಧಾನದಿಂದ ಹೇಳಿದಳು.

“ ನೀನೂ ಚೆನ್ನಾಗಿ ಹೇಳುತ್ತೀ, ಕಾಣೆ. ಹಾಗಾದ ಮೇಲೆ ಅವರಿಗೆ ಮುಖ ತೋರಿಸುವುದಕ್ಕೇ ನನಗೆ ನಾಚಿಕೆ. ಅವರನ್ನು ನೋಡಲೇ ಬಾರದೆಂದಿದ್ದೆ. ಅದೂ ಆಗಲಿಲ್ಲ. ಈ ಮನೆಯಲ್ಲಿ ಅವರನ್ನು ಯಾರೂ ಕಾಣರು. ಅವರಿಗೆ ಯಾರ ಪರಿಚಯವೂ ಇಲ್ಲ. ಅದರಿಂದ ನಾನು ಹೋಗಿ ಅವರನ್ನು ಎದುರುಗೊಳ್ಳಲೇ ಬೇಕಾಯಿತು ”

ವಿಮಲೆ ತನ್ನ ಗೆಳತಿಯು ಅನಾವಶ್ಯಕವಾಗಿ ವಿಷಯವನ್ನು ದೊಡ್ಡದು ಮಾಡುತ್ತಿದ್ದಾಳೆಂದು ಕೊಂಡಳು. ಶಕುಂತಲೆಯು ಸ್ವಲ್ಪ ಹಾಗೆಯೇ.

“ ಅವರ ಯೋಗಕ್ಷೇಮವನ್ನು ನೋಡೋಣ ಬಾ ”

ವಿಮಲೆಯು ಗೆಳತಿಯೊಡನೆ ಮಹಡಿಯ ಮೆಟ್ಟಲುಗಳನ್ನು ಇಳಿದು ಕೆಳಗೆ ಹೋದಳು.

ಕೆಳಗೆ ದೊಡ್ಡ ಕೋಣೆಯೊಂದರಲ್ಲಿ ಎಲ್ಲರೂ ಇದ್ದರು. ನಟರಾಜನು ಕುಳಿತು ಮಾತನಾಡುತ್ತಿದ್ದನು. ಶಕುಂತಲೆಯ ಅಣ್ಣ ಪ್ರಕಾಶ, ಅವನ ಸ್ನೇಹಿತ ಮಾಧವರಾವ್, ಮಾಲತಿ, ವಸುಮತಿ ಎಲ್ಲರೂ ಸೇರಿ ಬಾತಾಖಾನಿಯನ್ನು ಮಾಡುತ್ತಿದ್ದರು.

ಶಕುಂತಲೆಯೂ ವಿಮಲೆಯೂ ಹೋಗಿ ಅಲ್ಲಿ ಕುಳಿತುಕೊಂಡರು.

ವಿಮಲೆಗೆ ಪ್ರಕಾಶನು ಗೊತ್ತೇ ಇದೆ. ಮಾಧವರಾವ್ ಸಹ ಗೊತ್ತು. ಅವನು ಅದೇ ಬೀದಿಯಲ್ಲಿದ್ದಾನೆ. ಶಂಕರನೂ ಅವನೂ ಸ್ನೇಹಿತರುಇನ್ನಿರುವ ಗಂಡಸು ಒಬ್ಬನೇ ! ಅವನು ಹಳೆಯ ಪಂಚೆಯುಟ್ಟು ಹರಿದ ಬನಿಯನ್ ಧರಿಸಿ ಕುಳಿತಿದ್ದನು. ಕೈಯಲ್ಲಿ ಸಿಗರೇಟು ಉರಿಯುತ್ತಿದ್ದಿತು. “ ಇವನೇ ಶಕುಂತಲೆಯ ಗಂಡನೇನು, ಇದೇನು ಹೀಗಿದ್ದಾನೆ, ಮದುವೆಗೆ ಬಂದ ಗಂಡು ಲಕ್ಷಣವಾಗಿ ಬಟ್ಟೆಗಳನ್ನು ಹಾಕಿಕೊಂಡಿರ ಬೇಡವೇ ?” ಎಂದೆನಿಸಿತು.

ಮರುಕ್ಷಣವೇ “ ಕವಿಗಳೂ ಗ್ರಂಥಕರ್ತರೂ ಹೀಗೆಯೇ ಇರುವುದೇನೋ ?” ಅಂದು ಕೊಂಡಳು.

ಮಾಧುವು ವಿಮಲೆಯನ್ನು ನೋಡಿದ ಕೂಡಲೇ " ಓಹೋ ! ನೀವು. ನಿಮ್ಮನ್ನು ನೋಡಿ ಬಹಳ ದಿನವಾಯಿತು. ಮೈಸೂರಿಗೆ ಹೊರಟು ಹೋದ ಮೇಲೆ ಇತ್ತ ಕಡೆ ಬಂದೇ ಇರಲಿಲ್ಲ. ಶಂಕರನು ಹೇಗಿದ್ದಾನೆ ? ನೀವೆಲ್ಲಾ ಹೇಗಿದ್ದೀರಿ ?" ಎಂದು ಕೇಳಿದನು.

ಅವನು ಮೈಸೂರಿನಲ್ಲಿ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದನು.

ವಿಮಲೆಯು ನಕ್ಕು " ಆರೋಗ್ಯವಾಗಿದ್ದಾನೆ " ಎಂದು ಹೇಳಿದಳು.

ನಟರಾಜನು ವಿಮಲೆಯನ್ನು ಉದ್ದೇಶ ಮಾಡಿ " ಇವರ್‍ಯಾರು ?" ಎಂದು ಕೇಳಿದನು.

ಶಕುಂತಲೆಯು ಅವಳು ತನ್ನ ಗೆಳತಿ ಎಂದೂ ಅವಳ ಹೆಸರು ವಿಮಲೆ ಎಂದೂ ಪರಿಚಯ ಮಾಡಿಸಿದಳು.

" ವಿಮಲಾ ದೇವಿ ! ನೀವೂ ಶಕುಂತಲೆಯೂ ಬಹಳ ಸ್ನೇಹಿತರೆಂದು ಕಂಡು ಬರುತ್ತದೆ " ಎಂದು ಹೇಳಿ ನಟರಾಜನು ಅವಳ ಕಡೆಗೆ ನೋಡಿದನು.

ವಿಮಲೆಯು ತಲೆಯಾಡಿಸಿ 'ಹೂ' ಎಂದಳು.

"ಮತ್ತೆ ನೀವೆಲ್ಲಿ, ಶಕುಂತಲೆಯೊಡನೆ ಕಾಣಲೇ ಇಲ್ಲವಲ್ಲ "

ವಿಮಲೆಗೆ ಕೂಡಲೇ ಅವನು ಹೇಳಿದ ಮಾತು ಅರ್ಥವಾಗಲಿಲ್ಲ. ಬೇಗ ಅರ್ಥ ಮಾಡಿಕೊಂಡು " ಓಹೋ ! ದಕ್ಷಿಣ ದೇಶದ ದೇವಾಲಯಗಳಿಗೆ ನಮ್ಮ ಶಕುಂತಲೆ ಬಂದಿದ್ದಾಗ ನಾನಿರಲಿಲ್ಲವೆಂದೋ ನಿಮ್ಮ ಅರ್ಥ. ನಮ್ಮ ಶಕುಂತಲೆಯನ್ನು ದುಷ್ಯಂತನು ಭೇಟಿ ಮಾಡಿದಾಗ ಪ್ರಿಯಂವದೆಯು ಇಲ್ಲಿಯೇ ಉಳಿದುಕೊಂಡಿದ್ದಳು " ಎಂದಳು.

ಆ ಮಾತು ಕೇಳಿ ಎಲ್ಲರೂ ನಕ್ಕರು. ಅಷ್ಟು ಹೊತ್ತಿಗೆ ಪರಿಚಾರಕನು ಬಂದು " ಟಿಫಿನ್ ಸಿದ್ಧವಾಗಿದೆ " ಎಂದು ಹೇಳಿದನು. ಪ್ರಕಾಶನು ಎಲ್ಲರನ್ನೂ ಎಬ್ಬಿಸಿದನು. ನಟರಾಜನು ಅವರೊಡನೆ ಎದ್ದು ಬರಲಿಲ್ಲ. ಪ್ರಕಾಶನು ಅವರನ್ನು ಕರೆತರುವಂತೆ ತಂಗಿಗೆ ಹೇಳಿ ಇತರರೊಡನೆ ಒಳಕ್ಕೆ ಹೋದನು.

ನಟರಾಜ, ಶಕುಂತಲೆ, ವಿಮಲೆ ಮೂರು ಮಂದಿಯೇ ಇದ್ದರು.

ಶಕುಂತಲೆ " ಏಳೆಂಟು ತಿಂಗಳುಗಳ ಹಿಂದೆ ವಿಮಲೆಯ ತಾಯಿ

ಸತ್ತು ಹೋದರು. ಇಲ್ಲದಿದ್ದರೆ ಇವಳು ನನ್ನೊಡನೆ ಬರುತ್ತಿದ್ದಳು" ಎಂದು ಹೇಳಿದಳು.

ನಟರಾಜ "ತಾಯಿಯನ್ನು ಕಳೆದು ಕೊಳ್ಳುವುದು ಬಹಳ ದೊಡ್ಡ ಕಷ್ಟ" ಎಂದು ಹೇಳಿದನು.

"ಏಳಿ, ನಾವೂ ಸ್ವಲ್ಪ ತಿಂಡೀ ತೆಗೆದುಕೊಂಡು ಬರೋಣ" ಎಂದು ಶಕುಂತಲೆಯು ಸೂಚಿಸಿದಳು.

ಅವನು "ಶಕುಂತಲಾ! ಇಲ್ಲಿಗೇ ತಿಂಡಿ ತರಿಸಿ ಬಿಡು. ನಾವು ಮೂವರೂ ಇಲ್ಲಿಯೇ ತೆಗೆದುಕೊಳ್ಳೋಣ" ಎಂದನು.

ಶಕುಂತಲೆಯು "ಹಾಗೇ ಆಗಲೆ"ಂದು ಹೇಳಿ ಮೇಲೆದ್ದಳು. ವಿಮಲೆಯೂ ಗೆಳತಿಯೊಡನೆ ಹೊರಟಳು.

ಶಕುಂತಲೆಯು "ಸ್ವಲ್ಪ ಇವರೊಡನೆ ಮಾತನಾಡುತ್ತಿರು. ನಾನು ಹೋಗಿ ತಿಂಡೀ ಕಾಫಿಗಳಿಗೆ ಹೇಳಿ ಬರುತ್ತೇನೆ" ಎಂದು ಹೇಳಿ ಹೊರಟು ಹೋದಳು.

ನಟರಾಜನು "ಈಗ ನೀವು ಎಲ್ಲಿದ್ದೀರಿ?" ಎಂದು ಕೇಳಿದನು.

ವಿಮಲೆಯೇ "ನಮ್ಮ ತಾಯಿಯು ಸಾಯುವವರೆವಿಗೆ ಇಲ್ಲೇ ಹತ್ತಿರದಲ್ಲಿದ್ದೆವು. ಆಮೇಲೆ ಕೆಂಗೇರಿಯ ಬಳಿ ನಮ್ಮದೊಂದು ತೋಟವಿದೆ. ಅಲ್ಲಿದ್ದೇವೆ" ಎಂದಳು.

"ನಿಮ್ಮ ತಂದೆಯವರು ಬಹಳ ವೃದ್ಧರೆಂದು ಕಾಣುತ್ತದೆ"

"ಇಲ್ಲ, ಅವರೀಗ ಬದುಕಿಲ್ಲ. ಹತ್ತು ವರ್ಷಗಳ ಹಿಂದೆ ಅವರೊಂದು ಆಕ್ಸಿಡೆಂಟಿನಲ್ಲಿ ತೀರಿಕೊಂಡರು. ಈಗ ನಾವು ನಾವೇ ಹುಡುಗರು"

ನಟರಾಜನು ಸ್ವಲ್ಪ ನೆನೆಸಿಕೊಂಡು "ನಿಮಗೆ ಒಬ್ಬ ಅಣ್ಣ ಇದ್ದಾರೆಯಲ್ಲವೇ? ಇನ್ನೂ ಯಾರು ಯಾರು ಇದ್ದಾರೆ?" ಎಂದನು.

"ಒಬ್ಬ ಅಣ್ಣ, ಒಬ್ಬ ತಮ್ಮ, ಇಬ್ಬರು ತಂಗಿಯರು, ಒಬ್ಬ ಅತ್ತೆ"

ಅವನು ಕನಿಕರದಿಂದ ವಿಮಲೆಯ ಕಡೆಗೆ ನೋಡುತ್ತಾ "ನಿಮಗೆ ವೆಂಕಟರಾಯನ ಪರಿಚಯವಿದೆಯೇನು?" ಎಂದನು.

ಆ ಮಾತು ಕೇಳಿ ವಿಮಲೆಗೆ ನಾಚಿಕೆಯಾಯಿತು. ಅವಳ ಮುಖವು ಕೆಂಪಗಾಯಿತು. ಮಾತನಾಡಲಾರದೇ ಅವಳ ಬಾಯಿ ಕಟ್ಟಿಹೋಯಿತು.

" ನೀವು ಸಂಕೋಚ ಪಡಬೇಕಾಗಿಲ್ಲ, ವಿಮಲಾದೇವಿ. ನಾನು ಎಲ್ಲ ವನ್ನೂ ಬಲ್ಲೆ. ನಿಮಗೂ ಅವನಿಗೂ ಮದುವೆಯಾಗುವುದೆಂದು ಸಹ ಕೇಳಿದ್ದೇನೆ. ಅವನಿಗೆ ನಿಮ್ಮಂತಹ ಹೆಂಡತಿಯು ಸಿಕ್ಕಿದ್ದು ಪುಣ್ಯ "

ಅವಳು ಸ್ವಲ್ಪ ಹೊತ್ತು ತಡೆದು " ಅವರು ನಿಮಗೆ ಹೇಗೆ ಗೊತ್ತು ?" ಎಂದಳು.

" ಅವನು ನನ್ನ ತಮ್ಮನ ಜೊತೆಯಲ್ಲಿ ಓದುತ್ತಿದ್ದ. ನಾನೂ ಇದೇ ಊರಿನವನು, ವಿಮಲಾ ದೇವಿ. ಚಿಕ್ಕಂದಿನಲ್ಲಿ ನಿಮ್ಮನ್ನು ನೋಡಿದ್ದ ನೆನಪಿದೆ. ಈಗ ಮರೆತು ಹೋಗಿದೆ. ನಾನು ವೆಂಕಟುವನ್ನೂ ಮರೆತುಬಿಟ್ಟಿದ್ದೆ. ಮೊನ್ನೆ ಮದರಾಸಿನಲ್ಲಿ ಸಿಕ್ಕಿದ್ದ. ಅವನೇ ನಮ್ಮ ಹಳೆಯ ಸ್ನೇಹವನ್ನು ಜ್ಞಾಪಿಸಿದ. ಅವನು ಇಳಿದಿದ್ದ ಹೋಟಲಿಗೇ ಹೋಗಿ ಅವನೊಂದಿಗೇ ಊಟ ಮಾಡಿದೆ "

ಹಾಗೆಯೇ ಯೋಚಿಸುತ್ತಿದ್ದು " ವೆಂಕಟು ಮದುವೆಯ ವಿಷಯವಾಗಿ ಬಹಳ ಆತುರವಾಗಿದ್ದಾನೆ. ನಮಗೆ ಸದ್ಯದಲ್ಲಿ ಒಳ್ಳೆಯ ಊಟವು ಸಿಕ್ಕಬಹುದು " ಎಂದನು.

ಅವಳದಕ್ಕೆ ಉತ್ತರವನ್ನು ಹೇಳಲಿಲ್ಲ.

" ಯಾಕೆ ಮಾತನಾಡುವುದಿಲ್ಲ, ವಿಮಲಾ ದೇವಿ "

" ನೀವು ಹೇಳುವುದು ನಿಜ. ಆದರೆ ಮನೆಯಲ್ಲಿರುವವರು ಸಣ್ಣ ಪುಟ್ಟ ಹುಡುಗರು. ವಯಸ್ಸಾದವನೆಂದರೆ ಶಂಕರನೊಬ್ಬನೇ. ಅತ್ತೆ ಹುಷಾರಿಲ್ಲದವರು. ಅವರನ್ನೆಲ್ಲಾ ಬಿಟ್ಟು ಹೋಗುವುದು ಕಷ್ಟ "

ವಿಮಲೆ ಆ ಮಾತನ್ನು ಹೇಳುತ್ತಿದ್ದಂತೆಯೇ ಶಕುಂತಲೆಯು ಬಂದಳು. ಅವಳ ಹಿಂದೆ ಪರಿಚಾರಕನು ಕಾಫೀ ತಿಂಡಿಗಳನ್ನು ತಂದಿಟ್ಟನು.

ತಿಂಡಿಯನ್ನು ತಿನ್ನುತ್ತಾ ಶಕುಂತಲೆಯು " ಇವರ ಜೊತೆಯಲ್ಲಿ ಮಾತು ಆರಂಭಿಸಿ ಬಿಟ್ಟೆಯೋ ಇಲ್ಲವೋ, ವಿಮಲಾ. ಇನ್ನು ತೆಗೆದುಕೋ. ಬೆಳಕು ಹರಿದರೂ ಮಾತು ನಿಲ್ಲುವುದಿಲ್ಲ. ನಿದ್ದೆ ಬರುತ್ತದೆ, ನಾನು ಹೋಗುತ್ತೇನೆ, ಎಂದರೂ ಇವರು ಬಿಡುವುದಿಲ್ಲ " ಎಂದಳು.

ಮೂವರೂ ಕಾಫಿ ತಿಂಡಿಗಳನ್ನು ಮುಗಿಸಿದರು. ಅಷ್ಟು ಹೊತ್ತಿಗೆ ಇತರರೂ ಬಂದು ಸೇರಿದರು.

ಮುಸ್ಸಂಜೆಯು ಹೊತ್ತಾಗಿದ್ದಿತು. ಹಜಾರದಲ್ಲಿ ವಸುಮತಿಯು ಹಾಡುತ್ತಿದ್ದಳು. ಎಲ್ಲರೂ ಕುಳಿತು ಕೇಳುತ್ತಿದ್ದರು.

ಆಗ ಮಾಲತಿಯು ಬಂದು ವಿಮಲೆಯ ಕಿವಿಯಲ್ಲಿ ಏನೋ ಹೇಳಿದಳು. ಅವಳು ಗಾಬರಿಯಾಗಿ ಎದ್ದು ನಿಂತಳು. ಹಾಡುವುದು ನಿಂತು ಹೋಯಿತು. ಇದ್ದವರೆಲ್ಲರೂ ಉತ್ಸಾಹದಿಂದ ವಿಷಯವೇನೆಂದು ವಿಚಾರಿಸಿದರು.

ವಿಮಲೆಯು ಹೇಳಲೇ ಬೇಕಾಗಿ ಬಂದಿತು. ವಾಸುವು ಮರಕೋತಿ ಆಡುತ್ತಿದ್ದವನು ಮರದಿಂದ ಬಿದ್ದನಂತೆ. ಯಾರೋ ಗುರುಕುಲದಿಂದ ಫೋನ್ ಮಾಡಿದ್ದಾರೆ. ವಾಸುವು ಅಕ್ಕನಿಗಾಗಿ ಪರಿತಪಿಸುತ್ತಿದ್ದಾನಂತೆ. ಶಂಕರನು ಇನ್ನೂ ಮನೆಗೆ ಬಂದಿಲ್ಲ.

ಶಕುಂತಲೆಯು ವಿಮಲೆಯನ್ನು ಮನೆಗೆ ಕಳಿಸುವ ಏರ್ಪಾಡಿನಲ್ಲಿ ತೊಡಗಿದಳು. ಆಂಥೋನಿಯನ್ನು ಹುಡುಕಿಸಿದರು. ಅವನೆಲ್ಲಿಯೋ ಕಾರು ತೆಗೆದುಕೊಂಡು ಹೋಗಿದ್ದನು. ಬೇರಾವ ಕಾರೂ ಇರಲಿಲ್ಲ. ಫೋನ್ ಮಾಡಿ ಟ್ಯಾಕ್ಸಿಯನ್ನು ತರಿಸಿದಳು.

ವಿಮಲೆಯು ಹೊರಟಳು.

ಹೋಗುವಾಗ ಶಕುಂತಲೆ "ನಾಳೆ ಬೆಳಗಾಗ ಬಂದು ಬಿಡು, ವಿಮಲಾ. ಅಷ್ಟು ಹೊತ್ತಿಗೇ ಕಾರು ಕಳಿಸುತ್ತೇನೆ. ತಪ್ಪಿಸಿಕೊಳ್ಳಬೇಡ. ಅಪಾಯವೇನಾದರೂ ಆಗಿದ್ದರೆ ಮಗುವನ್ನು ಈಗಲೇ ಕರೆದುಕೊಂಡು ಬಾ, ಆಸ್ಪತ್ರೆಗೆ ತೋರಿಸೋಣ" ಎಂದಳು.

ಅವಳು ಮನೆಗೆ ಬರುವ ವೇಳೆಗೆ ವಾಸುವು ಹಾಸಿಗೆಯ ಮೇಲೆ ಮಲಗಿದ್ದನು. ಹೆಚ್ಚು ಪೆಟ್ಟು ಆಗಿರಲಿಲ್ಲ. ಸ್ವಲ್ಪ ಮೊಳಕಾಲು ತರಿದು ಹೋಗಿದ್ದಿತು. ಅದಕ್ಕೆ ಸೀಮೇಎಣ್ಣೆಯನ್ನು ಹಚ್ಚಿದ್ದರು

ವಿಮಲೆಯು ಹೋಗಿ ಹಾಸಿಗೆಯ ಪಕ್ಕದಲ್ಲಿ ಕುಳಿತುಕೊಂಡಳು.

ಅವಳನ್ನು ನೋಡಿದೊಡನೆಯೇ ವಾಸುವು ಮೇಲೆದ್ದು ಅವಳ ಕೊರಳಿಗೆ ಕೈ ಹಾಕಿ ಹಿಡಿದುಕೊಂಡು "ಅಕ್ಕಾ ಬಹಳ ಹೆದರಿಕೆಯಾಗಿತ್ತು. ನೀನು ಬಂದುಬಿಟ್ಟೆಯಲ್ಲಾ " ಎಂದನು.

" ನೀನು ಮರದಿಂದ ಬಿದ್ದೆ ಎಂದರೆ ಬರದಿರುತ್ತೇನೆಯೇನೋ ?"

" ಹಾಗಲ್ಲ, ಅಕ್ಕಾ! ನಾನು ಮರದಿಂದ ಬೀಳುವಷ್ಟು ದಡ್ಡನೇ ! ಕೆಳಗೆ ಹಾರಬೇಕೆಂದಿದ್ದಾಗ ಕೊಂಬೆಯು ಮುರಿದು ಹೋಯಿತು "

ಜ್ವರವು ಬಂದಿದೆಯೇನೋ ಎಂದು ಅಕ್ಕನು ತಮ್ಮನ ಕೆನ್ನೆಯನ್ನು ಮುಟ್ಟಿನೋಡಿದಳು. ಹೊಟ್ಟೆಯನ್ನೂ ಮುಟ್ಟಿನೋಡಿದಳು. ಅದೇನೂ ಇರಲಿಲ್ಲ.

ಮಂಡಿಯನ್ನು ಮುಟ್ಟಿದಾಗ " ಇಲ್ಲಿ ಮುಟ್ಟಿದರೆ ನೋವಾಗುತ್ತದೆ " ಎಂದನು.

ವಿಮಲೆಯು ಅವನನ್ನು ಮಲಗಿಸಿ ಪಕ್ಕದಲ್ಲಿಯೇ ಕುಳಿತುಕೊಂಡು " ಒಳ್ಳೇ ಗಾಬರಿಮಾಡಬಿಟ್ಟೆಯಲ್ಲಾ, ವರದಾ. ಮಗು ಏನಾಗಿಹೋದನೋ ಎಂದು ನಾನು ಹೆದರಿಬಿಟ್ಟೆ. ಫೋನ್ ಮಾಡಿಸುವಾಗ ಸರಿಯಾಗಿಯಾದರೂ ಫೋನ್ ಮಾಡಬಾರದಾಗಿತ್ತೇ " ಎಂದಳು.

ವರದಾ " ಇಲ್ಲಕ್ಕ ಹೊಲ ಮಾಡುವ ಕಾಳಯ್ಯ ಗಾಬರಿಯಿಂದ ಫೋನ್ ಮಾಡಿಸಿದ್ದು. ನಾನು ಅಕ್ಕನು ಹೆದರಿಕೊಳ್ಳುತ್ತಾಳೆ, ಬೇಡ–ಎಂದೇ ಹೇಳಿದೆ "ಎಂದಳು.

ವಾಸುವು " ನೀನು ಬರದೇ ಇದ್ದರೆ ನಾನೇ ಬಂದು ಬಿಡುತ್ತಿದ್ದೆನಕ್ಕಾ ನನಗೆ ಬಹಳ ಹೆದರಿಕೆಯಾಗಿದ್ದಿತು " ಎಂದನು.

## ೧೧

ಮೂರನೆಯ ದಿನ ವಿಮಲೆಯು ಬೆಂಗಳೂರಿಗೆ ಬರಲು ಕಾರು ಬಂದಿರಲಿಲ್ಲ.

ಇದ್ದಕ್ಕೆ ಇದ್ದಂತೆಯೇ ನಟರಾಜನು ಕೆಂಗೇರಿಯ ಮನೆಗೆ ಬಂದು ಬಿಟ್ಟನು. ಅವನನ್ನು ನೋಡಿ ವಿಮಲೆಯು "ನೀವೇ ಕಾರು ತೆಗೆದು ಕೊಂಡು ಬಂದು ಬಿಟ್ಟರೇನು ?" ಎಂದು ಕೇಳಿದಳು.

ಅವನು "ಇಲ್ಲ. ನಿಮ್ಮನ್ನು ನೋಡಿಕೊಂಡು ಹೋಗೋಣವೆಂದು ಬಂದೆ" ಎಂದನು.

ಯಾವುದಕ್ಕಾಗಿಯೋ ಹೊರಗಡೆ ಬಂದಿದ್ದ ವಿಮಲೆಯು ಅನಿರೀಕ್ಷಿತವಾಗಿ ನಟರಾಜನನ್ನು ನೋಡಿದ್ದಳು. ಅವನು ಏಕೆ ಬಂದಿದ್ದಾನೆಂಬುದು ಅವಳಿಗೆ ಅರ್ಥವಾಗಲಿಲ್ಲ. ಆದರೂ ಮನೆಗೆ ಬಂದಾತನನ್ನು ಸ್ವಾಗತಿಸುತ್ತಾ "ಬನ್ನಿ. ಒಳಗೆ ಹೋಗೋಣ. ನಮ್ಮ ಮನೆಯವರೆಲ್ಲರೂ ಶಕುಂತಲೆಯ ಗಂಡನನ್ನು ನೋಡಬೇಕು–ಎಂದು ಹಾತೊರೆಯುತ್ತಿದ್ದಾರೆ" ಎಂದಳು.

ಇಬ್ಬರೂ ಒಳಗೆ ಹೋದರು.

ಹೋಗುತ್ತಾ ವಿಮಲೆಯು "ಶಕುಂತಲೆಯು ಏನು ಮಾಡುತ್ತಿದ್ದಳು ?" ಎಂದಳು.

"ಲಲಿತಮ್ಮನವರ ತಂಗಿ ತುಮಕೂರಿನಲ್ಲಿದ್ದಾರಂತಲ್ಲ. ಅವರು ರೋಗಿಷ್ಟರೆಂದು ಕಂಡು ಬರುತ್ತದೆ. ಅವರು ಮದುವೆಗೆ ಬರಲಾಗಲಿಲ್ಲವೆಂದು ಬರೆದರಂತೆ. ಅವರನ್ನು ಕರೆದುಕೊಂಡು ಬರಲು ಈ ದಿನ ಬೆಳಗಾಗ ಕಾರಿನಲ್ಲಿ ಲಲಿತಮ್ಮನವರು ತುಮಕೂರಿಗೆ ಹೋದರು. ಅವರ ಜೊತೆಯಲ್ಲಿ ಶಕುಂತಲೆಯೂ ಹೋಗಿದ್ದಾಳೆ"

ಅಡಿಗೆಯ ಮನೆಯ ಬಾಗಿಲಿನಲ್ಲಿ ಹಾಸಿಗೆಯನ್ನು ಹಾಸಿದ್ದಿತು. ವಾಸುವು ಅದರ ಮೇಲೆ ಕುಳಿತು ಸಿಗರೇಟ್‌ಪ್ಯಾಕ್‌ನ ನೂರಾರು ಬೊಂಬೆಗಳನ್ನು ಜೋಡಿಸುತ್ತಿದ್ದನು. ಸಾವಿತ್ರಮ್ಮನವರು ಬೆಳಗಾದರೂ ಕುಳಿತು ತೂಕಡಿಸುತ್ತಿದ್ದರು. ಅಡಿಗೆಯ ಮನೆಯಲ್ಲಿ ವರದ ಬೆಂಡೇಕಾಯಿ ಹೆಚ್ಚುತ್ತಿದ್ದಳು. ಶೀಲೆಯು ಒಲೆಯ ಮೇಲೆ ಬಾಂಡಲಿಯಲ್ಲಿ ಕಾದಿದ್ದ ಎಣ್ಣೆಗೆ ಮಸಾಲೆಯನ್ನು ಹಾಕುತ್ತಿದ್ದಳು.

ನಟರಾಜನು ಬಂದವನೇ ವಾಸುವಿನ ಪಕ್ಕದಲ್ಲಿ ಕುಳಿತುಕೊಂಡು "ಇವನೇ ಏನು ನಿನ್ನೆಯ ದಿನ ಮರದಿಂದ ಬಿದ್ದವನು ?" ಎಂದು ಕೇಳಿ ಉತ್ತರವನ್ನು ನಿರೀಕ್ಷಿಸದೇ "ಬಹಳ ಪೆಟ್ಟಾಯಿತೇ, ಮಗು" ಎಂದವನ ತಲೆಯನ್ನು ಸವರಿದನು.

ವಾಸುವು ತನಗೆ ಅಪರಿಚಿತನಾದ ವ್ಯಕ್ತಿಯನ್ನು ತಲೆ ಎತ್ತಿ ನೋಡಿ "ಇಲ್ಲ" ಎಂದನು.

ಶಂಕರನಿಗೆ ಆ ದಿನ ಯಾಕೋ ರಜಾ ಇದ್ದಿತೆಂದು ಕಂಡು ಬರುತ್ತದೆ. ಹೊರಗೆ ಹೋಗಿದ್ದವನು ಅಷ್ಟು ಹೊತ್ತಿಗೆ ಬಂದನು. ಅವರಿಬ್ಬರೂ ಪರಸ್ಪರ ಪರಿಚಯವನ್ನು ಮಾಡಿಕೊಂಡರು. ನಟರಾಜನಿಗೆ ವಿಮಲೆಯು ತನ್ನ ತಂಗಿಯರನ್ನು ತೋರಿಸಿದಳು.

ವಿಮಲೆಯು ಎಲ್ಲರಿಗೂ ಕಾಫಿಯನ್ನು ಮಾಡಿ ಕೊಟ್ಟಳು.

ಅನಂತರ ನಟರಾಜನು ಹೊರಡಲು ಸಿದ್ಧವಾದನು. ಅವನು ವಿಮಲೆಯನ್ನು "ನೀವೂ ಬರಬೇಕಲ್ಲ, ಬನ್ನಿ. ಹೋಗೋಣ" ಎಂದು ಕರೆದನು.

"ಕಾರು ಬಂದರೆ ?"

"ಬಂದರೆ ನೀವು ಹೊರಟು ಹೋದಿರೆಂದು ಹೇಳುತ್ತಾರೆ, ಅಲ್ಲವೇ ಶಂಕರ್"

ನಟರಾಜನು ಟ್ಯಾಕ್ಸಿಯಲ್ಲಿ ಬಂದಿದ್ದನು. ಅದು ಹೊರಗಡೆ ಬೀದಿಯಲ್ಲಿ ನಿಂತಿದ್ದಿತು. ಹೊರಗೆ ಸಣ್ಣ ತುಂತುರು ಹನಿಗಳು ಬೀಳುತ್ತಿದ್ದವು. ಅವನೂ ವಿಮಲೆಯೂ ಆ ಸಣ್ಣ ಮಳೆಯಲ್ಲಿಯೇ ನಡೆದುಕೊಂಡು ಹೋಗಿ ಕುಳಿತುಕೊಂಡರು.

ಟ್ಯಾಕ್ಸಿಯು ಬೆಂಗಳೂರಿನ ಕಡೆಗೆ ಹೊರಟ ನಂತರ ನಟರಾಜನು

“ ವಿಮಲಾ ದೇವಿ. ನಾನೊಂದು ಸ್ಪಷ್ಟವಾದ ಪ್ರಶ್ನೆಯನ್ನು ಕೇಳಲು ಬಂದೆ. ನೀವು ವೆಂಕಟರಾಯನನ್ನು ಮದುವೆ ಮಾಡಿಕೊಳ್ಳುವುದು ಗೊತ್ತಾಗಿ ಹೋಗಿದೆಯೇನು ?’’ ಎಂದನು.

ಉತ್ತರವು ಸಿದ್ಧವಾಗಿದ್ದರೂ ವಿಮಲೆಯು ಕೂಡಲೇ ಜವಾಬು ಕೊಡ ಲಿಲ್ಲ. ಅವನ ಕಡೆಗೆ ನೋಡಿ, ತಲೆ ತಗ್ಗಿಸಿಕೊಂಡು, ಸಣ್ಣ ಧ್ವನಿಯಿಂದ “ ಹೂ, ಗೊತ್ತಾಗಿದೆ ” ಎಂದಳು.

ನಟರಾಜನು“ ನಾನೂ ಹಾಗೆಯೇಎಂದುಕೊಂಡೆ.ಅವನು ಮಾತನಾಡಿ ದ್ದರಲ್ಲಿ ನನಗೆ ಹಾಗೆ ತೋರಿತು ’’ ಎಂದನು.

ಒಂದು ಕ್ಷಣ ಸುಮ್ಮನಿದ್ದು “ ವಿಮಲಾ ದೇವಿ. ನಾನು ಏನು ಏನೋ ಮಾತನಾಡುತ್ತೇನೆಂದು ಕೊಳ್ಳಬೇಡಿ. ನನಗೆ ನಿಮ್ಮಲ್ಲಿ ಬಹಳ ಆಸಕ್ತಿ. ತಾಯಿತಂದೆಗಳನ್ನು ಕಳೆದುಕೊಂಡ ನೀವು ಇಷ್ಟೊಂದು ಕಷ್ಟ ದಿಂದ ಸಂಸಾರವನ್ನು ನಿಭಾಯಿಸುತ್ತಿದ್ದೀರಿ. ಕಷ್ಟಸಹಿಷ್ಣುತೆಯು ಮೆಚ್ಚಿ ಕೊಳ್ಳಬೇಕಾದ ಗುಣ ” ಎಂದಳು.

ವಿಮಲೆಯು ನಕ್ಕು “ ಈಗಂತೂ ಸರಿ. ಇನ್ನೆಷ್ಟು ದಿನ ನಿಭಾಯಿ ಸಲಾಗುತ್ತದೆಂದು ಭಯವಾಗುತ್ತಿದೆ ” ಎಂದಳು.

“ ನಾನು ನಿಮ್ಮನ್ನು ನೋಡಿದ ನಂತರ, ನಿಮ್ಮ ಸಂಸಾರವನ್ನು ನೋಡಿದ ನಂತರ ಇಂತಹ ಜೀವನವನ್ನು ಚಿತ್ರಿಸುವ ಸುಂದರವಾದ ಕಾದಂ ಬರಿಯನ್ನು ಬರೆಯಬೇಕೆಂದು ಕೊಂಡೆ ”

ವಿಮಲೆಯು ನಗುತ್ತಾ “ಏನು, ನಮ್ಮ ಬದುಕನ್ನು ಚಿತ್ರಿಸುತ್ತೀರಾ ? ಅದರಿಂದ ಏನು ಪ್ರಯೋಜನ ? ಇಂತಹ ಜೀವನ ಬರೆದಿರುವ ಕಾದಂಬರಿ ಯನ್ನು ಯಾರು ಓದುತ್ತಾರೆ ?” ಎಂದಳು.

“ ಯಾರೂ ಓದದಿದ್ದರೆ ಬೇಡ. ಆದರ್ಶ ಜೀವನವನ್ನು ಚಿತ್ರಿಸು ವುದೇ ಕಾದಂಬರಿಯ ಸಾಫಲ್ಯ. ಬೆಡಗು ಬಿನ್ನಾಣಗಳು ನಿರರ್ಥಕ. ವಾಸ್ತ ವವಾದ ಸರಳ ಜೀವನವೇ ದೊಡ್ಡದು ”

“ ನಾನು ಬೇಡವೆಂದರೆ ನೀವು ಬಿಡುತ್ತೀರಾ ?”

“ವಿಮಲಾದೇವಿ ! ನಿಮ್ಮ ಮದುವೆ ಇನ್ನೂ ಬಹಳ ನಿದಾನವಾಗು ತ್ತದೆಯಲ್ಲವೆ ?”

" ಯಾಕೆ ? ಅದೇನು ಹಾಗೆನ್ನುತ್ತೀರಿ "?

" ಅದೇನಿಲ್ಲ. ಈಗಲೇ ಬೇಕಾದರೂ ಮದುವೆ ಮಾಡಿಕೊಳ್ಳ ಬಹುದು. ನಿಮ್ಮ ಸಂಸಾರವನ್ನು ಹೀಗೆಯೇ ಬಿಟ್ಟು ಬಿಟ್ಟು ನೀವು ಹೊರಟು ಹೋಗುವುದು ಹೇಗೆಂದು ತೋರಿತು. ಅಷ್ಟೆ !"

ವಿಮಲೆಯು ಮಾತು ತಿರುಗಿಸಬೇಕೆಂದು " ನಮ್ಮ ತೋಟ ಮನೆಗಳು ಹೇಗಿದೆ, ನಟರಾಜ್ " ಎಂದಳು.

" ಸೊಗಸಾಗಿವೆ. ನಾನು ಅಂತಹದನ್ನೇ ಇಷ್ಟಪಡುವುದು. ಹಳೂ ದೊಡ್ಡ ಬಂಗಲೆಗಳು ನನಗೆ ಪ್ರಿಯವಾಗುವುದಿಲ್ಲ. ನಿಮ್ಮ ತೋಟದಂತಹ ಜಾಗದಲ್ಲಿ ಮನೆಗಿಂತಲೂ ಗುಡಿಸಿಲೇ ಆದರೆ ಮತ್ತೂ ಪ್ರಿಯ. ಬೇಕೆಂದರೆ ಯಾವಾಗಲೋ ಒಂದೊಂದು ಬಾರಿ ಪೇಟೆಗೆ ಹೋಗಿ ಬರಬಹು ದಷ್ಟೆ "

" ಸುಮ್ಮನೆ ಪರ್ಣಕುಟಿಯ ವಾಸವೋ; ಬರೆಯುವುದೂ ಉಂಟೋ"?

" ಬರೆಯುವುದಿಲ್ಲದೇ ಉಂಟೆ, ಉಸಿರಿರುವವರೆವಿಗೆ ಬರೆಯುತ್ತೇನೆ"

ಯಾರೂ ಮಾತನಾಡಲಿಲ್ಲ.

" ವಿಮಲಾ ! ನೀವು ಮೆಚ್ಚಿ ಕೊಳ್ಳುವಂತಹ ಯುವತಿ. ನಾವು ಕೆಳಗಡೆ ರೂಮಿನಲ್ಲಿ ಕುಳಿತಿದ್ದಾಗ ನೀವು ಬಂದಿರಲ್ಲ. ಆ ಕ್ಷಣವೇ ಹಾಗೆಂದುಕೊಂಡೆ. ಈಗ ನಿಮಗೆ ಸಂಸಾರದ ಕಷ್ಟವಿರಬಹುದು. ಕಷ್ಟ ವೇನು ಶಾಶ್ವತವೇ ? ಕಷ್ಟವು ಕಳೆದನಂತರ ನೀವು ಪ್ರಕಾಶಿಸುತ್ತೀರಿ. ಏನೋ ಹೇಳುತ್ತೇನೆ ಎಂದು ಕೊಳ್ಳಬೇಡಿರಿ. ನಿಜವಾಗಿಯೂ ನನ್ನ ಮನಸ್ಸಿನಲ್ಲಿ ಏನು ಬರುತ್ತದೆಯೋ ಅದನ್ನೇ ಹೇಳುತ್ತಿದ್ದೇನೆ"

ಪುನಃ ಮಾತು ಅವಳ ಕಡೆಗೆ ತಿರುಗಿತು. ಅದರಿಂದ ಅವಳು ಮಾತ ನಾಡಲಿಲ್ಲ.

" ನಾನು ಹೀಗೆ ಹೇಳುವುದರಿಂದ ನೀವು ತಪ್ಪು ತಿಳಿದುಕೊಳ್ಳುವುದಿಲ್ಲ ತಾನೇ ?"

ಅವಳು ಸಂಕೋಚದಿಂದ " ಇಲ್ಲ " ಎಂದಳು.

"ಈ ವಾರದಲ್ಲಿ ನನ್ನ ಮತ್ತು ಶಕುಂತಲೆಯ ಮದುವೆಯಾಗಿ ಹೋಗು ತ್ತದೆ. ಅವಳು ನರ್ತನವನ್ನು ಕಲಿಯಲು ಮಣಿಪುರಕ್ಕೆ ಹೋಗಬೇಕೆಂದು

ಹೇಳುತ್ತಿದ್ದಾಳೆ. ನನಗೆ ಇಲ್ಲಿದ್ದರೇನು, ಅಲ್ಲಿದ್ದರೇನು ? ನಾನೂ ಹೋಗುತ್ತೇನೆ. ನಾವು ಹೊರಟು ಹೋದರೆ ಇನ್ನು ವಾಪ್ಸು ಬರುವುದು ವರ್ಷವೋ ಒಂದೂವರೆ ವರ್ಷವೋ ?

" ಅಂತೂ ವಾಪ್ಸು ಬರುತ್ತೇನೆ. ಬರುವ ವೇಳೆಗೆ ನಿಮಗೂ ವೆಂಕಟವಿಗೂ ಮದುವೆ ಯಾಗಿರಬಹುದು. ಈಗ ನೀವು ಮಾಡುತ್ತಿರುವ ಜೀವನದಿಂದ ಭಿನ್ನವಾದ ಜೀವನವನ್ನು ಮಾಡುತ್ತಿರಬಹುದು" ಎಂದು ಹಠಾತ್ತನೆ ಮಾತು ನಿಲ್ಲಿಸಿದನು.

ಪುನಃ " ನನ್ನನ್ನು ಹುಚ್ಚನೆಂದುಕೊಳ್ಳಬೇಡಿ " ಎಂದು ನಕ್ಕನು.

" ಆದರೆ ಯಾವಾಗಲೂ ನಾನು ನಿಮ್ಮ ವಿಷಯವನ್ನೇ ಆಲೋಚನೆ ಮಾಡುತ್ತಿರುತ್ತೇನೆ. ನಿಮ್ಮನ್ನು ನಾನು ಮರೆಯುವುದೇ ಇಲ್ಲ . ಈ ಸಣ್ಣ ವಯಸ್ಸಿನಲ್ಲಿ ದಿಟ್ಟತನದಿಂದ ಸಂಸಾರ ನಿರ್ವಹಣ ಮಾಡುತ್ತಿರುವ ಯುವತಿಯನ್ನು ನನ್ನಿಂದ ಮರೆಯಲಾಗುವುದೇ ಇಲ್ಲ "

" ವಿಮಲಾದೇವಿ. ನೀವು ನನ್ನನ್ನು ಮರೆತು ಬಿಡಬೇಡಿ. ನಾನೊಬ್ಬ ಸ್ನೇಹಿತನೆಂದು ಭಾವಿಸಿರಿ. ಸದಾಕಾಲದಲ್ಲಿಯೂ ನಿಮ್ಮ ವಿಷಯದಲ್ಲಿ ಆಸಕ್ತನಾದ ಸ್ನೇಹಿತನೆಂದುಕೊಳ್ಳಿರಿ " ಎಂದನು

" ಇವನೇಕೆ ಹೀಗೆ ಮಾತನಾಡುತ್ತಿದ್ದಾನೆ " ಎಂದು ವಿಮಲೆಗೆ ತೋರಿತು. ಇನ್ನು ನಾಲ್ಕೈದು ದಿನ ಏನಾದರೂ ಮಾತನಾಡಿಕೊಳ್ಳಲಿ. ಅನಂತರ ನಾನೆಲ್ಲಿಯೋ ಇವನೆಲ್ಲಿಯೋ " ಎಂದುಕೊಂಡಳು.

ಸ್ವಲ್ಪ ಹೊತ್ತು ಸುಮ್ಮನಿದ್ದ ನಟರಾಜನು " ವಿಮಲಾ ! ನನ್ನನ್ನು ನಿಮ್ಮಣ್ಣನೆಂದು ಭಾವಿಸಿ. ಶಂಕರನಿಗಿಂತ ವಯಸ್ಸಾದ ಅಣ್ಣನೆಂದು ಭಾವಿಸಿ " ಎಂದು ಹೇಳಿ ಅವಳ ಕೈಯನ್ನು ಹಿಡಿದುಕೊಂಡನು.

ವಿಮಲೆ ಉಸಿರಾಡುವಂತಾಯಿತು. ಅವಳು " ನೀವು ನನ್ನನ್ನು ತಂಗಿಯನ್ನಾಗಿ ಪರಿಗ್ರಹಿಸುವುದಾದರೆ ಅದು ನನ್ನ ಸೌಭಾಗ್ಯ " ಎಂದಳು.

" ನಾನು ನಿನ್ನ ಅಣ್ಣನಾದರೆ ನಿನ್ನ ವಿಷಯವನ್ನು ಮಾತನಾಡಲು ನನಗೆ ಅಧಿಕಾರವಿದೆ. ಅಲ್ಲವೆ ? ವಿಮಲಾ "

ಅವಳು ತಂಗಿಯಾಗಲು ಒಪ್ಪಿದನಂತರ ಅವನು ಏಕವಚನದಲ್ಲಿ ಮಾತನಾಡತೊಡಗಿದನು.

" ಆಗಬಹುದು. ಬೇಕಾದ್ದು ಮಾತನಾಡಬಹುದು "

" ಸರಿ, ಹಾಗಾದರೆ ಮಾತನಾಡುತ್ತೇನೆ, ಹೇಳು. ನಿನಗೂ ವೆಂಕಟುವಿಗೂ ಎಷ್ಟು ದಿನಗಳ ಪರಿಚಯ ?"

ಅವಳು ಸುಮ್ಮನಿದ್ದಳು.

" ಮಾತನಾಡು, ವಿಮಲಾ. ನಾನು ಇಲ್ಲಿರುವುದು ಒಂದೇ ಒಂದು ವಾರ. ಅದಾದ ಮೇಲೆ ನಾನು ಪುನಃ ಬರುವುದು ವರ್ಷವಾದರೂ ಆಗುತ್ತದೆ. ತಿರುಗಿ ನಮಗೆ ಹೀಗೆ ಮಾತನಾಡಲು ಅವಕಾಶವು ಸಿಗುತ್ತದೆಯೋ ಇಲ್ಲವೋ ? ನಾನು ನಿನ್ನಲ್ಲಿ ಬಹಳ ಆಸಕ್ತನಾಗಿದ್ದೇನೆ. ನಿನ್ನ ವಿಷಯವೆಲ್ಲವನ್ನೂ ನನಗೆ ತಿಳಿದುಕೊಳ್ಳಬೇಕೆಂದಿದೆ "

" ಏನು ತಿಳಿದುಕೊಳ್ಳಬೇಕು, ಕೇಳಿರಿ "

ಅವಳ ಕೈ ನಡುಗುತ್ತಿದ್ದವು. ಮಾತು ಸ್ಖಲಿತವಾಗಿದ್ದಿತು.

" ನಿನಗೂ ವೆಂಕಟುವಿಗೂ ಪರಿಚಯವಾಗಿ ಎಷ್ಟು ದಿನಗಳಾದುವು ?"

" ಏಳೆಂಟು ತಿಂಗಳಾಗಿರಬಹುದು. ನಮ್ಮ ತಾಯಿ ಸತ್ತಾಗಿನಿಂದಲೂ........"

" ನೀನು ಅವನನ್ನು ಮದುವೆ ಮಾಡಿಕೊಳ್ಳುತ್ತೀಯಲ್ಲವೇ ?"

" ಹೂ..........."

" ಯಾವಾಗ ?"

" ಅದಿನ್ನೂ ಸರಿಯಾಗಿ ಗೊತ್ತಿಲ್ಲ "

" ನಿಮ್ಮ ಮದುವೆಗೆ ಆತಂಕವಾಗಿರುವುದು ಈ ಸಂಸಾರ. ಈ ಸಂಸಾರದಲ್ಲಿ ನಿನಗಿರುವ ಕರ್ತವ್ಯವಲ್ಲವೇ ?

" ಹೌದು. ಅದೇ ಅಡ್ಡಿ. ನಮ್ಮ ವರದೆಗೆ ಹದಿನೇಳು ವರ್ಷ. ಅವಳು ಮಗುವಿನಂತೆ. ಶೀಲಳಿಗೆ ಹದಿನಾಲ್ಕು. ವಾಸುವಿಗೆ ಹನ್ನೊಂದು. ಅತ್ತೆ ಹುಷಾರಿಲ್ಲ. ಇವರೆಲ್ಲರನ್ನೂ ಶಂಕರನ ತಲೆಗೆ ಕಟ್ಟಿಹೋಗಿಬಿಡುವುದು ಹೇಗೆ ? ನಾನಿಲ್ಲದಿದ್ದರೆ ಅವರಿಗೆ ಕಷ್ಟವಾಗಬಹುದು "

ನಟರಾಜನು ಅವಳ ಬೆನ್ನು ತಟ್ಟಿ " ಭೇಷ್ ! ಸ್ತ್ರೀತ್ವ, ಮಾತೃತ್ವ, ಮಹತ್ವಗಳೆಲ್ಲವೂ ನಿನ್ನಲ್ಲಿ ಮೂರ್ತೀಭವಿಸಿವೆ. ಕಷ್ಟ, ಬಡತನಗಳಿದ್ದರೂ

ಆ ಗುಣಗಳು ಅಚ್ಚಳಿಯದೇ ಇವೆ. ಅದು ನಿನಗೆ ಗೊತ್ತಿದೆಯೇನು ?" ಎಂದನು.

ವಿಮಲೆಯು ನಾಚಿಕೆಯಿಂದ " ಇಲ್ಲ. ನೀವು ಹೇಳುವುದೊಂದೂ ನನಗೆ ಅರ್ಥವಾಗುವುದಿಲ್ಲ " ಎಂದಳು.

" ಅಯ್ಯೋ, ಹುಚ್ಚಿ. ನಾನೇಕೆ ಇಲ್ಲಿ ಬಂದಿದ್ದೇನೆ ಎಂದುಕೊಂಡೆ. ನೀನು ಸರಿಯಾಗಿ ಮಾತನಾಡದಿದ್ದರೂ ನಿನ್ನನ್ನು ಮಾತನಾಡಿಸುತ್ತಿರುವುದು ಏಕೆಂದುಕೊಂಡೆ ?ಆ ಮಹಾ ಗುಣಗಳು ನಿನ್ನಲ್ಲಿವೆ ಎಂದು "

ಅವನ ಮಾತುಗಳನ್ನು ಕೇಳುತ್ತಿದ್ದ ವಿಮಲೆಗೆ ಎಲ್ಲಿಯೋ ಏನೋ ಕೇಳಿದಂತೆ ಭಾಸವಾಗುತ್ತಿದ್ದಿತು.

" ವಿಮಲಾ ! ಈ ನಿನ್ನ ಜೀವನವು ವಾಸ್ತವವಾದುದು. ಆದರ್ಶವಾದುದು. ಇಲ್ಲಿಂದ ಕೃತ್ರಿಮವಾದ ಜೀವನದೆಡೆಗೆ ಧಾವಿಸುತ್ತಿದ್ದೇನಲ್ಲಾ ಎನ್ನಿಸುತ್ತಿದೆ "

ವಿಮಲೆಯು " ಅಗೋ ! ನೋಡಿ. ನಿಮ್ಮ ಜೀವನ ಸ್ಥಳ " ಎಂದು ಶಕುಂತಲೆಯ ಮನೆಯನ್ನು ಬೆರಳಲ್ಲಿ ತೋರಿಸಿದಳು.

## ೧೨

ಮಾರನೆಯ ದಿನ ವರಪೂಜೆ.

ಮನೆಯಲ್ಲೆಲ್ಲಾ ಮದುವೆಯ ಓಡಿಯಾಟಗಳು ನಡೆಯುತ್ತಿದ್ದವು. ಆದರೆ ಮನೆಯವರೊಬ್ಬರೂ ಅಲ್ಲಿರಲಿಲ್ಲ. ಎಲ್ಲರೂ ಹೊರಗೆ ಹೋಗಿದ್ದರು. ವಿಮಲೆಯು ಮನೆಯವರು ಇದ್ದು ನೋಡಿಕೊಳ್ಳಬೇಡವೇ ಎಂದುಕೊಂಡಳು. ಅನಂತರ ದೊಡ್ಡ ಮನುಷ್ಯರ ತರಹವೇ ಹೀಗೇನೋ, ಎಂದು ಸಮಾಧಾನ ಮಾಡಿಕೊಂಡಳು.

ಬೆಳಕು ಹೋಗಿ ಕತ್ತಲು ಬರುವ ಮುಸ್ಸಂಜೆಯ ಹೊತ್ತಿನಲ್ಲಿ ವಿಮಲೆಯು ಕಿಟಕಿಯ ಬಳಿ ನಿಂತು ಯಾವುದೋ ಕಾದಂಬರಿಯನ್ನು ಓದುತ್ತಾ ಇದ್ದಾಗ ನಟರಾಜನು ಅವಳಿದ್ದ ಕೋಣೆಯನ್ನು ಪ್ರವೇಶ ಮಾಡಿದನು. ಅವಳು ಆಲೋಚನಾ ಮಗ್ನಳಾಗಿದ್ದುದರಿಂದಲೋ ಅಥವಾ ಪುಸ್ತಕದಲ್ಲಿ ಆಸಕ್ತಳಾಗಿದ್ದುದರಿಂದಲೋ ಅವನು ಬಂದ ಕೂಡಲೇ ವಿಮಲೆಯು ಗಮನಿಸಲಿಲ್ಲ.

ತಿರುಗಿ ನೋಡಿ ವಿಮಲೆಯು ಮೆಲು ದನಿಯಲ್ಲಿ "ನೀವೇನು! ನೀವು ಇಲ್ಲಿಲ್ಲವೆಂದು ಕೊಂಡಿದ್ದೆ. ನೀವೂ ಶಕುಂತಲೆಯೂ ಫೋಟೋಗ್ರಫಿಕ್ ಎಗ್ಸಿಬಿರ್ಷಗೆ ಹೋಗಿದ್ದೀರಿ, ಅಂತ ಇದ್ದೆ" ಎಂದಳು.

ನಟರಾಜನು ಅವಳ ಹತ್ತಿರ ಬಂದು ನಿಂತುಕೊಂಡು "ವಿಮಲಾ" ಎಂದನು.

ಅವನೆಂದುದು ಮಾತನ್ನು ವಿಷಯಾಂತರದ ಕಡೆಗೆ ತಿರುಗಿಸುವಂತಿದ್ದಿತು.

ಆದರೂ ಪುನಃ "ಇಲ್ಲ. ಹೋಗಲಿಲ್ಲ" ಎಂದು ಹೇಳಿದನು.

" ಶಕುಂತಲ ಹೋಗುವುದಾಗಿ........" ಎಂದು ಹೇಳಲು ಹೊರಟ ವಿಮಲೆಗೆ ಮುಂದೆ ಮಾತನಾಡಲಾಗಲಿಲ್ಲ.

ವಿಮಲೆಯ ಮನಸ್ಸು ಯಾಕೋ ಬೇಜಾರಾಗಿದ್ದಿತು. ಅದರಿಂದಲೇ ಮಾಲತಿ ವಸುಮತಿಯರೊಡನೆ. ಮದುವೆಯ ಸಿದ್ಧತೆಗಳಿಗೆ ಓಡಿಯಾಡದೇ ಮಹಡಿಯ ಮೇಲೆ ಬಂದು ಕಾದಂಬರಿಯನ್ನು ಓದುತ್ತಿದ್ದಳು. ನಟರಾಜನನ್ನು ನೋಡಿದ ಕೂಡಲೇ ಅವಳ ಬೇಜಾರು ಮರುಕಳಿಸಿ ಬಂದಿತು. ನಟರಾಜನೊಂದಿಗೆ ಅವಳು ಬಹಳವಾಗಿ ಮಾತನಾಡಿದ್ದಳು. ಅನಂತರ ಅವನೊಂದಿಗೆ ಮಾತನಾಡಬಾರದಾಗಿದ್ದಿತೆಂದು ಕೊಂಡಿದ್ದಳು. ಇನ್ನಿರುವ ನಾಲ್ಕು ದಿನಗಳು ಮದುವೆಯ ಗಲಾಟೆಯಲ್ಲಿದ್ದು ಬಿಟ್ಟರೆ ಪುನಃ ಅವನನ್ನು ಭೇಟಿಯಾಗುವ ಸಂಭವವಿಲ್ಲ. ಅವನೆಲ್ಲೋ, ತಾನೆಲ್ಲೋ–ಎಂದು ಕೊಂಡಿದ್ದಳು.

ಆದರೆ ಅವಳು ನೆನೆಸಿದಂತೆ ಆಗಲಿಲ್ಲ. ನಟರಾಜನು ಪುನಃ ಬಂದು ಬಿಟ್ಟಿದ್ದಾನೆ. ಅವಳ ಸಮೀಪದಲ್ಲಿ ತೀರಾ ಸಮೀಪದಲ್ಲಿ ನಿಂತಿದ್ದಾನೆ. ಅವಳ ಕಡೆಗೆ ನೋಡುತ್ತಿದ್ದಾನೆ.

ಪ್ರಾಪ್ತವಾದ ಈ ಸನ್ನಿವೇಶವು ನಿವಾರಣೆಯಾಗುವ ಪರಿಸ್ಥಿತಿಗಳು ಕಂಡು ಬರಲಿಲ್ಲ.

ಅವಳೂ ಅವನ ಕಡೆಗೆ ನೋಡಿದಳು. ಆದರೆ ಅವಳು ಮೌನವಾಗಿದ್ದಳು. ಅವಳ ಶರೀರವು ನಡುಗುತ್ತಿದ್ದಿತು.

ನಟರಾಜನು ಅವಳ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು " ಹಾಗಾದರೆ ನಿನಗೆ ವಿಷಯವು ಗೊತ್ತಾಗಲಿಲ್ಲವೇನು ?" ಎಂದನು.

" ಏನು ವಿಷಯ ?"

" ಅವರು ತುಮಕೂರಿನಿಂದ ಬರುವಾಗ ಕಾರ್ ಆಕ್ಸಿಡೆಂಟ್ ಆಗಿ ಲಲಿತಮ್ಮನವರಿಗೆ ಗಾಯವಾಗಿದೆ "

ಅವಳು ಅವನ ಕಣ್ಣುಗಳಲ್ಲಿ ಕಣ್ಣಿಟ್ಟು ನೋಡುತ್ತಾ " ಏನಾಯಿತು ?" ಎಂದಳು.

" ನನಗೆ ವಿವರಗಳೆಲ್ಲವೂ ತಿಳಿಯದು. ಅಂತೂ ಲಲಿತಮ್ಮನವರು

ಬೌರಿಂಗ್ ಆಸ್ಪತ್ರೆಯಲ್ಲಿದ್ದಾರೆ. ಶಕುಂತಲೆಯು ತಾಯಿಯ ಬಳಿ ಇದ್ದಾಳೆ "

" ಶಕುಂತಲೆಗೂ ಪೆಟ್ಟಾಯಿತೇನು ?"

ನಟರಾಜನು " ಯಾಕೆ ಹೆದರಿಕೊಳ್ಳುತ್ತೀಯೆ, ವಿಮಲಾ. ಅಂತಹ ಪ್ರಮಾದವೇನೂ ಆಗಲಿಲ್ಲ. ಆಂಥೋನಿ ಕಾರು ನಡಸು........"

ಅವನು ವಿಮಲೆಯ ಕೈಯನ್ನು ಹಿಡಿದುಕೊಂಡೇ ಇದ್ದನು.

ತುಮಕೂರಿನಿಂದ ಕಾರು ಬರುವ ದಾರಿಗೆ ಅಡ್ಡಲಾಗಿ ಕೊಂಬೆಯೊಂದು ಅಕಸ್ಮಾತ್ ಆಗಿ ಬಿದ್ದಿತೆಂದೂ ಡ್ರೈವರು ಕಾರು ನಿಲ್ಲಿಸಬೇಕೆಂದು ಹಠಾತ್ತನೆ ಬ್ರೇಕ್ ಹಾಕಲು ಅದು ಪಕ್ಕಕ್ಕೆ ತಿರುಗಿ ಮರಕ್ಕೆ ಢಿಕ್ಕಿ ಹೊಡೆಯಿತೆಂದೂ ಆಗ ಲಲಿತಮ್ಮನವರಿಗೆ ತಪ್ಪಿದ ಪ್ರಜ್ಞೆಯು ಆಸ್ಪತ್ರೆಗೆ ಹೋದಾಗಲೂ ಬರಲಿಲ್ಲವೆಂದೂ ಹೇಳಿದನು.

" ಅವರ ತಂಗಿಯೂ ಕಾರಿನಲ್ಲಿದ್ದರೇನು ?"

" ಇಲ್ಲ. ಇರಲಿಲ್ಲ "

ವಿಮಲೆಯು ಕಿಟಕಿಯ ಅಂಚಿನಲ್ಲಿ ಕುಳಿತುಕೊಂಡು " ಗ್ರಹಚಾರ. ಮದುವೆ ನಾಳೆ ಎನ್ನುವಾಗ ಹೀಗಾಗುವುದೇ ? ಇದು ಪ್ರಮಾದಕ್ಕೆ ಇಟ್ಟು ಕೊಳ್ಳದೇ ಮದುವೆಯೊಂದು ಸುಖವಾಗಿ ನೆರವೇರಿದರೆ........" ಎಂದಳು.

ನಟರಾಜನು ನಿರಾಸಕ್ತಿಯಿಂದ " ನೀನು ಹೇಳುವುದು ಒಂದು ವಿಧವಾಗಿ ಸರಿ. ಏನೋ ಸರಿಹೋದರೆ ಮದುವೆಯಾಗಬಹುದು. ಆದರೂ ಅದು ಉತ್ಸಾಹ ರಹಿತವಾದ ಮದುವೆ. ಆಕೆಯು ಹುಷಾರಾಗದಿದ್ದರೆ ಈಗ ಮದುವೆಯಿಲ್ಲ " ಎಂದನು.

ಒಂದು ಕ್ಷಣಕಾಲ ತಡೆದು ವಿಮಲೆಯು ಮಾತನಾಡುವಷ್ಟರಲ್ಲಿ " ವಿಮಲಾ. ಈಗ ಸದ್ಯದಲ್ಲಿ ಮದುವೆಯು ನಡೆಯುವಂತೆಯೇ ಇಲ್ಲವೆಂದು ಕಂಡು ಬರುತ್ತದೆ "ಎಂದನು.

" ಹಾಗಾದರೆ ಏನೋ ಪ್ರಮಾದವಾಗಿರಬೇಕು, ನೀವು ಆಸ್ಪತ್ರೆಗೆ ಹೋಗಲಿಲ್ಲವೇ ?"

" ನಾನೂ ಆಸ್ಪತ್ರೆಗೆ ಹೋಗಿದ್ದೆ. ಆದರೆ ಅಲ್ಲಿ ಹೋಗಿ ಯಾರೇನು ತಾನೇ ಮಾಡಲಾಗುತ್ತದೆ ?"

ನೀವು ಒಂದನ್ನೂ ವಿವರವಾಗಿ ಹೇಳುವುದೇ ಇಲ್ಲ. ಹೇಳಿ, ಲಲಿತಮ್ಮನವರಿಗೆ ಏನಾಗಿದೆ ?"

"ಕಾಲು ಮುರಿದಿದೆ. ತೋಳಿಗೆ ಪೆಟ್ಟು ತಗುಲಿದೆ. ಅದೇನು ಅಂತಹ ಅಪಾಯಕರವಾದುದಲ್ಲ. ಅದರಿಂದ ಪ್ರಾಣ ಹೋಗುವುದಿಲ್ಲ"

"ಇನ್ನೇನು ಆಗಬೇಕು ? ಎಷ್ಟು ಕೆಟ್ಟದ್ದಾಗ ಬೇಕೋ ಅಷ್ಟೂ ಆಗಿದೆ. ಇನ್ನು ಮದುವೆಯು ನಡೆಯುವುದು ಹೇಗೆ?"

"ನಡೆಯುವುದಿಲ್ಲ, ಅಷ್ಟೆ. ನಾನು ನಾಲ್ಕೈದು ವಾರ ಮಲಬಾರಿಗೆ ಹೋಗಬೇಕಾಗಿದ್ದಿತು. ಸದ್ಯದಲ್ಲಿ ಮದುವೆ ಇಲ್ಲವೆಂದು ಹೇಳಿಬಿಟ್ಟರೆ ನಾನು ಹೊರಟು ಹೋಗುತ್ತೇನೆ"

ಅವನೂ ಕಿಟಕಿಯ ಅಂಚಿನಲ್ಲಿ ನಿಂತುಕೊಂಡನು. ಕತ್ತಲಾಗಿದ್ದರೂ ಒಬ್ಬರ ಕಡೆಗೆ ಮತ್ತೊಬ್ಬರು ನೋಡುತ್ತಿದ್ದರು. ಹೊರಗಡೆ ಕತ್ತಲಲ್ಲಿ ಸಣ್ಣ ಮಳೆಯು ಬೀಳುತ್ತಿದ್ದಿತು. ಆಳು ಬಂದು ದೀಪವನ್ನು ಹಚ್ಚಿ ಹೊರಟು ಹೋದನು.

ಸ್ವಲ್ಪ ಹೊತ್ತು ಸುಮ್ಮನಿದ್ದು ನಟರಾಜನು "ವಿಮಲಾ ! ಈ ಮದುವೆ ಸದ್ಯದಲ್ಲಿ ನಿಂತು ಹೋಗುವುದು ನಿನಗೆ ಸಂತೋಷವಲ್ಲವೇ?"ಎಂದನು.

ವಿಮಲೆಯು ಚೇಳು ಕಚ್ಚಿದವಳಂತೆ ಉಳುಕಿದ್ದು "ಅದೇನು ಹಾಗೆನ್ನುತ್ತೀರಿ ?. ನಡೆಯ ಬೇಕಾದ ಮದುವೆಯು ನಿಂತುಹೋಗಬೇಕೆಂದು ಯಾರಿಗಾದರೂ ಇಷ್ಟವಾಗುತ್ತದೆಯೇ ? ಅದರಿಂದ ಎಲ್ಲಿಯಾದರೂ ಸಂತೋಷವಾಗುತ್ತದೆಯೇ ?" ಎಂದಳು.

"ನನಗಂತೂ ಇದು ಇಷ್ಟ. ಸಂತೋಷ. ನಾನು ಹೇಳುತ್ತೇನೆ ಕೇಳು, ವಿಮಲಾ, ಸದ್ಯದಲ್ಲಿ ಮದುವೆ ನಿಂತುಹೋದಂತಯೇ. ನಾನು ಮಲಬಾರಿಗೆ ಹೋಗುವುದರೊಳಗಾಗಿ ಒಂದು ಬಾರಿ ನಿಮ್ಮ ಮನೆಗೆ ಬಂದು ಹೋಗಬೇಕೆಂದಿದೆ"

ವಿಮಲೆಯು ಉತ್ತರ ಕೊಡಲಿಲ್ಲ. ಹೊರಗಡೆ ಬೀಳುತ್ತಿದ್ದ ಮಳೆಯನ್ನು ನೋಡುತ್ತಿದ್ದಳು.

ನಟರಾಜನು ವಿಮಲೆಯ ಕೈಯನ್ನು ಹಿಡಿದೆಳೆದು "ಇಲ್ಲಿ ನೋಡು

ವಿಮಲಾ. ನಾವಿಬ್ಬರೂ ಸ್ನೇಹಿತರಾಗಿದ್ದೇವೆ. ಈ ಮದುವೆಗಾಗಿ ನೀನು ಬಂದುದರಿಂದ ನಮ್ಮ ಸ್ನೇಹ ಹೆಚ್ಚಿದೆ. ಅಲ್ಲವೇ ?" ಎಂದನು.

" ಹಾಗೆಲ್ಲಾ ಮಾತನಾಡಬೇಡಿ, ನಟರಾಜ್ ! ಈ ಮದುವೆ ನಿಲ್ಲುವುದಿಲ್ಲ. ನಾಡಿದ್ದು ನಿಮ್ಮ ಮದುವೆಯಾಗಿಯೇ ಆಗುತ್ತದೆ " ಎಂದಳು.

ಆ ಮಾತು ಅವಳ ಹೃದಯದಿಂದ ಬರಲಿಲ್ಲ. ಅದನ್ನು ಹೇಳುವುದು ಅವಳಿಗೆ ಇಷ್ಟವಿರಲಿಲ್ಲ. ಆದರೆ ಅದು ಅವಳ ಬಾಯಿಂದ ಬರಬೇಕಾಗಿ ಬಂದಿತು. ಅದರಿಂದವಳು ತನ್ನ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಿಕೊಂಡಳು.

" ಹಾಗೇನು ! ನೋಡೋಣ "

ಮನಸ್ಸಿಲ್ಲದಿದ್ದರೂ ಅವಳು " ನೋಡುವುದೇನು ? ನೀವಿಬ್ಬರೂ ಪ್ರೇಮದಿಂದ ಮದುವೆ ಮಾಡಿಕೊಳ್ಳಬೇಕೆಂದಿದ್ದೀರಿ. ಲಲಿತಮ್ಮನವರಿಗೆ ಪ್ರಾಣಾಪಾಯವಿಲ್ಲ. ಮದುವೆಯಾಗದೇ ಏನಾಗುತ್ತದೆ " ಎಂದಳು.

" ಇದು ಪ್ರೇಮ ವಿವಾಹವಲ್ಲ. ಒಪ್ಪಿಗೆಯ ವಿವಾಹ "

" ಹಾಗೆಂದರೇನು ? ವಿಚಿತ್ರವಾಗಿ ಮಾತನಾಡುತ್ತೀರಿ "

ನಟರಾಜನು ನಕ್ಕು " ನಾನು ಎರಡು ತಿಂಗಳ ಮೊದಲು ತಂಜಾವೂರಿಗೆ ಹೋಗಿದ್ದೆ. ಅಲ್ಲೊಂದು ಗುಡಿಯಿದೆ. ಆ ಗುಡಿಯ ಗೋಪುರದ ನೆರಳು ಭೂಮಿಯ ಮೇಲೆ ಬೀಳುವುದಿಲ್ಲವಂತೆ. ಅದೇನು ಕಾರಣವೋ ನೋಡಿಕೊಂಡು ಬರೋಣವೆಂದು ಹೋಗಿದ್ದೆ. ಜಯಂತಿದೇವಿ ಎಂಬ ನರ್ತಕಿಯು ಹಳೆಯ ನಾಟ್ಯಾಚಾರ್ಯರುಗಳನ್ನು ನೋಡಲು ಅತ್ತಕಡೆ ಬಂದಿದ್ದವಳು ಸಿಕ್ಕಿದಳು. ಅವಳು ನನಗೆ ಗುರುತು. ಅವಳೊಡನೆ ಶಕುಂತಲೆಯೂ ಬಂದಿದ್ದಳು. ನನ್ನನ್ನೂ ಕರೆದರು. ನಾನೂ ಅವರ ಜೊತೆ ಸೇರಿಕೊಂಡೆ. ಅವರೊಡನೆ ಕುಂಭಕೋಣ, ಮಾಯಾವರಗಳಿಗೆ ಹೋಗಿದ್ದೆ. ಆಗಲೇ ನನಗೆ ಶಕುಂತಲೆಯ ಪರಿಚಯ.

" ವಾಪ್ಸು ಬರುವಾಗ ತಿರುಚನಾಪಳ್ಳಿಗೆ ಹೋದೆವು. ಜಯಂತಿಯು ಮಾತೃಭೂತೇಶ್ವರ ಮಂದಿರದಲ್ಲಿ ಪುರಾತನ ವಿಗ್ರಹಗಳನ್ನು ನೋಡುತ್ತಿದ್ದಾಗ ನಾವು ಹೊರಗಡೆ ಮೆಟ್ಟಿಲುಗಳ ಮೇಲೆ ಕುಳಿತುಕೊಂಡಿದ್ದೆವು. ಆಗ

ಮದುವೆಯ ಮಾತು ಬಂದಿತು. ಅದೇನು ಸಂದರ್ಭದಿಂದ ಬಂದಿತೋ ನನಗೆ ಜ್ಞಾಪಕವಿಲ್ಲ. ಅನಂತರ ಆ ವಿಷಯ ಬರಲೂ ಇಲ್ಲ.

"ಸುಮಾರು ಹತ್ತು ದಿನದ ಹಿಂದೆ ನಾನು ಬೆಂಗಳೂರಿಗೆ ಬಂದೆ. ಆ ದಿನ ಮಾಯಾದೇವಿಯ ನೃತ್ಯ. ಅದನ್ನು ನೋಡಿಕೊಂಡು ಬರುವಾಗ ಶಕುಂತಲಾ ಸಿಕ್ಕಿದಳು. ನಾನು ನಮ್ಮ ತಂದೆಯೊಡನೆ ಮದುವೆ ವಿಷಯುವನೆಲ್ಲಾ ಮಾತನಾಡಿದೆ. ನೀವು ಸಿಕ್ಕಲೇ ಇಲ್ಲ. ಎಲ್ಲಾ ಏರ್ಪಾಟು ಆಗಿದೆ—ಎಂದಳು. ನಾನು ಒಪ್ಪಲಿಲ್ಲ. ಅವಳು ನೀವು ಒಪ್ಪದಿದ್ದರೆ ನಾನು ಭಾವಿ ಹಾರಿ ಬಿಡುತ್ತೇನೆ. ನಾನು ಎಲ್ಲರಿಗೂ ಹೇಳಿ ಬಿಟ್ಟಿದ್ದೇನೆ. ನನಗೆ ಅಪಮಾನವಾಗುತ್ತದೆ-ಎಂದಳು. ನಾನು ಒಪ್ಪಿಕೊಳ್ಳ ಬೇಕಾಗಿ ಬಂದಿತು"

"ಹೀಗೆ ಮದುವೆಯ ಏರ್ಪಾಟಾಯಿತೆ ?"

"ಹೌದು. ಯಾಕೆ, ಈ ತರಹ ನಿನಗೊಪ್ಪಲಿಲ್ಲವೇನು ?"

"ನಾನೇಕೆ ಒಪ್ಪಧಿರ ಬೇಕು? ಆದರೆ ಕಲಾವಿದರುಗಳ ಮದುವೆಯು ಹೀಗೆಯೇ ಇರುತ್ತದೆಯೆನೋ ?"

"ಯಾಕೆ, ಇದು ನಿನಗೆ ಸ್ವಾಭಾವಿಕವಾಗಿ ಕಂಡು ಬರುವುದಿಲ್ಲವೇನು ?"

"ನನಗೆ ಗೊತ್ತಿಲ್ಲ—ಆದರೆ.... "

ಅವಳು ಮಾತು ನುಂಗಿ ಹಾಕಲು ನಟರಾಜನು "ಹೇಳು...."ಎಂದನು

"ಆದರೆ ........ ಏನು ಇಲ್ಲ" ಎಂದುಬಿಟ್ಟಳು.

"ಹೇಳು. ನೀನೇನೋ ಹೇಳಬೇಕೆಂದಿದ್ದೆ"

"ಇಲ್ಲ. ನಾನೇನೂ ಹೇಳಬೇಕೆಂದು ಇರಲಿಲ್ಲ"

ಅವನು ತನ್ನ ಮೃದುವಾದ ಧ್ವನಿಯಿಂದ ನಯವಾಗಿ "ನೋಡು, ವಿಮಲಾ. ನಾವಿಬ್ಬರೂ ಸ್ನೇಹಿತರು. ನೀನು ಯಾವ ವಿಷಯುವನ್ನು ಬೇಕಾದರೂ ಸಂಕೋಚವಿಲ್ಲದೇ ನನ್ನ ಬಳಿ ಹೇಳಬಹುದು" ಎಂದನು.

ವಿಮಲೆಯೂ "ಏನೂ ಇಲ್ಲ......." ಎಂದು ಮಾತು ಮುಂದುವರಿಸುವುದಕ್ಕೆ ಹೋಗಿ ಅರ್ಧದಲ್ಲಿಯೇ ನಿಲ್ಲಿಸಿದಳು.

ಅವನು ತನ್ನ ಕೈಯನ್ನು ತೆಗೆದು ಅವಳ ಭುಜದ ಮೇಲೆ ಹಾಕಿ "ಹೇಳು, ವಿಮಲಾ. ಏನು ವಿಷಯ ?" ಎಂದನು.

ವಿಮಲೆ ಸುಮ್ಮನೆ ನಿಂತುಕೊಂಡಳು. ಅವಳೇನೂ ಮಾತನಾಡಲಿಲ್ಲ.

ನಟರಾಜನು ಗಾಬರಿಯಾಗಿ " ಅಳುತ್ತಿದ್ದೀಯಾ ? ಯಾಕೆ ಅಳುತ್ತೀ, ವಿಮಲಾ " ಎಂದನು.

ಅವಳು ಹಠಾತ್ತನೆ ತಿರುಗಿಕೊಂಡು ಕಿಟಕಿಯಿಂದ ಹೊರಗಡೆ ನೋಡ ತೊಡಗಿದಳು.

ವಿಮಲೆಯು ಕಿಟಕಿಯಿಂದ ಹೊರಗಡೆ ನೋಡುತ್ತಾ ಮಾತು ಮಾತಿಗೂ ಬಿಕ್ಕಳಿಸುತ್ತಾ " ಈ ಮದುವೆಯಾಗುತ್ತದೆ ಎಂದು ನಾನು ಭಾವಿಸಿದ್ದೆ. ಆಗಿದ್ದರೆ ಇನ್ನು ಒಂದು ವಾರದಲ್ಲಿ ನೀವು ಮಣಿಪುರಕ್ಕೆ ಹೊರಟು ಹೋಗುತ್ತಿದ್ದಿರಿ. ಆದರೆ ನೀವೀಗ ಹೋಗುವುದಿಲ್ಲ. ನೀವು ಇನ್ನು ಮೇಲೆ ನನ್ನನ್ನು ನೋಡಲು ಬರಬೇಡಿ. ನಾನು ಹೇಳುವುದು ವಿಚಿತ್ರವಾಗಿ ಕಂಡು ಬರಬಹುದು. ಆದರೆ ಅದು ವಿಚಿತ್ರವಲ್ಲ. ನೀವು ಪುನಃ ಬಂದು ನನ್ನನ್ನು ನೋಡದಿದ್ದರೆ ಬಹಳ ಒಳ್ಳೆಯದು " ಎಂದಳು.

ನಟರಾಜನು ಅವಳ ಹಿಂದುಗಡೆ ಹತ್ತಿರದಲ್ಲಿ ನಿಂತಿದ್ದನು.

" ಸರಿ ! ನನಗೆ ಗೊತ್ತಿರಲಿಲ್ಲ. ನಾನು ಅವಿವೇಕ ಮಾಡಿದ್ದಂತೆ ಆಯಿತು "

ಅವಳಾ ಮಾತಿಗೆ ಉತ್ತರವನ್ನು ಹೇಳಲಿಲ್ಲ.

" ಎಂದೂ ಹೀಗಾಗುವುದೆಂದು ನಾನು ಭಾವಿಸಿರಲಿಲ್ಲ "

ಅವಳು ನಾಚಿಕೆ ಪಡುತ್ತಲೇ " ನನಗೆ ಬಹಳ ನಾಚಿಕೆಯಾಗುತ್ತಿದೆ. ಆದರೆ ವಿಧಿಯಿಲ್ಲ. ನೀವು ನನ್ನ ವಿಷಯವಾಗಿ ಏನೆಂದು ಕೊಳ್ಳುತ್ತೀರೆಂಬುದನ್ನು ಬಲ್ಲೆ. ಎರಡು ದಿನಗಳ ಹಿಂದೆ ನನಗಾವ ವಿಷಯವೂ ಗೊತ್ತಿರಲಿಲ್ಲ. ಈ ಮದುವೆಯು ನಿಂತು ಹೋಗದೇ ಇದ್ದಿದ್ದರೆ ನಾನು ಈ ಮಾತು ಹೇಳುವಂತಹ ಪ್ರಮೇಯವು ಬರುತ್ತಿರಲಿಲ್ಲ " ಎಂದಳು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

" ಸರಿ !" ಎಂದು ಆ ಕೋಣೆಯಿಂದ ವಿಮಲೆಹೊರಗಡೆ ಹೊರಟಳು.

ನಟರಾಜನು " ನಿಂತುಕೋ. ಆಸ್ಪತ್ರೆಗೆ ಟೆಲಿಫೋನ್ ಮಾಡಿ ಏನಾಗಿದೆಯೋ ವಿಚಾರಿಸುತ್ತೇನೆ "ಎಂದನು.

ಅವಳು " ವಿಚಾರಿಸಿ. ಅವರ ಗತಿಯೇನಾಗಿದೆಯೋ " ಎಂದು ಟೆಲಿ ಫೋನಿನ ಬಳಿ ನಿಂತುಕೊಂಡಳು.

ಮಹಡಿಯ ಮೇಲೆ ಹೊರಗಡೆ ವರಾಂಡದಲ್ಲಿ ಟೆಲಿಫೋನ್ ಇದ್ದಿತು. ನಟರಾಜನು ಡಯಲ್ ಮಾಡಲು ಆಸ್ಪತ್ರೆಯ ನಂಬರು ಎಂಗೇಜ್ ಆಗಿದ್ದಿತು.

ಅವನು ಸ್ವಲ್ಪ ದೂರದಲ್ಲಿ ಕಾಣುತ್ತಿದ್ದ ಮನೆಯನ್ನು ತೋರಿಸಿ " ವಿಮಲಾ, ಅದು ನಿಮ್ಮ ಮನೆಯಲ್ಲವೇ ?" ಎಂದನು.

" ಈಗ ನಮ್ಮದೋ ಅಲ್ಲವೋ ತಿಳಿಯದು. ಅಂತೂ ಒಂದು ಕಾಲ ದಲ್ಲಿ ನಮ್ಮದಾಗಿದ್ದಿತು "

" ಆ ಮನೆಯನ್ನು ಬಿಟ್ಟು ಹೊರಟು ಹೋಗುವಾಗ ನಿಮಗೆ ಬಹಳ ದುಃಖವಾಗಿರ ಬೇಕಲ್ಲವೆ ?"

ಅವನು ನೆನೆಸಿಕೊಂಡಳು. ಅನಂತರ " ದುಃಖವಾಯಿತೆಂದು ಹೇಳ ಲಾರೆ. ಒಂದು ಬಗೆಯ ಹಠದಿಂದ ಬಿಟ್ಟು ಹೋದೆವು. ಎಲ್ಲದಕ್ಕಿಂತಲೂ ಹೆಚ್ಚಾಗಿ ನಾವು ಹಾಗೆ ಮಾಡಲೇ ಬೇಕಾಗಿದ್ದಿತು " ಎಂದಳು.

ಪುನಃ ಡಯಲ್ ಮಾಡಿದನು. ರಿಂಗ್ ಆಗುತ್ತಿತ್ತು. ಕೂಡಲೇ ಯಾರೂ ಬಂದು ಮಾತನಾಡಲಿಲ್ಲ. ಆಗ–" ಮೊನ್ನೆ ವೆಂಕಟರಾಮಯ್ಯ ನವರೊಡನೆ ಆ ಮನೆಯನ್ನೆಲ್ಲಾ ನೋಡಿಕೊಂಡು ಬಂದೆ....ಏನು, ಬೌರಿಂಗ್ ಆಸ್ಪತ್ರೆಯಿಂದಲೇ ?" ಎಂದು ಹೇಳಿ ಎರಡು ನಿಮಿಷಗಳ ಕಾಲ ಮಾತನಾಡಿದನು.

ಮಾತು ಮುಗಿಸುವ ವೇಳೆಗೆ ಇಬ್ಬರ ಮುಖಗಳೂ ಗಾಬರಿಯಿಂದ ಕೂಡಿದ್ದವು.

ನಟರಾಜನು " ನಾನು ಅಲ್ಲಿಗೆ ಹೋಗುವುದರಿಂದ ಆಗುವುದು ಅಷ್ಟ ರಲ್ಲಿಯೇ ಇದೆ. ಆದರೆ ಹೋಗದಿರುವುದು ಚೆನ್ನಾಗಿರುವುದಿಲ್ಲ; ಹೋಗಿ ಬರುತ್ತೇನೆ " ಎಂದನು.

" ಲಲಿತಮ್ಮನವರಿಗೇನು ಪ್ರಾಣಾಪಾಯವಿಲ್ಲವಲ್ಲ "

" ಅವರು ಕೂಡಲೇ ಆಪರೇಷನ್ ಮಾಡಬೇಕೆಂದಿದ್ದಾರಂತೆ. ಅಂದರೆ

ಏನೋ ಸರಿಯಾಗಿಲ್ಲದಿರಬೇಕು. ಎಲ್ಲರೂ ಎಷ್ಟು ಹೊತ್ತಿಗೆ ಬರುತ್ತಾರೆಯೋ ಏನೋ ? ನೀನು ಮನೆಗೆ ಹೋಗುತ್ತೀಯೇನು ? ಹೇಗೆ ಹೋಗುತ್ತೀ ?"

" ಬಸ್ ಸಿಕ್ಕುತ್ತದೆಯೇನೋ ನೋಡುತ್ತೇನೆ. ಇಲ್ಲದಿದ್ದರೆ ರೈಲು ಇದ್ದೇ ಇದೆಯಲ್ಲಾ "

" ಎಲ್ಲಿಯಾದರೂ ಉಂಟೇ? ವೆಂಕಟರಾಮಯ್ಯನವರದು ಮತ್ತೊಂದು ಕಾರಿದೆ. ಅದೇನಾಯಿತೋ ನೋಡೋಣ. ಯಾವುದೂ ಇಲ್ಲದಿದ್ದರೆ ಟ್ಯಾಕ್ಸಿಯನ್ನು ಮಾಡಿ ಕೊಡುತ್ತೇನೆ "

ನಟರಾಜನು ವಿಮಲೆಯನ್ನು ಕರೆದುಕೊಂಡು ಮನೆಯ ಮೆಟ್ಟಿಲುಗಳನ್ನು ಇಳಿಯುತ್ತಿದ್ದಾಗ ಎರಡು ಕಾರುಗಳು ಬಂದುವು. ಆಸ್ಪತ್ರೆಗೆ ಹೋಗಿದ್ದವರೆಲ್ಲರೂ ಕೆಳಗಿಳಿದರು. ಶಕುಂತಲೆಗೆ ಬಹಳ ಪೆಟ್ಟು ಬಿದ್ದಿರಲಿಲ್ಲ. ಆದರೂ ಆಗಿದ್ದ ಸಣ್ಣ ಗಾಯಗಳಿಗೆ ಡ್ರೆಸ್ ಮಾಡಲಾಗಿದ್ದಿತು. ಅವಳನ್ನು ಯಾರೋ ಹಿಡಿದುಕೊಂಡು ಹಜಾರಕ್ಕೆ ಕರೆತಂದರು.

ಸೋಫಾದ ಮೇಲೆ ಮಲಗಿಕೊಂಡ ಶಕುಂತಲೆಯು ಎದುರಿಗೆ ಬಂದ ನಟರಾಜನನ್ನೂ ವಿಮಲೆಯನ್ನೂ ನೋಡಿದಳು. ನಟರಾಜನನ್ನು ಉದ್ದೇಶ ಮಾಡಿ " ಓಹೋ, ನೀವು " ಎಂದು, ವಿಮಲೆಯನ್ನು ಕುರಿತು " ನೀನೆಲ್ಲಿದ್ದೆ, ಅಬ್ಬಾ " ಎಂದಳು.

ಅನಂತರ ಕಣ್ಣು ಮುಚ್ಚಿಕೊಳ್ಳುತ್ತಾ ಡ್ರೈವರ್ ಮುತ್ತುಸ್ವಾಮಿಯನ್ನು ಕರೆದು " ತಲೆ ಕೆಳಕ್ಕೆ ಏನಾದರೂ ತೆಗೆದುಕೊಂಡು ಬಾ " ಎಂದಳು.

ತಂದ ದಿಂಬನ್ನು ಸೋಫಾದ ಮೇಲಿಟ್ಟು ಶಕುಂತಲೆಯನ್ನು ಸರಿಯಾಗಿ ಮಲಗಿಸಿ ನಟರಾಜನು " ನಿಮ್ಮ ತಾಯಿಗೆ ಹೇಗಿದೆ ?" ಎಂದು ಕೇಳಿದನು.

ಅವಳು ಮೆಲ್ಲನೆ " ಹಾಗೇ ಇದೆ " ಎಂದಳು.

ಪ್ರಕಾಶನು " ನಾವೀಗಲೇ ತಿರುಗಿ ಆಸ್ಪತ್ರೆಗೆ ಹೋಗಬೇಕು " ಎಂದನು.

" ಈಗಲೇ ಆಪರೇಷನ್ ಮಾಡುತ್ತಾರಂತೇನು ?"

" ಈಗೇನೂ ಬೇಕಾಗಿಲ್ಲ. ಬೆಳಗಾಗ ನೋಡೋಣ ಎಂದುಬಿಟ್ಟರು "

ಕುಳಿತಿದ್ದ ವಿಮಲೆಯು ಎದ್ದು ಶಕುಂತಲೆಯ ಬಳಿಗೆ ಬಂದು "ನೀನು ಏನಾದರೂ ತೆಗೆದುಕೊಳ್ಳುತ್ತೀಯಾ ? " ಎಂದಳು.

" ಸ್ವಲ್ಪ ಓವಲ್ ಟೀನ್ ತರಲು ಹೇಳು " ಎಂದವಳು ಹೇಳಿದಳು.

ವಿಮಲೆಯು ಒಳಗೆ ಹೋದಳು !

ಪ್ರಕಾಶನೂ ಶಕುಂತಲೆಯೂ ಊಟ ಮಾಡಿಕೊಂಡು ಆಸ್ಪತ್ರೆಗೆ ಹೋಗುವುದೋ ಹಾಗೆಯೇ ಹೋಗುವುದೋ ಎಂದು ಸಣ್ಣ ಚರ್ಚೆಯನ್ನು ಆರಂಭಿಸಿದರು. ಅವರ ತಂದೆ ತಿಳಿಯಾಗಿ ಸಾರೂ ಅನ್ನ ತಿಂದುಕೊಂಡು ಹೋಗೋಣವೆಂದರು. ಯಾರೂ ಅದಕ್ಕೆ ಅಡ್ಡಿ ಹೇಳಲಿಲ್ಲ.

ವಿಮಲೆಯೇ ಓವಲ್ ಟೀನ್ ತಂದು ಕೊಟ್ಟಳು. ಶಕುಂತಲೆಯು ಎದ್ದು ಕುಳಿತು ಸ್ವಲ್ಪ ಸ್ವಲ್ಪವಾಗಿ ಕುಡಿಯ ತೊಡಗಿದಳು.

ನಟರಾಜನು ಶಕುಂತಲೆಯು ಕುಳಿತಿದ್ದ ಸೋಫಾದ ಮೇಲೆಯೆ ಕುಳಿತಿದ್ದವನು " ವಿಮಲೆಯು ಮನೆಗೆ ಹೋಗುತ್ತೇನೆನ್ನುತ್ತಾಳೆ. ಯಾರಾದರೂ ಬಿಟ್ಟು ಬರಬೇಕು " ಎಂದನು.

ಶಕುಂತಲೆ ಎಡಗೈಯಲ್ಲಿ ಲೋಟಾ ಹಿಡಿದು ಓವಲ್ ಟೀನ್ ಕುಡಿಯುತ್ತಿದ್ದವಳು ಬಲಗೈಯನ್ನು ನಟರಾಜನ ಕೈ ಮೇಲೆ ಇಟ್ಟು " ಮೆಲ್ಲನೆ ನೀವು ಇಲ್ಲೇ ಇರಿ " ಎಂದು ಹೇಳಿ ಗಟ್ಟಿಯಾಗಿ, "ನಮ್ಮ ಮುತ್ತುಸ್ವಾಮಿಯು ಬಿಟ್ಟು ಬರುತ್ತಾನೆ" ಎಂದು ಹೇಳಿ, ಅವನನ್ನು ಕರೆದು ಅಪ್ಪಣೆ ಮಾಡಿದಳು.

ವಿಮಲೆಯು ಕಾರಿನಲ್ಲಿ ಕೆಂಗೇರಿ ಮನೆಗೆ ಹೊರಟಳು. ದಾರಿಯಲ್ಲಿ ಅನಾಹುತದ ವಿಷಯವನ್ನೆಲ್ಲಾ ವಿವರ ವಿವರವಾಗಿ ಮುತ್ತುಸ್ವಾಮಿಯು ಹೇಳಿದನು. ಮನೆಯ ಹತ್ತಿರ ಕಾರು ನಿಂತಿತು. ವಿಮಲೆಯು ಕಾರಿನಿಂದ ಇಳಿದು ಮನೆಗೆ ಹೋಗುವ ಮೊದಲು ಸ್ವಲ್ಪ ನಿಂತುಕೊಂಡು ಡ್ರೈವರ್ ಕಡೆಗೆ ನೋಡಿದಳು.

ಅವನು " ತಾಯಿ ! ನಾನು ನಿಮ್ಮ ತಂದೆಯುವರ ಹತ್ತಿರ ಕೆಲಸ ಮಾಡುತ್ತಿದ್ದೆ. ಆಗ ನೀವಿನ್ನೂ ಮಕ್ಕಳು. ದೇವರಿಗೆ ಕಣ್ಣಿಲ್ಲ. ನಿಮ್ಮಂಹವರಿಗೆ ಕಷ್ಟ ಕೊಡುತ್ತಾನೆ '' ಎಂದನು.

ವಿಮಲೆಯು " ಹಾಗೇನು ? ನೀನು ನಮ್ಮ ತಂದೆಯುವರಲ್ಲಿ ಕೆಲಸಕ್ಕಿದ್ದೆಯೋ? ಇತ್ತ ಕಡೆ ಬಂದಾಗ ಬಂದು ನೋಡುತ್ತಿರು" ಎಂದು ಹೇಳಿದಳು.

ಸುಮಾರು ಎಂಟೂವರೆ ಒಂಬತ್ತು ಗಂಟೆಯ ವೇಳೆಗೆ ವಿಮಲೆಯು ಮನೆಗೆ ಬಂದಳು. ಆ ರಾತ್ರಿ ಅವಳು ಬರುತ್ತಾಳೆಂದು ಯಾರೂ ನಿರೀಕ್ಷಿಸಿ ರಲಿಲ್ಲ.

ಮನೆಗೆ ಹೋಗುತ್ತಲೂ " ಯಾಕೆ, ವಿಮಲಾ. ಬಂದುಬಿಟ್ಟೆ " ಎಂದು ಶಂಕರನು ಕೇಳಿದನು.

" ಏನೋ ಸ್ವಲ್ಪ ಮುಜುಗರವಾದಂತಾಯಿತು. ಮೈ ಚೆನ್ನಾಗಿರಲಿಲ್ಲ. ಬಂದು ಬಿಟ್ಟೆ " ಎಂದು ಹೇಳಿದಳು.

ಅನಂತರ ರಹಸ್ಯವಾಗಿ ಅಣ್ಣನೊಂದಿಗೆ ಲಲಿತಮ್ಮನವರಿಗೆ ಆಕ್ಸಿಡೆಂಟಾದ ಕತೆ ಎಲ್ಲವನ್ನೂ ಹೇಳಿದಳು. ಸಾವಿತ್ರಮ್ಮನವರ ವಿನಾ ಉಳಿದವರಿಗೆಲ್ಲಾ ಈ ರಹಸ್ಯ ಗೊತ್ತಾಗಿ ಹೋಯಿತು.

ಊಟವಾದ ಮೇಲೆ ಅಣ್ಣ ತಂಗಿಯರು ಮಾತನಾಡುತ್ತಾ ಕುಳಿತಿದ್ದರು.

ಆಗ ಶಂಕರನು " ನಿನಗೊಂದು ವಿಷಯ ಗೊತ್ತೇ, ವಿಮಲಾ " ಎಂದು ಕೇಳಿದನು.

ವಿಮಲೆಯು ಆಸಕ್ತಿಯಿಂದ ಅವನ ಕಡೆಗೆ ನೋಡಿದಳು.

" ಈ ಮೊದಲೇ ನಟರಾಜನಿಗೊಂದುಬಾರಿ ಮದುವೆಯಾಗಿದ್ದಿತಂತೆ. ಆ ಹೆಂಡತಿಯನ್ನು ಇವನು ಬಿಟ್ಟು ಬಿಟ್ಟಿದ್ದಾನೆ. ಈ ಜನಗಳು ಏಕೆ ಮೇಲಿಂದ ಮೇಲೆ ಮದುವೆಗಳನ್ನು ಮಾಡಿಕೊಳ್ಳುತ್ತಾರೆಯೋ ದೇವರಿಗೇ ಗೊತ್ತು "

" ನಿನಗೆ ಸರಿಯಾಗಿ ಗೊತ್ತೇನಣ್ಣ "

" ಚೆನ್ನಾಯಿತು. ಅವನಿಗೆ ಮದುವೆಯಾಗಿದೆ. ನನ್ನ ಜೊತೆಯಲ್ಲಿ ಏರ್‌ಕ್ರಾಫ್ಟ್‌ನಲ್ಲಿ ಕೆಲಸ ಮಾಡುವವನು ಹೇಳಿದ. ಶಕುಂತಲೆಯ ಮದುವೆಯು ಗೊತ್ತಾದಾಗಲೇ ನನಗೆ ಈ ವಿಷಯ ತಿಳಿಯಿತು. ಅದರಲ್ಲಿ ಏನೂ ಸಂದೇಹವೇ ಇಲ್ಲ "

" ಸರಿ. ನನಗೆ ಈ ವಿಷಯಯುವು ಗೊತ್ತೇ ಇರಲಿಲ್ಲ "

" ಅದು ಅವರ ಮನೆಯವರೆಲ್ಲರಿಗೂ ಗೊತ್ತು. ಮೊದಲೇ ವೆಂಕಟ

ರಾಮಯ್ಯನವರು ಈ ಮದುವೆಗೆ ಒಪ್ಪಲಿಲ್ಲ. 'ಇಂದಲ್ಲ, ನಾಳೀ ಹಳೀ ಹೆಂಡತಿಯಿಂದ ತಂಟಿ ಬರುತ್ತದೆ ಎಂದು ಹೇಳಿದರಂತೆ "

ವಿಮಲೆಯು ಮೌನವಾಗಿ ಕುಳಿತುಬಿಟ್ಟಳು. ನಟರಾಜ ಈ ರೀತಿ ಮಾಡಿದ್ದಾನೆಂಬುದನ್ನು ಒಪ್ಪಿಕೊಳ್ಳಲು ಅವಳ ಮನಸ್ಸು ಹಿಂದೆಗೆಯುತ್ತಿತ್ತು. ಇಲ್ಲವೆನ್ನುವಂತಿರಲಿಲ್ಲ. ಅವಳಿಗೆ ಇವೆಲ್ಲವೂ ಒಂದು ಸ್ವಪ್ನದಂತೆ ಕಂಡಿತು. ಆ ಸ್ವಪ್ನದಲ್ಲಿ ಜೀವನವು ಶೂನ್ಯವಾಗಿಯೂ ಭಯಂಕರವಾಗಿಯೂ ಕಂಡಿತು.

ಯಾವುದೋ ಜ್ಞಾನದಲ್ಲಿದ್ದ ಸಾವಿತ್ರಮ್ಮನವರು "ಲಲಿತಮ್ಮ ವೆಂಕಟರಾಮಯ್ಯನವರ ಮೊದಲನೆಯ ಹೆಂಡತಿ, ಎರಡನೆಯ ಹೆಂಡತಿಯಲ್ಲ. ಅವರಿಗೆ ಒಂದೇ ಬಾರಿ ಮದುವೆಯಾದುದು " ಎಂದರು.

ಶೀಲಳು " ಅಲ್ಲಮ್ಮ. ಅವರ ವಿಷಯವಲ್ಲ. ಶಕುಂತಲೆಗೆ ಮದುವೆಯು ಗೊತ್ತಾಗಿದೆಯಲ್ಲಾ. ಅವಳ ಗಂಡ ಮೊನ್ನೆ ಇಲ್ಲಿ ಬಂದಿರಲಿಲ್ಲವೇ. ಅವರಿಗೆ ಮೊದಲೇ ಒಂದು ಮದುವೆಯಾಗಿದೆಯಂತೆ " ಎಂದಳು.

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನಿದ್ದರು.

ಅನಂತರ ವರದಳು '' ಏನಕ್ಕಾ ! ಈಗ ಲಲಿತಮ್ಮನವರಿಗೆ ಕಾರ್ ಆಕ್ಸಿಡೆಂಟ್‌ನಲ್ಲಿ ಗಾಯವಾಯಿತಲ್ಲ. ಅವರಿಗೆ ಹುಷಾರಾಗುವವರೆವಿಗೆ ಈ ಮದುವೆಯಾಗುವುದು ಹೇಗೆ " ಎಂದಳು.

ಅದಕ್ಕೆ ಸಾವಿತ್ರಮ್ಮನವರು '' ಕಾರ್ ಆಕ್ಸಿಡೆಂಟ್ ಆದಾಗ ಕಾರಿನಲ್ಲಿದ್ದವರು ನಾನು ಮತ್ತು ನಿಮ್ಮಪ್ಪ. ಲಲಿತಮ್ಮನವರಿಲಿಲ್ಲ. ಅವರಿಗೆ ಯಾವ ಗಾಯವೂ ಆಗಲಿಲ್ಲ " ಎಂದರು

ವಿಮಲೆಯು ಮಲಗಿಕೊಂಡಳು. ನಾನವನನ್ನು ನೋಡದಿದ್ದರೆ ಚೆನ್ನಾಗಿದ್ದಿತೆಂದು ಅವಳ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದಿತು. ಆ ಧ್ವನಿಯು ನಿಂತು ಹೋಗಲೆಂದು ಅವಳ ಮನಸ್ಸು ಅಪೇಕ್ಷಿಸುತ್ತಿದ್ದಿತು.

ಮಾರನೆಯ ದಿನ ಲಲಿತಮ್ಮನರಿಗೆ ಆಪರೇಷರ್ ಆಯಿತು. ಅವರು ಬದುಕುತ್ತಾರೆಂದು ನಿರ್ಧರವಾಯಿತು. ಶಕುಂತಲೆ ನಟರಾಜರ ಮದುವೆಯು ಎರಡು ತಿಂಗಳು ಮುಂದಕ್ಕೆ ಹೋಯಿತು. ನಟರಾಜನ ಕಾದಂಬರಿಯೊಂದನ್ನು ಮದರಾಸಿನಲ್ಲಿ ಚಲನ ಚಿತ್ರ ಮಾಡಲು ಆರಂಭಿಸಿಧರಂತೆ.

ಅದರ ಏರ್ಪಾಟುಗಳನ್ನು ನೋಡಲು ಅವನು ಮದರಾಸಿಗೆ ಹೊರಟು ಹೋದನು.

ನಟರಾಜನು ಮದರಾಸಿಗೆ ಹೋದ ವರ್ತಮಾನವನ್ನು ಕೇಳಿ ವಿಮಲೆಯು ತಲೆಯ ಮೇಲಿನ ಹೊರೆಯು ಇಳಿದಂತೆ ನಿದಾನವಾಗಿ ನಿಟ್ಟುಸಿರು ಬಿಟ್ಟಳು.

## ೧೩

ಆ ದಿನಗಳು ಸ್ವಲ್ಪ ಚಳಿ ಚಳಿಯಾಗಿದ್ದವು.

ವೆಂಕಟರಾಯನ ತಾಯಿಗೆ ಮೈ ಹುಷಾರಿರಲಿಲ್ಲ. ಅವರು ಮರಣ ಶಯ್ಯೆಯಲ್ಲಿದ್ದರು. ಅದಕ್ಕಾಗಿ ಅವನು ಚಿಕ್ಕಮಗಳೂರಿಗೆ ಹೋಗಿದ್ದನು.

ಅವನು ಅಲ್ಲಿಲ್ಲದ್ದರೂ ಎರಡು ದಿನಗಳಿಗೊಮ್ಮೆ ಅವನ ಕಾಗದಗಳು ಬರುತ್ತಲೇ ಇದ್ದವು. ಅವೆಲ್ಲಾ ಪ್ರಣಯ ಪತ್ರಗಳು. ಪ್ರತಿಯೊಂದೂ ವಿರಹ ವೇದನೆಯಿಂದ ಕೂಡಿದ ಕಾಗದಗಳು. "ವಿಮಲಾ! ನಿನ್ನನ್ನು ಬಿಟ್ಟು ಒಂದು ಗಳಿಗೆಯನ್ನು ಕಳೆಯುವುದು ಸಹ ವಿಪರೀತ ಕಷ್ಟವಾಗಿದೆ. ಪ್ರತಿ ಕ್ಷಣವೂ ನಿನ್ನ ನೆನಪು ಬರುತ್ತದೆ. ಪ್ರಿಯೆಯನ್ನು ನೆನೆಸಿಕೊಳ್ಳುವುದು ಸುಖಕರವೆಂದು ಕವಿಗಳು ಬರೆದುದ್ದನ್ನು ಓದಿದ್ದೇನೆ. ಅವೆಲ್ಲವೂ ಸುಳ್ಳು. ಪ್ರಿಯೆಯು ನೆನೆಪಿಗೆ ಬಂದಾಗ ಹೃದಯದಲ್ಲಾಗುವ ನೋವನ್ನು ವಿರಹಿಯು ಮಾತ್ರ ಬಲ್ಲನು. ಇನ್ನು ಮುಂದೆ ಒಂದು ನಿಮಿಷವೂ ನಿನ್ನನ್ನು ಬಿಟ್ಟು ಇರಬಾರದೆಂದು ನಿರ್ಧರ ಮಾಡಿದ್ದೇನೆ. ಮರಣವು ಅಗಲಿಸುವವರೆವಿಗೆ ನಾನು ನಿನ್ನೊಡನೆಯೇ ಇರುತ್ತೇನೆ. ನಿನ್ನ ಅಗಲಿಕೆಯಿಂದ ನನ್ನ ಎದೆಯಲ್ಲಿ ಶಲ್ಯವನ್ನು ಇರಿದಂತೆ ಆಗುತ್ತಿದೆ" ಎಂದೆಲ್ಲಾ ಆ ಕಾಗದಗಳಲ್ಲಿ ಇರುತ್ತಿದ್ದುವು.

ಆ ಕಾಗದಗಳು ಪ್ರಿಯೆಗೆ ಪ್ರಿಯನಿಂದ ಚುಂಬನವನ್ನು ಕೊಂಡು ಬರುವ ಅಂಚೆಗಳಾಗಿಯೂ ಇದ್ದವು.

ವಿಮಲೆಯು ಆ ಕಾಗದಗಳನ್ನು ಓದುತ್ತಿದ್ದಳು. ಸಮಯೋಚಿತವಾಗಿ ಅವುಗಳಿಗೆ ಉತ್ತರಗಳನ್ನು ಬರೆಯುತ್ತಿದ್ದಳು. ದಿನಗಳು ಕಳೆದಂಲ್ಲಾ ಅವನು ಬರುವ ಸಮಯವು ಸಮೀಪಿಸುತ್ತಿದೆ ಎಂದು ಅವಳ ಹೃದ

ಯವು ಕಂಪಿಸುತ್ತಿದ್ದಿತು. ಅದೇಕೆ ಹಾಗಾಗುತ್ತದೆಂಬುದನ್ನು ಅರಿಯದೇ ಅವಳು ತವಕ ಪಡುತ್ತಿದ್ದಳು.

ಇಂತಹ ಪ್ರಣಯಿಯನ್ನು ಪಡೆದಿರುವುದು ಹೆಮ್ಮೆಯಲ್ಲವೇ–ಎಂದು ಸಹ ಅವಳಿಗೆ ಒಮ್ಮೊಮ್ಮೆ ತೋರುತ್ತಿದ್ದಿತು.

ನಟರಾಜನಿಂದಲೂ ಅವಳಿಗೊಂದು ಕಾಗದವು ಬಂದಿದ್ದಿತು. ಅವನ ಕಾದಂಬರಿಯು ಚಿತ್ರವಾಗುವ ಏರ್ಪಾಟುಗಳು ಭರದಿಂದ ನಡೆಯುತ್ತಿವೆ ಯಂತೆ. ಅವನಾದಷ್ಟು ಬೇಗ ಬೆಂಗಳೂರಿಗೆ ಬರುತ್ತಾನೆಯಂತೆ. ಇನ್ನೂ ಅವನು ವಿಮಲೆಯನ್ನು ಪ್ರೀತಿಸುತ್ತಿರುವುದಾಗಿ ಬರೆದಿದ್ದನು. ತಾನು ಹೇಳದೇ ಕೇಳದೇ ಮದರಾಸಿಗೆ ಬಂದುಬಿಟ್ಟಿದ್ದಕ್ಕಾಗಿಯೂ, ಬೇಗನೇ ಕಾಗ ದವನ್ನು ಬರೆಯದುದಕ್ಕಾಗಿಯೂ ಕ್ಷಮಾಯಾಚನೆ ಮಾಡಿದ್ದನು.

ಲಲಿತಮ್ಮನವರಿಗೆ ಆಕ್ಸಿಡೆಂಟ್ ಆದ ಎರಡು ವಾರಗಳ ನಂತರ ಒಂದು ದಿನ ಭಾನುವಾರ ಸಾಯಂಕಾಲ ಶಾರದಮ್ಮನವರು ಕೆಂಗೇರಿಯ ಮನೆಗೆ ಬಂದಿದ್ದರು. ಹಿಂದೆ ಮನೆಯಲ್ಲಿ ಕೆಲಸಮಾಡುತ್ತಿದ್ದರಿಂದ ಅವ ರನ್ನು ಮನೆಯವರೆಲ್ಲರೂ ವಿಶ್ವಾಸದಿಂದ ಬರ ಮಾಡಿಕೊಂಡರು. ಇತ್ತೀ ಚೆಗೆ ಆಗಾಗ ಅವರು ಬರುತ್ತಿದ್ದರು. ಅವರಿಗೆಸ್ವಲ್ಪ ಮಾತನಾಡುವ ಚಪಲ. ಅದನ್ನು ತೀರಿಸಿಕೊಂಡು ಹೋಗುತ್ತಿದ್ದರು.

ಆಕೆ ಬಂದಾಗ ವಿಮಲೆ ಅಡಿಗೆ ಮಾಡುತ್ತಿದ್ದಳು. ಆಕೆ ಅಡಿಗೆಯ ಮನೆಗೇ ಹೋಗಿ ಕುಳಿತುಕೊಂಡರು.

" ನಾನೇನಾದರೂ ಮಾಡಿಕೊಡಲಿ ?" ಎಂದು ಕೇಳಿದರು.

ವಿಮಲೆಯು ಅಡಿಗೆ ಎಲ್ಲವೂ ಮುಗಿಯುತ್ತಾ ಬಂದಿದೆ ಎಂದೂ ಏನೂ ಬೇಡವೆಂದೂ ಹೇಳಿ, ಆಕೆಗಾಗಿ ಕಾಫಿಗೆ ಸ್ವಲ್ಪ ನೀರಿಟ್ಟಳು.

ಶಾರದಮ್ಮ " ಅಯ್ಯೋ ! ನನಗೇಕೆ ಕಾಫಿ, ಏನೂಬೇಡ. ಹೀಗೆಲ್ಲಾ ಮಾಡಿದರೆ ಇಲ್ಲಿಗೆ ಬರಲು ಸಂಕೋಚವಾಗುತ್ತದೆ " ಎಂದಳು.

ವಿಮಲೆಯು " ಅದಕ್ಕೆಲ್ಲಾ ಸಂಕೋಚ ಪಟ್ಟರಾಗುತ್ತದೆಯೇ ?

ನಮಗೆ ಈಗ ಬಡತನವಾದರೂ ಬಂದವರಿಗೆ ಕಾಫಿ ಕೊಡುವುದಕ್ಕೂ ಇಲ್ಲ ವೆಂದುಕೊಂಡಿರಾ ?" ಎಂದಳು.

ಆಕೆ ಆ ವಿಷಯವಾಗಿ ಮುಂದೆ ಮಾತನಾಡಲಿಲ್ಲ.

" ಲಲಿತಮ್ಮನವರಿಗೆಹೇಗಿದೆಯಮ್ಮ! ಶಕುಂತಲೆಯ ಮದುವೆಮುಂದೆ ಹೋದಂತೆ ಇವೆ " ಎಂದಳು.

ವಿಮಲೆಯು " ಪ್ರಾಣಭಯವಿಲ್ಲ. ನಿಶ್ಯಕ್ತಿಯು ಹಾಗೆ ಇದೆಯಂತೆ. ಈಚೆಗೆ ನಾನು ಅತ್ತ ಕಡೆಗೆ ಹೋಗಲಿಲ್ಲ " ಎಂದಳು.

" ಶಕುಂತಲೆಗೂ ಏನೋ ಗಾಯಗಳಾದುವಂತೆ ಮದುವೆ ನಿಂತು ಹೋದುದಕ್ಕೆ ಅದೇ ಮುಖ್ಯವಾದ ಕಾರಣವಂತೆ "

" ಅಂತಹದೇನು ಇಲ್ಲ. ಅವಳಿಗೂ ಪೆಟ್ಟಾಯಿತು. ಬಹಳ ಸಣ್ಣ ಪೆಟ್ಟುಗಳು. ನಾನು ಆ ದಿನ ಅಲ್ಲಿಯೇ ಇದ್ದೆ "

ಶಾರದಮ್ಮ ಆಸಕ್ತಿಯನ್ನು ಹೆಚ್ಚಿಸುವಂತೆ " ಗೊತ್ತಾಗಿದ್ದ ಗಂಡು ಕಪ್ಪಂತೆ. ಚೆನ್ನಾಗಿಲ್ಲವಂತೆ. ಇದರ ಮೇಲೆ ಅವನ ನಡತೆಯೇ ಸರಿ ಇಲ್ಲ ವಂತೆ" ಎಂದಳು.

ಅಷ್ಟು ಹೊತ್ತಿಗೆ ಶಂಕರನು ಅಡಿಗೆಯ ಮನೆಗೆ ಬಂದನು. ಆ ಮಾತನ್ನು ಶಾರದಮ್ಮ ಮೆಲ್ಲನೆ ಹೇಳುತ್ತಿದ್ದರೂ ಅದು ಅವನ ಕಿವಿಗೆ ಬಿದ್ದಿತು.

ಅವನು " ನಟರಾಜನೇನು ಹಾಗಿಲ್ಲ. ನಾನು ಅವನನ್ನು ನೋಡಿ ದ್ದೇನೆ. ಅಂತಹ ಗಂಡು ಶಕುಂತಲೆಗೆ ಸಿಕ್ಕಿದ್ದು ಅವಳ ಪುಣ್ಯ. ಅವರಪ್ಪ ನಿಗೆ ಸ್ವಲ್ಪ ಹಣವಿದೆ ಎಂದು ಜಂಭ. ಇಲ್ಲದಿದ್ದರೆ ಅವಳನ್ನೂ ನನ್ನನ್ನೂ ಯಾರು ಕೇಳುತ್ತಿದ್ದರು ?"ಎಂದನು.

ಶಂಕರನಿಗೆ ಬಡತನವು ಬಂದ ನಂತರ ಐಶ್ವರ್ಯವಂತರ ಮೇಲೆ ಸ್ವಾಭಾವಿಕವಾದ ಅಸೂಯೆಯುಂಟಾಗಿದ್ದಿತು !

ಶಾರದಮ್ಮ ಅವನ ಮಾತಿಗೆ ತಾಳ ಹಾಕುತ್ತಾ " ಹೌದು. ನಾನೂ ಕೇಳಿದೆ. ಅವರಿಗೆ ಬಹಳ ಜಂಭವಂತೆ. ಈಚೆಗೆ ಅವಳು ಕುಣಿಯುವುದನ್ನು ಕಲಿತ ಮೇಲಂತೂ ತಾನೇ ರಂಭೆ ಊರ್ವಶಿ ಎಂದುಕೊಂಡಿದ್ದಾಳೆ" ಎಂದಳು.

ವಿಮಲೆಗೆ ಅಣ್ಣನ ಮಾತೂ ಶಾರದಮ್ಮನ ಮಾತೂ ಹಿಡಿಸಲಿಲ್ಲ.

ಅವಳು ಮಾತು ತಿರುಗಿಸಿ " ಈಗ ನೀವೆಲ್ಲಿ ಕೆಲಸ ಮಾಡುತ್ತಿದ್ದೀರಿ ? ಶಾರದಮ್ಮ " ಎಂದಳು.

" ಅದೇನಮ್ಮ. ನಿಮ್ಮ ಮನೆ ಬಿಟ್ಟ ನಂತರ ಶಾಮಣ್ಣನವರ ಮನೆ ಸೇರಿ ಕೊಂಡವಳು ಅಲ್ಲಿಯೇ ಇದ್ದೇನೆ. ಹಾಳು ಹೊಟ್ಟೆ ಹೊರೆಯಲು ಏನಾದರೂ ಮಾಡಬೇಕಲ್ಲ. ಕಷ್ಟವು ಬಂದುದು ನಿಮಗಲ್ಲ. ನನ್ನಂತಹ ಪಾಪಿಗಳಿಗೆ "

ಶಾರದಮ್ಮನ ಕಣ್ಣಲ್ಲಿ ನೀರು ಬಂದಿತೋ ಇಲ್ಲವೋ ಗೊತ್ತಿಲ್ಲ. ಆಕೆ ಸೆರಗಿನಿಂದ ಕಣ್ಣೊರಸಿಕೊಂಡಳು.

ಶಾಮಣ್ಣನವರ ಮನೆಯ ವಿಷಯವೆಲ್ಲವೂ ವಿಮಲೆಗೆ ಗೊತ್ತಿತ್ತು. ಅವಳು ತಿಳಿದುಕೊಳ್ಳ ಬೇಕಾದುದೇನೂ ಇರಲಿಲ್ಲ.

ಆದರೂ " ಅವರೆಲ್ಲಾ ಹೇಗಿದ್ದಾರೆ ?" ಎಂದು ಕೇಳಿದಳು.

" ಚೆನ್ನಾಗಿದ್ದಾರಮ್ಮ. ಉಪ್ಪು ತಿನ್ನುತ್ತಿರುವ ಮನೆ. ಎರಡು ಮಾತನಾಡಬಾರದು, ಯಾವುದೂ ಚೆನ್ನಾಗಿಲ್ಲ "

" ಏನು ಸಮಾಚಾರ ?"

" ಅಂತಹದೇನೂ ಇಲ್ಲಮ್ಮಾ. ಹಣವಿದೆಯೇ ಹೊರತು ಯಾವುದೂ ಫಲವಿಲ್ಲ. ಮುದುಕನ ಬಳಿ ಹಣ ಕೊಳೆಯುತ್ತಿದೆ. ಪುಣ್ಯಕ್ಕಿಲ್ಲ, ಪುರುಷಾರ್ಥಕ್ಕಿಲ್ಲ. ಜೀಣ ಎಂದರೆ ಜೀಣ. ಮನೆಯ ಯಜಮಾನಿ ಸದಾ ಹಾಸಿಗೆ ಹಿಡಿದೇ ಇರುತ್ತಾಳೆ. ರೋಗದ ಮುದ್ದೆ. ಮಗಳು ನಾಗವೇಣಿಯೋ, ಅವಳ ವಿಷಯ ಹೇಳತೀರದು, ಗಯ್ಯಾಳಿ. ಹೀಗಿದ್ದರೆ ಎಂತಹ ಸಂಸಾರವಮ್ಮಾ "

ಶಂಕರನು " ವೆಂಕಟರಾಯ ಸೋದರ ಮಾವನ ಬಳಿಗೆ ಬರುತ್ತಿರುತ್ತಾನೋ ?" ಎಂದು ಕೇಳಿದನು.

ವಿಮಲೆಯು ಆಸಕ್ತಿಯನ್ನು ತೋರಿಸಿ ಕೊಳ್ಳದಿದ್ದರೂ ಆಸಕ್ತಿಯಿಂದ ಕೇಳ ತೊಡಗಿದಳು.

" ಬರುತ್ತಿರುತ್ತಾರೆ. ಅವರೇನೋ ವ್ಯಾಪಾರ ಮಾಡುತ್ತಿದ್ದಾರಂತೆ. ಆಗಾಗ ಬಂದು ಮಾವನ ಬಳಿ ಹಣ ತೆಗೆದುಕೊಂಡು ಹೋಗುತ್ತಿದ್ದಾರೆ. ಸೋದರಳಿಯನ ಬಳಿ ಸಹ ಬಡ್ಡಿ ತೆಗೆದುಕೊಳ್ಳುತ್ತಾನೆ, ಮುದುಕ. ನಾನು

ಹೇಳಿದೆನೆಂದು ಎಲ್ಲಿಯೂ ಹೇಳಬೇಡಿ. ನನಗೇಕೆ ಇಲ್ಲದ ಕೆಟ್ಟ ಹೆಸರು "

" ನಮಗೇಕೆ ಶಾರದಮ್ಮನವರೇ ! ನಾವೇಕೆ ಹೇಳುವುದಕ್ಕೆ ಹೋಗುತ್ತೇವೆ. ಹತ್ತು ಮೈಲಿ ದೂರದಲ್ಲಿರುವವರು. ಅಷ್ಟಕ್ಕೂ ನಾವು ಬಡವರಾದ ಮೇಲೆ ಇವರುಗಳೆಲ್ಲರೂ ನಮ್ಮನ್ನು ಲಕ್ಷ್ಯವೇ ಮಾಡುವುದಿಲ್ಲ "

" ಲಕ್ಷ್ಯ ಮಾಡದಿದ್ದರೆ ನಿಮಗೇನು ನಷ್ಟ, ಬಿಡಿ. ಹಣವಿದ್ದರಾಯಿತೆ, ಗುಣವಿರಬೇಕು. ವೆಂಕಟರಾಯರು ಚೆನ್ನಾಗಿ ಸಂಪಾದನೆ ಮಾಡುತ್ತಾರೆ. ಅವರಿಗೆ ನಾಗವೇಣಿಯನ್ನು ಕೊಡಬೇಕೆಂದು ಅವರ ಇಷ್ಟ "

ವಿಮಲೆಯು " ಸೋದರಳಿಯನಿಗೆ ಕೊಟ್ಟರೂ ಕೊಡಬಹುದು. ಮದುವೆಯೇನು ಗೊತ್ತಾಗಿ ಹೋದಂತೆಯೋ ?" ಎಂದಳು.

" ಇಲ್ಲಮ್ಮ. ಸ್ವಲ್ಪ ತಕರಾರಾಗಿರುವಂತೆ ಇದೆ. ವೆಂಕಟರಾಯರು ಒಪ್ಪಲಿಲ್ಲವೆಂದು ಕಂಡು ಬರುತ್ತದೆ. ಹುಡುಗಿ ಅಷ್ಟಕ್ಕೂ ಚೆನ್ನಾಗಿಲ್ಲ " ಎಂದು ಶಾರದಮ್ಮನು ನೆಟಿಗೆ ಮುರಿದಳು.

ಹುಡುಗಿಯನ್ನು ಒಪ್ಪದೇ ಇದ್ದರೆ–ಶಾಮಣ್ಣನವರು ಸುಮ್ಮನಿದ್ದರೇ ?"

" ಸುಮ್ಮನಿರುತ್ತಾರೆಯೇ ! ಮೊನ್ನೆ ಯಜಮಾನಿಯೊಡನೆ " ನಿಮ್ಮಣ್ಣನ ಮಗನಿಗೆ ಹೇಳಿ ಬಿಡು. ಅವನು ನಾಗವೇಣಿಯನ್ನು ಮದುವೆಯಾದರೆ ಸರಿ. ಇಲ್ಲದಿದ್ದರೆ ಚಿಪ್ಪಿತ್ತಿಕೊಂಡು ಅಲೆಯ ಬೇಕಾಗುತ್ತದೆ " ಎಂದರು. ಆಕೆಗೂ ಅಷ್ಟೇನಮ್ಮ. ಬೇಕಾದಷ್ಟು ಹಣವಿದೆ. ಅದೆಲ್ಲಾ ತವರುಮನೆಗೆ ಸೇರಬೇಕೆಂದು ಅವರ ಇಷ್ಟ "

" ಅಷ್ಟೊಂದು ಹಣ ಸಿಕ್ಕುವಾಗಲೂ ಅವರೇಕೆ ಮದುವೆಗೆ ಒಪ್ಪಲಿಲ್ಲ ?" ಎಂದು ವಿಮಲೆಯು ಕೇಳಿದಳು.

" ಅವರ ಮನಸ್ಸಿನಲ್ಲಿರುವುದನ್ನು ನಾನು ಹೇಗೆ ಹೇಳಲಿ ? ಮತ್ತಾರನ್ನೋ ಅವರು ಒಪ್ಪಿರುವಂತಿದೆ "

ಶಂಕರನು ಮಾತನಾಡಲಿಲ್ಲ. ಅಷ್ಟೊಂದು ಹಣವಿದ್ದರೂ ತಳ್ಳಿ, ತನಗೆ ಬೇಕಾದವರನ್ನು ಮದುವೆಯಾಗುತ್ತೇನೆಂದು ಕೊಂಡಿರುವ ಗಂಡಸಿನ ನಿರ್ಧಾರವನ್ನು ಅವನು ಮನಸ್ಸಿನಲ್ಲಿಯೇ ಶ್ಲಾಘಿಸಿದನು.

ಸುಮಾರು ಏಳು ಏಳೂವರೆಯಾಗಿದ್ದಿತು.

ವಿಮಲೆಯು ಶಾರದಮ್ಮನವರನ್ನು " ಮನೆಯಲ್ಲಿ ಏನು ಮಾಡಿಬಿಟ್ಟು ಬಂದಿದ್ದೀರಿ ?" ಎಂದಳು.

" ಸಾಯಂಕಾಲ ತಿಂಡೀ ಮಾಡಿದ್ದೆ. ಶಾಮಣ್ಣನವರು ಊಟ ಮಾಡುವುದಿಲ್ಲವೆಂದರು. ಯಜಮಾನಿ ರಾತ್ರಿ ಊಟ ಮಾಡುವುದಿಲ್ಲ. ಮಗಳು ಸಿನಿಮಾಗೆ ಹೋಗಿದ್ದಾಳೆ. ಜೊತೆಯಲ್ಲಿ ಹೋಗಿರುವ ಸ್ನೇಹಿತಳ ಮನೆಯಲ್ಲಿಯೇ ಊಟ ಮಾಡುತ್ತಾಳೆ. ಹೀಗೆ ಪುರಸತ್ತು ಸಿಕ್ಕಿತು. ಇಲ್ಲ ದಿದ್ದರೆ ನನಗೆ ಬಿಡುವಾಗುತ್ತದೇನಮ್ಮ. ಸ್ವಲ್ಪ ಬಿಡುವು ಸಿಕ್ಕಿತು. ನಿಮ್ಮ ನ್ನೆಲ್ಲಾ ನೋಡಿ ಬಹಳ ದಿನಗಳಾಯಿತಲ್ಲ ಎಂದು ಬಂದೆ "

" ಸರಿ. ಇಲ್ಲಿಯೇ ಊಟ ಮಾಡಿ ಮಲಗಿ ಬಿಡಿ. ನಾಳೆಯ ದಿನ ಬೆಳಗಾಗ ಅಷ್ಟು ಹೊತ್ತಿಗೇ ಹೋಗುನಿರಂತೆ"

ಶಾರದಮ್ಮ ಅರ್ಧಂಬರ್ಧ ಒಪ್ಪಿದವಳಂತೆ " ಊಟಕ್ಕೇನು ಹೇಳಿ " ಎಂದಳು.

ಶಂಕರನು ಹಜಾರದಲ್ಲಿ ಹೋಗಿ ಕುಳಿತುಕೊಂಡು ಸಿಗರೇಟು ಹಚ್ಚಿದನು.

ಶಾರದಮ್ಮನು ಅವನು ಹೋದ ನಂತರ ಮೆಲ್ಲನೆ ವಿಮಲೆಯ ಕಿವಿ ಯಲ್ಲಿ ಗುಟ್ಟಾಗಿ " ಒಂದು ಗುಟ್ಟಿನ ವಿಷಯವಿದೆ. ನಿಮಗೆ ತಿಳಿದಿದ್ದರೆ ಒಳ್ಳೆಯದು. ನೀವು ಯಾರ ಬಳಿಯಲ್ಲಿಯೂ ಹೇಳದಿದ್ದರೆ ಹೇಳುತ್ತೇನೆ " ಎಂದಳು.

ವಿಮಲೆಯು ಗುಟ್ಟಾಗಿಡುವುದಾಗಿ ಹೇಳಿದಳು.

" ವೆಂಕಟರಾಯರು ಇಲ್ಲಿಗೆ ಹೆಚ್ಚಾಗಿ ಬರುತ್ತಾರೆಯಂತೆ. ಅವರು ನಿಮ್ಮನ್ನು ಮದುವೆಯಾಗ ಬೇಕೆಂದಿದ್ದಾರೆ ಎಂದು ಶಾಮಣ್ಣನವರ ಮನೆ ಯಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಅತ ಚೆನ್ನಾಗಿದ್ದಾರೆ. ಕೈತುಂಬಾ ಸಂಪಾದನೆ ಮಾಡುತ್ತಾರೆ. ನನಗೂ ಸಂತೋಷ. ಅದೇನು ನಿಜವೋ ಸುಳ್ಳೋ ಎಂದು ಕೇಳಿಕೊಂಡು ಹೋಗೋಣವೆಂದೇ ನಾನು ಬಂದದ್ದು "

ಗಳಿಗೆಯ ಹೊತ್ತು ಅವಾಕ್ಕಾಗಿ ವಿಮಲೆಯು " ಇಲ್ಲಿಗವರು ಬರು ತ್ತಾರೆ. ಆದರೆ ನೀವು ಹೇಳುವುದೊಂದೂ ನನಗೆ ತಿಳಿಯದು. ಅವರಿಗೂ

ಶಂಕರನಿಗೂ ಸ್ನೇಹ. ಆಗಾಗ ಬಂದು ಅವನೊಂದಿಗೆ ಮಾತನಾಡಿಕೊಂಡು ಹೋಗುತ್ತಾರೆ " ಎಂದಳು.

ಹೊರಗಡೆ ಕುಳಿತಿದ್ದ ಶಂಕರನು ಒಳಗಿನ ಸಂಭಾಷಣೆಯನ್ನು ಕೇಳಿ ನಕ್ಕನು.

ವಾಸುವು ಕೆಮ್ಮುತ್ತಾ ಒಳಗೆ ಬಂದನು.' ಅಕ್ಕನನ್ನು ಕೇಳಿ ಸ್ವಲ್ಪ ಸಕ್ಕರೆಯನ್ನು ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡು ಹೋದನು.

ಶಾರದಮ್ಮನು " ಏನಮ್ಮ, ಮಗುವಿಗೆ ಕೆಮ್ಮಿರುವಂತಿದೆ. ನೆಲ್ಲಿ ಕಾಯಿಯ ಕಾಲ. ಸ್ವಲ್ಪ ಹುಷಾರಾಗಿ ನೋಡಿಕೊಳ್ಳಬೇಕು " ಎಂದಳು.

" ಇಲ್ಲ. ಬೆಳಗಿನಿಂದಲೂ ಕೆಮ್ಮಲಿಲ್ಲ ಅಡಿಗೆಯ ಮನೆಯ ಘಾಟಿ ನಿಂದ ಕೆಮ್ಮು ಬಂದಿರಬೇಕು, ಅಷ್ಟೇ. ."

" ಆದರೂ ಹುಷಾರಾಗಿರಬೇಕು, ವಿಮಲಮ್ಮ! ಮೊನ್ನೆ ನನ್ನ ತಮ್ಮನ ಮನೆಗೆ ಹೋಗಿದ್ದೆ. ಈಗವನು ಸ್ಕೂಲು ಮಾಸ್ಟರಾಗಿ ಇದೇ ಊರಿನಲ್ಲಿ ಇದ್ದಾನೆ. ಅವನ ಮಗುವಿಗೆ ನಾಯಿಕೆಮ್ಮು ಬಂದು ಅದರ ಗೋಳು ಹೇಳತೀರದು "

ಇವರಿಲ್ಲಿ ಮಾತನಾಡುತ್ತಾ ಕುಳಿತಿರುವಂತೆ ಹೊರಗಡೆ " ಏನು, ಶಂಕರ್, ಚೆನ್ನಾಗಿದ್ದೀರಾ ? ಎಂದು ಕೇಳಿದ ಮಾತು ಕೇಳಿಸಿತು.

ಕೂಡಲೇ ಮಾತನಾಡಿದವರಾರೆಂದು ವಿಮಲೆಗೆ ಗೊತ್ತಾಯಿತು. ವೆಂಕಟರಾಯನು ಬಂದಿದ್ದನು.

ಶಾರದಮ್ಮ ತಂಗಿನೋಡಿ, ವೆಂಕಟರಾಯನನ್ನು ಗುರ್ತಿಸಿ " ವಿಮ ಲಮ್ಮ! ಬಸ್ಸಿಗೆ ಹೊತ್ತಾಗುತ್ತದೆ. ನಾನಿನ್ನು ಹೋಗುತ್ತೇನೆ. ಪುನಃ ಯಾವಾಗಲಾದರೂ ಬರುತ್ತೇನೆ " ಎಂದಳು.

ವಿಮಲೆ " ಅವರು ಬಂದರೇನಂತೆ, ಶಾರದಮ್ಮ, ಅವರ ಪಾಡಿಗೆ ಅವರಿರುತ್ತಾರೆ. ನಿಮಗೇನು ಅಡ್ಡಿ ?" ಎಂದಳು

ಶಾರದಮ್ಮನು " ಇಲ್ಲಮ್ಮ, ನಿಮಗಿನ್ನೂ ಸಣ್ಣ ವಯಸ್ಸು. ತಿಳಿಯು ವುದಿಲ್ಲ. ನಾನು ಇನ್ನೊಂದು ದಿನ ಬರುತ್ತೇನೆ. ನೀವು ಸುಮ್ಮನಿರಿ" ಎಂದು ಹೇಳಿ ಹಿಂದಿನ ಬಾಗಿಲಿನಿಂದ ಹೊರಟು ಹೋದಳು.

ವೆಂಕಟರಾಯನು ತನ್ನ ತಾಯಿಗೆ ವಿಪರೀತ ಖಾಯಿಲೆಯಾ

ಗಿತ್ತೆಂದೂ ಆಕೆ ಸತ್ತು ಹೋಗುತ್ತಾರೆಂದೇ ಭಾವಿಸಲಾಗಿದ್ದಿತೆಂದೂ ದೇವರ ದಯದಿಂದ ಬದುಕಿಕೊಂಡರೆಂದೂ ಹೇಳಿದನು. ಎಲ್ಲರೂ ಅದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು.

ವಿಮಲೆಯು " ಆಕ್ಸಿಡೆಂಟ್ ಆದ ದಿನ ನಾನೂ ಅಲ್ಲಿಯೇ ಇದ್ದೆ. ಆ ದಿನದಿಂದ ಅವರ ವಿಷಯವೇ ಗೊತ್ತಾಗಲಿಲ್ಲ. ಹೋಗಿ ಬರೋಣವೆಂದರೆ ಸುಮ್ಮನಾಯಿತೆ ? ವಿಪರೀತ ದೂರ " ಎಂದು ಹೇಳಿದಳು.

ವೆಂಕಟರಾಯನು " ಈ ದಿನ ತಾನೇ ನಾನೂ ಬಂದೆ. ಇನ್ನೂ ಅವರ ಮನೆಗೆ ಹೋಗಿಲ್ಲ ಬಂದ ನಂತರ ಹೋಗಿ ಬರದಿದ್ದರೆ ಚೆನ್ನಾಗಿರುವುದಿಲ್ಲ. ಬನ್ನಿ. ನೀವೂ ನೋಡಿಕೊಂಡು ಬರುವಿರಂತೆ " ಎಂದನು.

ವಿಮಲೆಯು " ಈಗ ಬೇಡ. ಇನ್ನೊಂದು ದಿನವಾಗಲಿ. ಈಗ ಪುನಃ ಬರುವುದು ತೊಂದರೆಯಾಗುತ್ತದೆ " ಎಂದಳು.

" ಏನೂ ಇಲ್ಲ. ನಾನು ತಾನೇ ತಂದು ಬಿಡುವವನು. ಏಳಿ, ಹೋಗೋಣ "

ವಿಮಲೆಯು ಮಾತನಾಡಲಿಲ್ಲ.

ವೆಂಕಟರಾಯನು " ಶಂಕರ್ ಏಳಿ, ಹೋಗಿಬರೋಣ. ಒಂದು ಡ್ರೈವ್ ಆದಂತೆಯೂ ಆಗುತ್ತದೆ. ಇಲ್ಲಿ ಕುಳಿತು ಮಾಡುವುದೇನು ?" ಎಂದನು.

ಶಂಕರನಿಗೂ ಹೋಗಿ ಬರೋಣವೆಂದೆನಿಸಿತು. ಬರುತ್ತೇನೆಂದು ಹೇಳುವುದರಲ್ಲಿ ಒಂದು ಆಲೋಚನೆಯು ಬಂದಿತು. ಶಾರದಮ್ಮ ಹೇಳಿದ ಕಡೆಯ ಮಾತು ಅವನ ಮನಸ್ಸಿನಲ್ಲಿ ಸುಳಿಯಿತು. " ಇವರು ಏನಾದರೂ ಮಾತನಾಡಬೇಕಾಗಿದೆಯೋ ಏನೋ, ನಾನೇಕೆ ಹೋಗಲಿ " ಎಂದುಕೊಂಡನು.

" ನಾನು ಈಗ ಎಲ್ಲಿಗೂ ಬರುವುದಿಲ್ಲ. ವಿಮಲೆಯು ಶಕುಂತಲೆಯು ಗೆಳತಿ. ಅವಳು ಹೋಗಿ ಸ್ನೇಹಿತಳನ್ನೂ ಸ್ನೇಹಿತಳ ತಾಯಿಯನ್ನೂ ನೋಡಿಕೊಂಡು ಬರುವುದು ಸರಿ. ಅವಳನ್ನು ಕರೆದುಕೊಂಡು ಹೋಗಿ " ಎಂದನು.

" ನಿಮ್ಮ ಅಣ್ಣತಂಗಿಯರ ಜಗಳ ಮುಗಿಯುವಂತೇ ಇಲ್ಲವಲ್ಲ. ನಾನೇನು ಹೋಗಬೇಕೊ, ಇಲ್ಲವೋ ?"

ಶಂಕರನು " ಹೋಗಿ ಬಾ, ವಿಮಲಾ. ಲಲಿತಮ್ಮನವರ ಯೋಗಕ್ಷೇಮವೂ ತಿಳಿಯುತ್ತದೆ " ಎಂದನು.

ವಿಮಲೆಯು ಹೊರಟಳು.

ಕಾರ್ ಸ್ಟಾರ್ಟ್ ಆದ ನಂತರ ವಿಮಲೆಯು " ಏನು ಸಮಾಚಾರ " ಎಂದು ಕೇಳಿದಳು.

" ಸಮಾಚಾರಕ್ಕೇನು ಬೇಕಾದಷ್ಟಿದೆ. ಮೊದಲು ಒಂದು ವಿಷಯ ಹೇಳು, ವಿಮಲಾ. ನಿನಗೆ ನನ್ನ ನೆನಪು ಬರುತ್ತಿದ್ದಿತೇನು ?"

"ಬರದೇ ಏನು ? ಖಂಡಿತವಾಗಿಯೂ ಬರುತ್ತಿತ್ತು. ಆ ನೆನಪು ಸ್ವಪ್ನದಂತೆ ಕಾಣುತ್ತಿತ್ತು "

" ಅದು ಖಂಡಿತವಾಗಿ ಸ್ವಪ್ನವಲ್ಲ. ನಿಜಕ್ಕಿಂತಲೂ ದೊಡ್ಡ ನಿಜ. ಈಗ ಬಂದು ನಿನ್ನನ್ನು ನೋಡಿದ್ದು ನನ್ನ ಮನಸ್ಸಿಗೆ ಎಷ್ಟೋ ಹಾಯಾಗಿದೆ. ಮೊದಲು ಸ್ವಲ್ಪ ಅಪ್ರಿಯವಾದ ವಿಷಯವನ್ನೇ ಹೇಳುತ್ತೇನೆ. ನಾನು ಚಿಕ್ಕಮಗಳೂರಿನಲ್ಲಿದ್ದಾಗ ನಿನ್ನ ಅಗಲಿಕೆಯು ನನ್ನ ಮನಸ್ಸಿಗೆ ಬಹಳ ಕಷ್ಟವಾಯಿತು. ನಾವು ಪ್ರೇಮ ಮಾಡುತ್ತಿದ್ದೇವೆಂದು ಸ್ಪಷ್ಟವಾಗಿ ಹೇಳಿಬಿಡೋಣ. ಹೆಚ್ಚು ಗಲಾಟೆಯಿಲ್ಲದೇ ಆರ್ಯಸಮಾಜದಲ್ಲಿ ಒಂದು ದಿನ ಮದುವೆಯ ಶಾಸ್ತ್ರವನ್ನು ಪೂರೈಸಿ ಬಿಡೋಣ-ಎಂದುಕೊಂಡಿದ್ದೆ. ಆದರೆ ಈಗ ಹಾಗಾಗುವುದಿಲ್ಲ. ಇನ್ನೂ ಕೆಲವು ದಿನಗಳು ಇದನ್ನು ಗುಟ್ಟಾಗಿಯೇ ಇಡಬೇಕಾಗಿದೆ " ಎಂದನು.

ಅವಳು ಅವನ ಕಡೆಗೆ ವಿಸ್ಮಯದಿಂದ ನೋಡಿದಳು. ಆ ಕತ್ತಲೆಯಲ್ಲಿ ಅವನು ಅದನ್ನು ಗಮನಿಸಲಿಲ್ಲ. ಅವನು ಮುಂದೇನು ಹೇಳುತ್ತಾನೆಯೋ ಎಂದು ಆಸಕ್ತಿಯಿಂದ ಕೇಳ ತೊಡಗಿದಳು. ಅವನು ಹೇಳಿದ ವಿಷಯವು ಅವಳಿಗೆ ಅಪ್ರಿಯವಾಗಿರಲಿಲ್ಲ.

" ಇದೇಕೆಂಬುದನ್ನು ಹೇಳುತ್ತೇನೆ, ಕೇಳು. ನಮ್ಮ ಸೋದರಮಾವ ಶಾಮಣ್ಣನವರನ್ನು ಬಲ್ಲೆಯಲ್ಲಾ. ಅವರಿಗೆ ನಾಗವೇಣಿ ಅಂತ ಒಬ್ಬ ಮಗಳಿದ್ದಾಳೆ. ಗೊತ್ತೇ ?"

" ಗೊತ್ತಿಲ್ಲ. ಅವಳ ಹೆಸರು ಕೇಳಿದ್ದೇನೆ "

" ಅವರು ನಾಗವೇಣಿಯನ್ನು ನನಗೆ ಕೊಟ್ಟು ಮದುವೆ ಮಾಡ ಬೇಕೆಂದಿದ್ದಾರೆ. ನನ್ನಣ್ಣನವರು ಕೇಳಿದರು. ನಾನು ಒಪ್ಪಿಕೊಂಡಿಲ್ಲ. ಸ್ವಲ್ಪ ಒತ್ತಾಯ ಮಾಡಿದರೆ ಒಪ್ಪಿಕೊಳ್ಳಬಹುದೆಂದು ಕೊಂಡಿದ್ದಾರೆ. ನಾನೂ ಅದನ್ನು ಹಾಗೆ ಹಾಗೇ ಇಟ್ಟಿದ್ದೇನೆ. ನನ್ನ ವ್ಯಾಪಾರಕ್ಕೆ ಅವ ರಿಂದ ಈಗ ಹಣ ತೆಗೆದುಕೊಳ್ಳುತ್ತಿದ್ದೇನೆ. ಈಗಲೇ ನಾವು ಮದುವೆ ಮಾಡಿಕೊಂಡರೆ ಅವರು ಹಣ ಕೊಡುವುದನ್ನು ನಿಲ್ಲಿಸಿ ಬಿಡಬಹುದು. ಅದ ರಿಂದ ಸ್ವಲ್ಪ ತಡ. ಆದರೆ ನಾನು ಬೇರೇ ಕಡೆ ಹಣದ ಏರ್ಪಾಟು ಮಾಡು ತ್ತಿದ್ದೇನೆ. ಅದೂ ಅಲ್ಲದೇ ಇನ್ನು ಆರೇಳು ವಾರಗಳಲ್ಲಿ ನನಗೆ ಬಹಳ ಲಾಭವು ಬರುತ್ತದೆ. ಎಷ್ಟೇ ನಿದಾನವಾದರೂ ಇನ್ನು ಮೂರು ತಿಂಗಳಲ್ಲಿ ನಾವು ಸಂಸಾರ ಹೂಡಿಬಿಡಬಹುದು"

ಆ ಮಾತಿಗೆ ಪ್ರತ್ಯುತ್ತರವಾಗಿ ವಿಮಲೆಯು ನಕ್ಕಳು.

ಆದರೆ ಆ ಮಾತುಗಳು ಅವಳಿಗೆ ಕಲ್ಲಿನ ಏಟುಗಳಂತೆ ತಗುಲಿದವು. " ನಾನು ಎಲ್ಲಿಯಾದರೂ ಓಡಿ ಹೋಗಬೇಕು. ನನ್ನವರನ್ನು ಬಿಟ್ಟು ಯಾವುದೋ ಮನೆಯಲ್ಲಿ ಹೋಗಿ ಇವನೊಡನೆ ವಾಸ ಮಾಡುವುದೇ ? ಸಾಧ್ಯವಿಲ್ಲ. ಅದೂ ಅಲ್ಲದೇ ನಟ-ನಟರಾಜ........ " ಎಂದು ಮನಸ್ಸಿನಲ್ಲಿ ಯೋಚಿಸಿದಳು.

ಅವಳ ಯೋಚನೆಯನ್ನು ತಿಳಿದು ಕೊಂಡವನಂತೆ ವೆಂಕಟರಾಯನು " ನಟರಾಜನು ನಿನ್ನಲ್ಲಿ ಬಹಳ ಆಸಕ್ತನಾಗಿದ್ದನೆಂದು ಮಾಧುವು ಹೇಳಿದ " ಎಂದನು.

" ಏನು, ಮಾಧವರಾವ್ ಈ ರೀತಿ ಹೇಳಿದರೆ "

" ಹೌದು. ಈ ದಿನ ಮಧ್ಯಾಹ್ನ ಅವನನ್ನು ಬ್ಯಾಂಕಿನಲ್ಲಿ ನೋಡಿದ್ದೆ. ಇಬ್ಬರೂ ಮಾತನಾಡುತ್ತಾ ಹೊರಗೆ ಬಂದೆವು. ನಮ್ಮ ನಮ್ಮ ವಿಷಯವು ಅವನಿಗೆ ಗೊತ್ತಿಲ್ಲ. ಅವನು ತಮಾಷೆ ಮಾಡುವವನಂತೆ " ಇತ್ತ ಶಕುಂತಲೆಯೊಡನೆ ಮದುವೆ ಮಾಡಿಕೊಳ್ಳುವುದು ಗೊತ್ತಾಗಿರುವಾಗ ನಟ ರಾಜನು ವಿಮಲೆಯ ಹಿಂದೆ ತಿರುಗುತ್ತಿದ್ದ " ಎಂದು ನಗುತ್ತಾ ಹೇಳಿದ "

ವಿಮಲೆಯು ನಗುತ್ತಾ "ಹಾಗಾದರೇನಂತೆ" ಎಂದು ಕೇಳಿದಳು.

"ಇದು ನಗುವ ವಿಷಯವಲ್ಲ, ವಿಮಲಾ !"

"ನಾನು ಹಾಗೇನೂ ನಗುತ್ತಿಲ್ಲ! ಆದರೆ ಅವುಗಳಿಗೆಲ್ಲಕ್ಕೂ ಅರ್ಥವನ್ನು ಕಲ್ಪನೆ ಮಾಡುವುದು ಮಾತ್ರ ಅವಿವೇಕ"

"ಹಾಗಾದರೆ ಅವನು ಇಲ್ಲಿಗೆ ಬರುತ್ತಿರಲಿಲ್ಲವೇನು ?"

"ಒಂದೆರಡು ಬಾರಿ ಬಂದಿರಬಹುದು"

"ಅವನ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ?"

"ಇದಕ್ಕೆಲ್ಲಾ ಏನೆಂದು ಹೇಳಲಾಗುತ್ತದೆ. ಒಳ್ಳೆಯವನು"

"ನನ್ನ ವಿಷಯವೇನಾದರೂ ಹೇಳಿದನೇನು ?"

"ಹೇಳಿದ. ನೀವೂ ಅವನೂ ಸ್ನೇಹಿತರೆಂದು ಹೇಳಿದ. ನೀವು ಮದರಾಸಿನಲ್ಲಿ ಸಿಕ್ಕಿದ್ದಿರೆಂದು ಹೇಳಿದ"

ವೆಂಕಟರಾಯನು ಏನೋ ಮಾತನಾಡುತ್ತಾ "ಮದರಾಸಿಗೆ ಹೋದ ಅವನು ನಿನಗೇನಾದರೂ ಕಾಗದ ಬರೆದಿದ್ದನೇ ?" ಎಂದು ಕೇಳಿದ.

"ಒಂದು ಕಾಗದ ಬರೆದಿದ್ದ. ಅದರಲ್ಲಿ ಅಂತಹ ವಿಷಯವೇನೂ ಇಲ್ಲ. ಹೇಳದೇ ಹೊರಟು ಹೋದೆ. ಕ್ಷಮಿಸಬೇಕು ಎಂದು ಬರೆದಿದ್ದ"

ಅಷ್ಟು ಹೊತ್ತಿಗೆ ಅವರು ಮಾರ್ಕೆಟ್ ಚೌಕದ ಬಳಿ ಬಂದಿದ್ದರು. ರಸ್ತೆಯಲ್ಲಿ ಜನಜಂಗುಳಿಯು ಹೆಚ್ಚಾಗಿದ್ದುದರಿಂದ ಕಾರು ನಿದಾನವಾಗಿ ಹೋಗುತ್ತಿದ್ದಿತು. ಅಲ್ಲಿ ಜೊತೆ ಕಟ್ಟಿಕೊಂಡು ಹೋಗುತ್ತಿದ್ದ ಅನೇಕ ಮಂದಿ ದಂಪತಿಗಳನ್ನು ವಿಮಲೆಯು ನೋಡಿದಳು. ತಾನೂ ತನ್ನ ಗಂಡನೊಡನೆ ಹಾಗೆ ಹೋಗಬೇಡವೇ ಎಂದೆನಿಸಿತು. ಮರುಗಳಿಗೆಯಲ್ಲಿ ನಾನೂ ಅವರಂತೆಯೇ ಹೋಗುತ್ತಿದ್ದೇನಲ್ಲಾ ಎಂದುಕೊಂಡಳು.

ಕಾರು ಕೃಷ್ಣರಾಜೇಂದ್ರ ರಸ್ತೆಯಲ್ಲಿ ತಿರುಗುತ್ತಿದ್ದಾಗ "ವಿಮಲೆಯು ಇಲ್ಲೇಕೆ ಹೋಗುತ್ತಿದ್ದೀರಿ ? ಇನ್ನು ವಾಪ್ಸು ಹೋಗೋಣ" ಎಂದಳು.

"ನಿನ್ನನ್ನು ಕರೆಯಲು ನಿನ್ನೊಡನೆ ಮಾತನಾಡಬೇಕಾದ್ದೂ ಒಂದು ಕಾರಣವಿದ್ದಿತು. ಆದರೆ ಶಂಕುಂತಲೆಯ ಮನೆಗೆ ಹೋಗಿ ಲಲಿತಮ್ಮನವರನ್ನು ನೋಡಿಕೊಂಡು ಹೋಗೋಣ. ಇನ್ನೂ ಎಂಟು ಗಂಟೆ" ಎಂದನು.

ಐದು ನಿಮಿಷಗಳ ಕಾಲ ಯಾರೂ ಮಾತನಾಡಲಿಲ್ಲ. ಕಾರು

ಹೋಗುತ್ತಿದ್ದಂತೆ ತಮ್ಮ ಮನೆಗು ಬಾಗಿಲಿಗೆ ಒಂದು ಬೋರ್ಡು ಅಂಟಿಸಿರುವುದು ವಿಮಲೆಯ ಕಣ್ಣಿಗೆ ಬಿದ್ದಿತು. ಕಾರು ನಿಲ್ಲಿಸುವಂತೆ ಹೇಳಿದಳು. ಸಾವಧಾನವಾಗಿ ಅದನ್ನು ಓದಿದಳು. "ಮಾರಾಟ ಅಥವಾ ಬಾಡಿಗೆಗಾಗಿ ಸಿದ್ಧವಾಗಿದೆ" ಎಂದು ಬೋರ್ಡು ಹಾಕಿದ್ದಿತು.

ಅದು ವಿಮಲೆಯ ಮನಸ್ಸಿಗೆ ನೋವುಂಟು ಮಾಡಿತು.

ಅದನ್ನು ತೋರಿಸಿಕೊಳ್ಳದೇ "ನಿಮ್ಮ ಸೋದರಮಾವನ ಮಗಳನ್ನು ಮದುವೆ ಮಾಡಿಕೊಳ್ಳಬೇಕೆಂದು ನಿಮ್ಮ ತಾಯಿತಂದೆಗಳು ಬಲಾತ್ಕಾರ ಮಾಡುವುದಿಲ್ಲವೇ ?" ಎಂದಳು.

"ಅದೊಂದೂ ಇಲ್ಲ, ವಿಮಲಾ. ಸ್ವಲ್ಪ ಹಣಕಾಸಿನ ವಿಷಯವನ್ನು ಗಮನಿಸುತ್ತಿದ್ದೇನೆ. ಅದಾಯಿತೆಂದರೆ ನಮ್ಮ ಮಾವನಿಗೆ ಸ್ಪಷ್ಟವಾಗಿ ಹೇಳಿ ಬಿಡುತ್ತೇನೆ"

ಶಕುಂತಲೆಯ ಮನೆಯೂ ಬಂದಿತು. ಬಾಗಿಲಲ್ಲಿ ಕಾರು ನಿಲ್ಲಿಸಿ ನಡೆದು ಹೋದರು. ಆ ಐಶ್ವರ್ಯ ಸಮಾವಿಷ್ಟವಾದ ಮನೆಯಲ್ಲಿ, ಸುಖಾಸನಗಳ ನಡುವೆ, ಮೃದುವಾದ ರತ್ನಗಂಬಳಿಗಳ ಮೇಲೆ ಅವರುಗಳಿಬ್ಬರೂ ನಡೆದು ಹೋದರು.

ಹಜಾರದಲ್ಲಿ ಕುಳಿತು ಪ್ರಕಾಶನು ಕ್ರಾಸ್ ವರ್ಡ್ ಸಮಸ್ಯೆಯನ್ನು ಮುಂದಿಟ್ಟುಕೊಂಡು ನೋಡುತಿದ್ದನು. ವಿಮಲೆಯು ಕಾದಂಬರಿಯನ್ನು ಓದುತ್ತಿದ್ದಳು.

ಹೋದವನೇ ವೆಂಕಟರಾಯನು "ಈ ದಿನತಾನೇ ಬಂದೆ. ನಿಮ್ಮ ತಾಯಿಯ ದೇಹಸ್ಥಿತಿಯು ಹೇಗಿದೆಯೋ ನೋಡಿಕೊಂಡು ಹೋಗೋಣವೆಂದು ಬಂದೆ" ಎಂದನು.

ಶಕುಂತಲೆಯು ಗೆಳತಿಯನ್ನು ಕುರಿತು "ಏನು ವಿಮಲಾ. ಆವತ್ತಿನಿಂದ ಬರಲೇ ಇಲ್ಲವಲ್ಲ" ಎಂದಳು.

ವೆಂಕಟರಾಯನೂ ವಿಮಲೆಯೂ ಕುಳಿತುಕೊಂಡರು.

ಶಕುಂತಲೆ "ಅಯ್ಯೋ! ಅಮ್ಮಾ ಒಂದೇ ವಿಧವಾಗಿದ್ದಾರೆ. ಗಂಡಾಂತರವು ತಪ್ಪಿತು. ಆದರೆ ಎದ್ದು ಎರಡು ಹೆಜ್ಜೆಯನ್ನು ಸಹ ಇಡುವಂತೆ ಇಲ್ಲ. ಯಾವಾಗಲೂ ಹಾಸಿಗೆಯ ಮೇಲೆ ಮಲಗಿಯೇ ಇರಬೇಕು. ಅವರ

ಗಂತೂ ಬಹಳ ಬೇಜಾರಾಗಿದೆ. ಈಗವರಿಗೆ ಸ್ವಲ್ಪ ನಿದ್ದೆಯು ಬರುವಂತಿದೆ " ಎಂದಳು.

ವೆಂಕಟರಾಯನು " ಭಾನುವಾರ. ನೀವು ಮನೆಯಲ್ಲಿರುತ್ತೀರೋ ಇಲ್ಲವೋ ಎಂದು ಸಂದೇಹವಾಗಿತ್ತು. ನೀವು ಸಿಕ್ಕಿದ್ದು ಬಹಳ ಸಂತೋಷ " ಎಂದನು.

" ಈ ದಿನ ಎಲ್ಲಿಯಾದರೂ ಹೋಗುತ್ತಲೇ ಇದ್ದೆವು. ಆದರೆ ಸಾಯಂಕಾಲ ಕಾಫಿಯ ಹೊತ್ತಿಗೇ ಮಾಲತಿ ಬಂದಿದ್ದಳು. ನಾನೂ ಅವಳೂ, ಪ್ರಕಾಶ, ನಟರಾಜ್ ಎಲ್ಲರೂ ಸೇರಿ ಇಸ್ಪೀಟು ಮೊದಲು ಮಾಡಿದೆವು. ಅದರಿಂದ ಎಲ್ಲಿಯೂ ಹೋಗಲಾಗಲಿಲ್ಲ. ಮನೆಯಲ್ಲಿಯೇ ಇದ್ದೇವೆ " ಎಂದಳು.

ವಿಮಲೆಯು ಸೋಫಾ ಮೇಲೆ ಕುಳಿತು ಸಂಭಾಷಣೆಯನ್ನು ಕೇಳುತ್ತಿದ್ದಳು. ಶಕು ನಟರಾಜನ ಹೆಸರು ಹೇಳಿದಳೇ ? ನಟರಾಜನೂ ಇಸ್ಪೀಟಾಡುತ್ತಿದ್ದನೆಂಬುದಾಗಿ ಹೇಳಿದಳೇ ? ಆ ಕೋಣೆಯಲ್ಲಿ ಸಿಡಿಲು ಗುಡುಗುಗಳು ಶಬ್ದ ಮಾಡುತ್ತಿರುವಂತೆ ವಿಮಲೆಗೆ ಭಾಸವಾಯಿತು. ಅವಳು " ದೇವರೇ ! ಈಗಿಲ್ಲಿ ನಟರಾಜನು ಬರದಿರಲಿ " ಎಂದು ಹರಕೆ ಹಾಕಿದಳು.

" ನಟರಾಜ್ ಈಗ ಊರಿನಲ್ಲಿದ್ದಾರೇನು ?" ಎಂದು ವೆಂಕಟರಾವ್ ಕೇಳಿದನು.

" ಬಂದರು " ಎಂದು ಹೇಳಿ ವಿಮಲೆಯು ಪರಿಚಾರಕನನ್ನು ಕರೆದು ಎಲ್ಲರಿಗೂ ಸ್ವಲ್ಪ ಓವಲ್‌ಟೀ ತಂದು ಕೊಡುವಂತೆ ಹೇಳಿದಳು.

" ಅವರು ಊರಿನಲ್ಲಿಲ್ಲವೆಂದು ಕೇಳಿದ್ದೆ "

ಪ್ರಕಾಶನು ನಡುವೆ ಬಾಯಿ ಹಾಕಿ " ಹೌದು. ಅವರು ಮದರಾಸಿಗೆ ಹೋಗಿದ್ದರು. ಈಗ ಅವರದೊಂದು ಕಾದಂಬರಿಯನ್ನು ಪಿಕ್ಚರ್ ಮಾಡುತ್ತಿದ್ದಾರೆ. ಅವರಲ್ಲಿಯೇ ಇದ್ದಾರೆ. ಏನೋ ಆ ಊರು ಬೇಜಾರಾಯಿತೆಂದು ಬಂದಿದ್ದಾರೆ " ಎಂದನು.

ಶಕುಂತಲೆಯು ವಿಷಯವನ್ನು ಇನ್ನೂ ವಿವರವಾಗಿ ಹೇಳುತ್ತಾ " ಅವರು ಈ ದಿನ ಬೆಳಗಾಗ ಮದರಾಸಿನಿಂದ ವಿಮಾನದಲ್ಲಿ ಬಂದರು. ಪುನಃ ನಾಳೆ ಹೊರಟು ಹೋಗುತ್ತಾರಂತೆ. ಅವರೆಷ್ಟು ಬೇಕಾದರೂ ಸುತ್ತುತ್ತಾರೆ. ಕಳೆದ ವರ್ಷ ನಾನು ವಿಮಾನದಲ್ಲಿ ಹೈದರಾಬಾದಿಗೆ ಹೋಗಿದ್ದೆ.

ಹೋಗಿ ಇಳಿಯುವ ವೇಳೆಗೆ ಜ್ವರ ಬಂದುಬಿಟ್ಟಿತು. ಅಂದಿನಿಂದ ವಿಮಾನದ ಪ್ರಯಾಣವನ್ನೇ ನಿಲ್ಲಿಸಿಬಿಟ್ಟಿದ್ದೇನೆ " ಎಂದಳು.

ಅನಂತರ ಏನೋ ಜ್ಞಾಪಕ ಮಾಡಿಕೊಂಡು " ವಿಮಲಾ. ನಾಳೆ ಬುಧವಾರದ ದಿನ ನನ್ನ ಹುಟ್ಟಿದ ಹಬ್ಬ. ನೀನು ಇಲ್ಲಿಗೇ ಊಟಕ್ಕೆ ಬರ ಬೇಕು. ತಪ್ಪಿಸಿಕೊಳ್ಳಬೇಡ. ನಟರಾಜ್ ನಿನಗೆ ಹೇಳಿ ಬರಲು ಹೋಗಿರ ಬಹುದು " ಎಂದಳು.

ಒದಗಿ ಬಂದ ಪರಿಸ್ಥಿತಿಯನ್ನು ವಿಮಲೆಗೆ ತಡೆದುಕೊಳ್ಳಲಾಗಲಿಲ್ಲ. ದೊಡ್ಡದೊಂದು ಬಿರುಗಾಳಿಯು ಬಂದು ಅವಳನ್ನು ತರಗೆಲೆಯಂತೆ ಅಂತ ರಾಳಕ್ಕೆ ಹಾರಿಸಿಕೊಂಡು ಹೋದ ಹಾಗಾಯಿತು.

ಹೀಗಿರುವಾಗಲೂ ಬಾಯಿ ತಪ್ಪಿ " ಅಯ್ಯೋ ! ಅವರು ಅನ್ಯಾಯ ವಾಗಿ ಹೋದಂತಾಯಿತಲ್ಲ " ಎಂದುಬಿಟ್ಟಳು.

ವೆಂಕಟರಾಯನು ನೆಟ್ಟ ಕಣ್ಣುಗಳಿಂದ ತನ್ನನ್ನು ನೋಡುತ್ತಿದ್ದಾ ನೆಂದು ಅವಳಿಗೆ ಗೊತ್ತಿತ್ತು. ಮೌನವು ಆ ನೋಟವನ್ನು ಮತ್ತಷ್ಟು ತೀಕ್ಷ್ಣವಾಗಿ ಮಾಡಿದ್ದಿತು. ಯಾರಾದರೂ ಮಾತನಾಡಬಾರದೇ ಎಂದವಳ ಮನಸ್ಸು ಪರಿತಪಿಸುತ್ತಿತ್ತು. ಮಾತನಾಡಿದರೆ ವೆಂಕಟರಾಯನು ತನ್ನ ದೃಷ್ಟಿಯನ್ನು ಬದಲಾಯಿಸ ಬೇಕಾಗುತ್ತದೆ.

ದೇವರಿಂದ ಬಂದ ವರಪ್ರಸಾದದಂತೆ ಪುನಃ ಅಲ್ಲಿ ಚರ್ಚೆಯು ಮೊದ ಲಾಯಿತು.

ಮಾಲತಿಯು " ಶಕುಂತಲ. ನಟರಾಜ್‌ಗೆ ಈ ಮೊದಲೇ ಮದುವೆ ಯಾಗಿರುವುದು ನಿಜವೇನೇ ?" ಎಂದಳು.

ಶಕುಂತಲೆಯು ಹೌದೆಂದು ಹೇಳಿದಳು.

ಪುನಃ ಮಾಲತಿಯು " ನೀನು ಆ ವಿಷಯವಾಗಿ ಆಕ್ಷೇಪಣೆ ಮಾಡಿ ಮಾತನಾಡಿದಾಗ ಅವರೇನೂ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಯಾರೋ ಬೇರೆಯವರನ್ನು ಅಂದರೆ ಹೇಗಿರಬೇಕೋ, ಹಾಗೆ ಇದ್ದರು " ಎಂದಳು.

" ಹೌದು ! ಅದೇ ಅವರಲ್ಲಿರುವ ದೊಡ್ಡ ಗುಣ. ಮೊದಲು ಈ ಮದುವೆಯಾಗಿರುವ ವಿಷಯವು ನನಗೆ ಗೊತ್ತಿರಲಿಲ್ಲ. ಒಂದು ವೇಳೆ ಗೊತ್ತಿದ್ದರೂ ಸಹ ನಾನು ಅದನ್ನು ಲಕ್ಷ್ಯಮಾಡುತ್ತಿದ್ದೆನೋ ಇಲ್ಲವೋ ಹೇಳ

ಲಾಗುವುದಿಲ್ಲ. ಯಾರು ಹಿಂದೆ ಹೇಗಿದ್ದರೇನು ? ಇಂದೇನು ಎಂದು ನೋಡಬೇಕು. ಅದೇ ವಾಸ್ತವವಾಗಿ ಪ್ರಪಂಚವನ್ನು ನೋಡುವ ಕ್ರಮ ”

ಶಕುಂತಲೆಯು ಹೇಳಿದುದೇ ಬಹಳ ಸರಿ ಎಂದು ವಿಮಲೆಗೆ ತೋರಿತು.

ವಿಮಲೆಗೆ ಜ್ವರ ಬಂದ ಹಾಗಾಯಿತು. ಇಷ್ಟು ದೂರದಿಂದ ತನ್ನನ್ನು ನೋಡಲು ನಟರಾಜ್ ಅಷ್ಟು ದೂರ ಹೋಗಿ ವಿಫಲ ಮನೋರಥನಾಗಿ ವಾಪ್ಸು ಬರುತ್ತಾನೆ. ಶಂಕರನು ಇಲ್ಲವೆಂದು ಹೇಳಿ ಬಿಡುತ್ತಾನೆ. ತಾನು ವೆಂಕಟರಾಯನೊಂದಿಗೆ ಬಂದುದು ತಪ್ಪಾಯಿತು. ಅಲ್ಲಿಯೇ ಇರಬೇಕಾಗಿದ್ದಿತು. ಎಂತಹ ಪ್ರಮಾದವಾಯಿತು.

ಗಾಜಿನ ಸಣ್ಣ ಕಪ್ ಸಾಸರ್‌ಗಳಲ್ಲಿ ಓವಲ್‌ಟೀ ಬಂದಿತು. ಎಲ್ಲರೂ ತೆಗೆದುಕೊಂಡರು.

ವಿಮಲೆಯು ಕುಡಿದು ಬಟ್ಟಲನ್ನು ಕೆಳಗಿಟ್ಟಳು. ಸುತ್ತುತ್ತಿದ್ದ ಭೂಮಿಯು ಒಂದು ಬಾರಿ ನಿಂತು ಹೋದ ಹಾಗಾಯಿತು. ಪುನಃ ಅದು ಭರ್ರನೆ ತಿರುಗಲು ಆರಂಭವಾದಂತಾಯಿತು.

ಅವನ ಧ್ವನಿಯು ಕೇಳಿಸಿತು. ಅವನು ಒಳಗೆ ಬಂದನು.

“ ಓ ! ವೆಂಕಟರಾವ್. ಓ ವಿಮಲಾ ! ನಿಮ್ಮಿಬ್ಬರನ್ನೂ ನೋಡಿ ಬಲು ದಿನವಾಯಿತು. ಎಷ್ಟು ಅಪರೂಪ. ಏನು ಕಥೆ ” ಎಂದನು.

ವಿಮಲೆಯ ಪಕ್ಕದಲ್ಲಿ ಕುಳಿತುಕೊಂಡಿದ್ದ ಮಾಲತಿಯು ರೇಡಿಯೋ ಟ್ಯೂನ್ ಮಾಡಲು ಎದ್ದು ಹೋದಳು. ನಟರಾಜ್ ಅಲ್ಲಿ ಹೋಗಿ ಕುಳಿತುಕೊಂಡನು.

ವಿಮಲೆಯು ತಲೆ ಎತ್ತಿ ನಟರಾಜನ ಕಡೆಗೆ ನೋಡಿದಳು. ನಕ್ಕಳು. ಆದರೆ ಅವಳ ಮುಖದ ನರಗಳು ಚಲಿಸದೇ ಬಿಗಿ ಹಿಡಿದುಕೊಂಡಂತೆ ಇದ್ದಿತು.

ರೇಡಿಯೋ ಟ್ಯೂನ್ ಮಾಡಿ ವಾಪ್ಸು ಬಂದ ಮಾಲತಿಯು ಮತ್ತೊಂದು ಕಡೆ ಕುಳಿತುಕೊಳ್ಳುತ್ತಾ, ನಟರಾಜನನ್ನು ಉದ್ದೇಶ ಮಾಡಿ “ ನೀವು ವಿಮಲೆಯನ್ನು ಹುಡುಕಿಕ್ಕೊಂಡು ಹೋದಿರಿ. ಅವಳೇ ಇಲ್ಲಿ ಬಂದುಬಿಟ್ಟಳು. ನೋಡಿದಿರಾ, ಹೇಗಾಯಿತು ” ಎಂದಳು.

"ಹೌದು. ಒಂದೊಂದು ಬಾರಿ ಹಾಗೆಯೇ ಆಗುತ್ತದೆ. ಬೀಗದ ಕೈಯನ್ನು ಜೇಬಿನಲ್ಲಿ ಇಟ್ಟುಕೊಂಡು ಅದಕ್ಕಾಗಿ ಮನೆಯಲ್ಲೆಲ್ಲಾ ಹುಡುಕುವುದಿಲ್ಲವೇ, ಹಾಗೆ " ಎಂದನು.

ಆಳು ಬಂದು ಅಮ್ಮಾವರು ಎದ್ದಿದ್ದಾರೆಂದು ಹೇಳಿದನು.

ಶಕುಂತಲೆಯು ವಿಮಲೆಯನ್ನು ಕುರಿತು " ಬಾರೇ ! ಅಮ್ಮ ಎದ್ದಿದ್ದಾರಂತೆ. ನೋಡಿಕೊಂಡು ಬರೋಣ " ಎಂದಳು.

ಹೆಂಗಸರು ಮುಂದೆ ಹೋದರು. ವೆಂಕಟರಾಯನೂ ನಟರಾಜನೂ ಹಿಂದೆ ಹೋದರು. ಪ್ರಕಾಶನು ಅಲ್ಲಿಯೇ ಉಳಿದನು.

ನಟರಾಜನು "ವೆಂಕಟರಾವ್ ! ನೀವು ವಿಮಲೆಯನ್ನು ಬಿಟ್ಟು ಬರಲು ಕೆಂಗೇರಿಗೆ ಹೋಗುತ್ತೀರಲ್ಲವೆ ? ನಾನು ನಿಮ್ಮೊಡನೆ ಬರುತ್ತೇನೆ " ಎಂದು ಹೇಳಿದನು.

ವೆಂಕಟರಾಯನು ಸಿಕ್ಕಿಬಿದ್ದ ಹಾಗಾಯಿತು. ಅವನಿಗೆ ಏನು ಉತ್ತರ ಕೊಡಬೇಕೆಂದು ತೋರಲಿಲ್ಲ. ಕ್ಷಣಾರ್ಧದಲ್ಲಿ ಚೇತರಿಸಿಕೊಂಡು " ಇಲ್ಲ. ನಾವೀಗ ನೇರವಾಗಿ ಕೆಂಗೇರಿಗೆ ಹೋಗುವುದಿಲ್ಲ. ನಮ್ಮ ಸೋದರ ಮಾವನ ಮನೆಗೆ ಹೋಗಿ ಅನಂತರ ಹೋಗುತ್ತೇವೆ " ಎಂದನು.

ಇಬ್ಬರೂ ಮುಂದೆ ಹೋದರು.

ಮಹಡಿಯ ಮೆಟ್ಟಲುಗಳನ್ನು ಹತ್ತುತ್ತಾ ನಟರಾಜನು " ವಿಮಲಾ ! ನಿಮ್ಮ ಮನೆಯಲ್ಲೆಲ್ಲಾ ಹೇಗಿದ್ದಾರೆ:?" ಎಂದು ಕೇಳಿದನು.

" ಎಲ್ಲಾ ಚೆನ್ನಾಗಿದ್ದಾರೆ " ಎಂದು ಹೇಳಿದಳು.

ನಟರಾಜನು " ನಮ್ಮ ಫ್ರೆಂಡ್ ವರದಾ ಹೇಗಿದ್ದಾಳೆ " ಎಂದನು.

" ಮೊದಲಿನಂತೆಯೇ ತುಂಟತನ ಮಾಡುತ್ತಾ ಓಡಿಯಾಡುತ್ತಿದ್ದಾಳೆ " ಎಂದು ವಿಮಲೆಯು ಉತ್ತರ ಹೇಳಿದಳು.

" ಅವಳೇ ನಿಮ್ಮ ಮನೆಯಲ್ಲೆಲ್ಲಾ ಬಹಳ ಬುದ್ಧಿವಂತಳು "

ವೆಂಕಟರಾಯನು ಕೊಂಕು ಮಾತನಾಡುವ ಉದ್ದೇಶದಿಂದ " ವಿಮಲೆಯ ಮನೆಯವರೆಲ್ಲಾ ನಿಮಗೆ ಗೊತ್ತಿರುವಂತಿದೆಯಲ್ಲಾ " ಎಂದನು.

ನಟರಾಜನು ಕೊಂಕುತನವನ್ನು ಮನಸ್ಸಿಗೆ ತಂದುಕೊಳ್ಳದೇ " ಗೊತ್ತಿ

ಲ್ಲದೇ ಏನು ? ವಿಮಲೆಯ ಮನೆಯವರೆಲ್ಲರೂ ನನಗೆ ಗೊತ್ತು " ಎಂದು ಹೇಳಿದನು.

ತನ್ನ ಹೆಸರನ್ನು ಅವನು ಹೇಳಿದಾಗ ವಿಮಲೆಯ ನರನರಗಳೂ ಪ್ರಚೋದಿತವಾದುವು.

ಎಲ್ಲರೂ ಹೋಗಿ ಲಲಿತಮ್ಮನವರನ್ನು ನೋಡಿದರು. ವಿಮಲೆಯೂ ವೆಂಕಟರಾಯನೂ ಅವರೊಡನೆ ಎರಡೆರಡು ಮಾತುಗಳನ್ನು ಆಡಿದರು. ಅನಂತರ ಎಲ್ಲರೂ ಕೆಳಗಿಳಿಯ ತೊಡಗಿದರು.

ವಿಮಲೆಯು ಹಿಂದೆ ಬರುತ್ತಿದ್ದಳು. ನಟರಾಜನು ವಿಮಲೆಯನ್ನು ನಿರೀಕ್ಷಣೆ ಮಾಡಿ ನಿಂತುಕೊಂಡನು. ಅವನು ಸಮೀಪಗತನಾಗುತ್ತಿದ್ದಂತೆ ಅವಳಿಗೇನಾಯಿತೋ ಹೇಳಲಾಗುವುದಿಲ್ಲ. ಇತರರು ಮೆಟ್ಟಿಲುಗಳನ್ನು ಇಳಿಯುತ್ತಿದ್ದರು. ಇವರಿಬ್ಬರು ಮಾತ್ರ ಮೇಲೆ ನಿಂತಿದ್ದರು. ನಟರಾಜನು ಕೈ ಹಿಡಿದು ಅವಳನ್ನು ಪಕ್ಕಕ್ಕೆ ಎಳೆದನು. ಸಣ್ಣ ದನಿಯಲ್ಲಿ ಬೇಗ ಬೇಗನೆ ಮಾತನಾಡ ತೊಡಗಿದನು.

ಕೆಲವು ದಿನಗಳ ಮೊದಲು ನಟರಾಜನಾರೋ, ವಿಮಲೆಯು ಯಾರೋ ? ಅವನು ಶಕುಂತಲೆಯನ್ನು ಮದುವೆಯಾಗುವ ಮದುಮಗ. ಕತೆಗಳನ್ನು ಬರೆಯುವ ಕಾದಂಬರಿಕಾರ. ಆದರೆ ಈಗ ಮಾತ್ರ ಹಾಗಲ್ಲ. ಈಗ–ಈಗ ಅವನಾಡಿದ ಒಂದೊಂದು ಶಬ್ದವೂ ಅವಳ ಮೇಲೆ ಪರಿಣಾಮವನ್ನುಂಟು ಮಾಡುತ್ತಿದ್ದಿತು. ಆ ಶಬ್ದ ಅವಳ ಹೃದಯದಲ್ಲಿ ಸಂತೋಷ, ಹೆದರಿಕೆ, ನೋವುಗಳನ್ನು ಉತ್ಪನ್ನ ಮಾಡುತ್ತಿದ್ದಿತು. ಅವನು ಕೈಹಿಡಿದುಕೊಂಡು ನಿಂತುಕೊಂಡ ಸ್ಥಳವು ಅವಳಿಗೆ ಸ್ವರ್ಗದಂತೆ ಭಾಸವಾಗುತ್ತಿದ್ದಿತು.

" ವಿಮಲಾ ! ನಾಳೆಯ ದಿನ ನಿಮ್ಮ ಮನೆಗೆ ಬರುತ್ತೇನೆ. ನಾನು ನಿನ್ನೊಡನೆ ಮಾತನಾಡಬೇಕೆಂದಿದ್ದೆ. ನಿನ್ನೊಡನೆ ಮಾತನಾಡಿಕೊಂಡು ಹೋಗುವುದಕ್ಕಾಗಿಯೇ ನಾನು ಮದರಾಸಿನಿಂದ ಬಂದೆ "

ಬಾಣಗಳ ಮೇಲೆ ಬಾಣಗಳನ್ನು ಬಿಟ್ಟ ಹಾಗೆ ಅವನ ಬಾಯಿಂದ ಶಬ್ದಗಳು ಬರುತ್ತಿದ್ದವು. ಆ ಪ್ರಹರದಿಂದ ಅವಳು ಸ್ತಬ್ಧಳಾದಳು. ಅವನು ಮುಂದೆ ಮಾತನಾಡುವುದನ್ನು ಕೇಳುತ್ತಾ ಸುಮ್ಮನೆ ನಿಂತುಕೊಂಡು ಬಿಟ್ಟಳು.

" ಇನ್ನು ಸುಮ್ಮನಿರುವುದು ಪ್ರಯೋಜನವಿಲ್ಲ. ಇಂದು ರಾತ್ರಿ ಶಕುಂತಲೆಯೊಡನೆ ಸ್ಪಷ್ಟವಾಗಿ ಮಾತನಾಡಿ ಬಿಡುತ್ತೇನೆ. ನಾನು ನಾಳೆ ನಿನ್ನನ್ನು ನೋಡಲೇ ಬೇಕು. ಎಷ್ಟು ಹೊತ್ತಿಗೆ ಬರಲಿ ?"

" ಶಕುಂತಲೆಯೊಡನೆ ಏನು ಮಾತನಾಡುತ್ತೀರಿ ?"

" ಹೀಗೆ ನಾನೂ ಅವಳೂ ಮಮತೆ ಮಾಡಿಕೊಳ್ಳುತ್ತೇವೆಂದು ನಟನೆ ಮಾಡುತ್ತಿರುವುದು ಪ್ರಯೋಜನವಿಲ್ಲ. ಅದಿನ್ನು ಮುಕ್ತಾಯವಾಗಲಿ. ಅವಳು ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಲ್ಲಳು. ಅದು ಎಂದೂ ವಾಸ್ತವವಲ್ಲ. ಇಂದೂ ವಾಸ್ತವವಲ್ಲ. ಅನಂತರ ನಾಳೆ ನಿನ್ನನ್ನು ನೋಡಬೇಕು "

ವಿಮಲೆಯು " ನನ್ನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಿ. ಇನ್ನು ಒಂದೇ ಒಂದು ಕ್ಷಣವಿದೆ. ವಿವರವಾಗಿ ಮಾತನಾಡುವುದು ಸಾಧ್ಯವಿಲ್ಲ " ಎಂದಳು.

ಆ ಒಂದು ನಿಮಿಷದಲ್ಲಿ ಅವಳಿಗೆ ಹಠಾತ್ತನೆ ಆಯಾಸವಾದಂತೆ ಆಯಿತು. ಅವಳ ಮುಖವು ಬಿಳಿಚಿಕೊಂಡಿತು.

" ನಾನು ಮೊದಲು ಹೇಳಿದಂತೆ ನನ್ನನ್ನು ಮರೆತು ಬಿಡಿರಿ. ನಾಳೆ ನಾನು ನಿಮ್ಮೊಡನೆ ಮಾತನಾಡುವವರೆವಿಗೆ ಯಾರಿಗೂ ಏನೂ ಹೇಳಬೇಡಿ. ನಾನು ........ನಾನು ಬಸುರಿಯಾಗಿದ್ದೇನೆ " ಎಂದಳು.

೧೪

ಬೆಳಗಾಗುವುದಕ್ಕಿಂತ ಮೊದಲೇ ಎದ್ದು ವಿಮಲೆಯು ಶಂಕರನಿಗೆ ಕಾಫೀ ಮಾಡಿ ಕೊಟ್ಟು ತಾನೂ ಕುಡಿದಳು. ಅವನಿಗೆ ಮಧ್ಯಾಹ್ನ ತಿನ್ನುವುದಕ್ಕೆ ಹುಳಿಯನ್ನ ಮಾಡಿ ಕೊಟ್ಟಳು. ಅವನು ಏರ್‌ಕ್ರಾಫ್ಟ್‌ಗೆ ಹೊರಟು ಹೋದನು. ಸುಮಾರು ಎಂಟು ಗಂಟೆಯ ವೇಳೆಗೆ ಹುಡುಗರೆಲ್ಲರೂ ಎದ್ದಿದ್ದರು. ವರಿಗೆ ಕಾಫಿ ಮಾಡಿ ಕೊಟ್ಟು ಅಡಿಗೆಗೆ ಎಸರಿಟ್ಟಳು. ಕಾಫಿ ಮಾಡಿದ ಪಾತ್ರೆ ಪಡಗಗಳೆಲ್ಲವನ್ನೂ ತೊಳೆದಿಟ್ಟಳು. ಇನ್ನೂ ಬಿಸಿಲು ಏರದಿದ್ದರೂ ಅವಳ ಹಣೆಯಲ್ಲಿ ಬೆವರಿನ ಹನಿಗಳು ಮೂಡಿದ್ದವು. ಮುಖವನ್ನು ತೊಳೆದುಕೊಂಡು ಟವಲನ್ನು ಹೆಗಲಿನ ಮೇಲೆ ಹಾಕಿಕೊಂಡು ಹೊರಗೆ ಬಂದಳು.

ಹೊರಗಡೆ ಮರಗಿಡಗಳ ಮೇಲೂ ನೆಲದ ಮೇಲೂ ಎಳೆಯ ಬಿಸಿಲು ಬಿದ್ದಿದ್ದಿತು.

ಅಲ್ಲಿ ಬಂದು ನಿಂತುಕೊಂಡ ವಿಮಲೆಯು ಹಿಂದಿನ ರಾತ್ರಿ ನಡೆದ ಘಟನೆಗಳನ್ನು ನೆನೆಸಿಕೊಳ್ಳಲಾರಂಭಿಸಿದಳು.

ಅಷ್ಟಾದರೂ ವೆಂಕಟರಾಯನು ಅಸಮಾಧಾನ ಪಟ್ಟಿರಲಿಲ್ಲ. ವಾಪ್ಸು ಬರುವಾಗ ಅಂಗಡಿಗೆ ಹೋಗಿ ಒಂದಿಷ್ಟು ಹಣ್ಣು ಹಂಪಲಗಳನ್ನು ಕೊಂಡುಕೊಂಡನು. ಸೋಪು, ಸ್ನೋ, ಷಾಂಪು, ಹೇರಾಯಿಲ್, ಪೌಡರ್‌ಗಳನ್ನು ಕೊಂಡು ತೆಗೆದುಕೊಂಡನು. ವಿಮಲೆಯನ್ನು ಬಿಡುವಾಗ ಅವೆಲ್ಲವನ್ನೂ ಅವಳ ಮನೆಯಲ್ಲಿಟ್ಟು ಹೋದನು. ವೆಂಕಟರಾಯನು ಅವಳನ್ನು ಅತೀವವಾಗಿ ಪ್ರೇಮ ಮಾಡುತ್ತಿದ್ದಾನೆ. ತಾನೂ ಅವನಿಗೆ ಆತ್ಮಸಮರ್ಪಣೆ

ಮಾಡಿದ್ದಾಳೆ. ಈಗ ಅವನನ್ನು ಬಿಟ್ಟು ಬಿಡಬೇಕೆಂದು ಅವಳ ಮನಸ್ಸು ಅಪೇಕ್ಷೆ ಮಾಡುತ್ತಿದೆಯೆ ? ವಿಮಲೆಗೆ ಅದೊಂದು ಸಮಸ್ಯೆಯಾಗಿದ್ದಿತು.

ಆದರೆ ನಟರಾಜನು ಸದಾ ಅವಳ ಕಣ್ಣಿನ ಮುಂದೆ ಸುಳಿದಾಡುತ್ತಿರುವಂತಿದೆ. ಸದಾ ಅವನ ಮಾತುಗಳು ಕಿವಿಯಲ್ಲಿ ಪ್ರತಿಧ್ವನಿಸುತ್ತಿರುವಂತೆ ಇದೆ. ಹಗಲೂ ರಾತ್ರಿಯೂ ಅವಳಿಗೆ ಇದೇ ಅವಸ್ಥೆಯಾಗಿದೆ. ಇದೇನು ಕಾಮವೋ, ಪ್ರೇಮವೋ ಅಥವಾ ಭ್ರಾಂತಿಯೋ, ಅವಳೇ ತಿಳಿದುಕೊಳ್ಳಲಾರದವಳಾಗಿದ್ದಾಳೆ. ವೆಂಕಟರಾಯನು ಎದುರಿಗಿರುವಾಗ ಸಹ ತಾನು ಬೇರೊಬ್ಬನಿಗೆ ಸೇರಿದ ಹೆಣ್ಣೆಂದು ಅವಳಿಗೆ ಭಾಸವಾಗುತ್ತದೆ. ಈ ಪ್ರಪಂಚದಲ್ಲಿ ಅವಳಿಗೆ ನಟರಾಜನ ವಿನಾ ಬೇರೆ ಯಾರೂ ಇಲ್ಲವೆಂದು ತೋರುತ್ತದೆ.

ಮೆಟ್ಟಲಿಳಿಯುತ್ತಿದ್ದವಳನ್ನು ನಟರಾಜನು ಹಿಡಿದು ನಿಲ್ಲಿಸಿದಂತಹ ಗಳಿಗೆಯನ್ನು ಅವಳು ನೂರಾರು ಬಾರಿ ನೆನೆಸಿಕೊಂಡಿದ್ದಳು. ಅವನು ಮಾತನಾಡುತ್ತಿದ್ದಾಗ ತಾನು ಅವಳವನೆಂದು ಅವಳ ಶರೀರದ ಕಣಕಣವೂ ಹೇಳುತ್ತಿದ್ದಿತು. ಹೀಗೆಯೇ ಅವನ ಸ್ಥಿತಿಯೂ ಆಗಿದೆಯೋ ಏನೋ.

ವಿಮಲೆ ತನ್ನ ಹೆಗಲಿನ ಮೇಲೆ ಹಾಕಿಕೊಂಡಿದ್ದ ಟವಲನ್ನು ತೆಗೆದು ಕಟ್ಟಿದ್ದ ಹಗ್ಗದ ಮೇಲೆ ಒಣಗಿ ಹಾಕಿದ್ದಳು. ಬೆಳಗಾಗ ಒಗೆದ ಸೀರೆಗಳನ್ನೂ ಬಟ್ಟೆಗಳನ್ನೂ ಅಲ್ಲಿಯೇ ಒಣಗಿ ಹಾಕಿದ್ದರು. ಅವು ಗಾಳಿಗೆ ಪಟಪಟನೆ ಹೊಡೆದುಕೊಳ್ಳುತ್ತಿದ್ದವು. ಹಾಗೆಯೇ ಅವಳ ಮನಸ್ಸೂ ಅಸ್ಥಿರವಾಗಿದ್ದಿತು. ಒಬ್ಬನ ಕಡೆಗೆ ಮನಸ್ಸು ಸಂಪೂರ್ಣವಾಗಿ ವಾಲಿರುವಾಗ ಮತ್ತೊಬ್ಬನನ್ನು ಪ್ರೇಮ ಮಾಡುತ್ತಿರುವಂತೆ ಯಾವ ಹೆಂಗಸು ತಾನೇ ಅಭಿನಯಿಸಬಲ್ಲಳು ? ತಾನೀಗ ಒಬ್ಬನನ್ನು ಪ್ರೇಮ ಮಾಡಿದ್ದಾಳೆ. ಒಬ್ಬನಿಗೆ ಆತ್ಮಸಮರ್ಪಣೆ ಮಾಡಿದ್ದಾಳೆ. ಹಾಗಿರುವಾಗ ಅವನನ್ನು ಬಿಟ್ಟು ಚಿಟ್ಟೆಯಂತೆ ಮತ್ತೊಂದು ಹೂವಿಗೆ ಹಾರಿ ಹೋಗುವುದೇ. ಅದು ಸರಿಯೇ ?

ರಾತ್ರಿ ಎಲ್ಲಾ ವಿಮಲೆಯು ಎಚ್ಚರವಾಗಿಯೇ ಇದ್ದಳು. ಹಿಂದಿನ ದಿನದ ನೆನಪುಗಳೆಲ್ಲಾ ಛಾಯೆ ಛಾಯೆಯಾಗಿ ಅವಳ ಕಣ್ಣು ಮುಂದೆ ಸುಳಿಯುತ್ತಿದ್ದವು. ಈಗ ಬೆಳಗಾದ ಮೇಲೆಯೂ ಆ ಛಾಯೆಯು ವರ್ತುಲಾಕಾರವಾಗಿ ಅವಳ ಕಣ್ಣಿನ ಸುತ್ತಲೂ ಕಟ್ಟಿಕೊಂಡಿದೆ. ರಾತ್ರಿ ಎಲ್ಲಾ ಇದ್ದ

ಆವೇಶವು ಬೆಳಗಾದ ನಂತರವೂ ಇದೆ. ಅದು ಅವಳ ಬಾಯನ್ನು ದ್ರವರಹಿತವಾಗಿ ಮಾಡಿದೆ. ಅವಳ ಹೃದಯವು ಸತತವಾಗಿ ಬಡಿದುಕೊಳ್ಳುವಂತೆ ಮಾಡಿದೆ. ಪ್ರಾತಃಕಾಲ ಅವಳು ಕುಡಿದ ಕಾಫಿಯು ರುಚಿ ಇಲ್ಲದಂತೆ ಮಾಡಿದೆ. ಅವಳ ಬುದ್ಧಿಯು ತೀಕ್ಷ್ಣವಾಗಿಲ್ಲ. ಮಂದವಾಗಿಧೆ. ಹೆಚ್ಚು ಆಲೋಚನೆ ಮಾಡಲಾರದು. ನಟರಾಜನು ಈ ದಿನ ಬರುವುದಾಗಿ ಹೇಳಿದ್ದಾನೆ. ಅಲ್ಲಿಯವರೆವಿಗೆ ಮಾತ್ರ ಯೋಚಿಸಬಲ್ಲದು. ಇಲ್ಲಿಂದ ಮುಂದೆ ಏನೂ ತೋರುವುದಿಲ್ಲ.

ಅವನ ಶಬ್ದವು ಕೇಳಿ ಬಂದಾಗ, ಅವನ ಸಾನ್ನಿಧ್ಯವು ಪ್ರಾಪ್ತವಾದಾಗ ಅವಳಲ್ಲಿಒಂದು ಬಗೆಯ ಸ್ತಬ್ಧತೆಯಾಗುತ್ತದೆ. ಅದು ಸುಖಕರವಾಗುತ್ತದೆ. ಆ ಸುಖಕ್ಕಾಗಿ ಅವಳು ಕಾಯುತ್ತಿದ್ದಾಳೆ.

ಸುಮಾರು ಹತ್ತೂವರೆ ಗಂಟೆಯ ವೇಳೆಗೆ ನಟರಾಜನು ಬಂದನು. ಅಷ್ಟು ಹೊತ್ತಿಗೆ ಹೆಚ್ಚು ಕಡಿಮೆಯಾಗಿ ಮನೆಗೆಲಸಗಳು ಮುಗಿಯುತ್ತವೆ. ಅದನ್ನೂ ಅವನು ಬಲ್ಲನು. ಅವನು ಗೇಟನ ಒಳಗೆ ಎರಡು ಹೆಜ್ಜೆ ಬರುತ್ತಲೇ ಅವಳು ನೋಡಿದಳು. ಮನೆಯ ಪಕ್ಕಕ್ಕೆ ಹೋಗಿ ಕೈಸನ್ನೆ ಮಾಡಿ ಕಳೆದಳು. ಇಬ್ಬರೂ ಹೋಗಿ ಲಾಂಟಾನಾ ಮೆಳೆಯ ಪಕ್ಕದಲ್ಲಿ ಮರೆಯಲ್ಲಿ ಕುಳಿತುಕೊಂಡರು.

ನಟರಾಜನು ಅವಳ ಕಡೆಗೆ ನೋಡಿ " ನಿನಗೆ ಆಯಾಸವಾದ ಹಾಗಿದೆ. ವಿಮಲಾ " ಎಂದಳು.

" ಹೌದು. ನಿನ್ನೆಯ ದಿನ ರಾತ್ರಿಯೆಲ್ಲಾ ನಿದ್ದೆ ಮಾಡಲಿಲ್ಲ "

" ಯಾಕೆ ಮಾಡಲಿಲ್ಲ ?"

ವಿಮಲೆಯು ಎತ್ತ ಕಡೆಗೋ ನೋಡುತ್ತಾ " ಏನೋ ಬರಲಿಲ್ಲ " ಎಂದಳು.

" ನಾನೂ ನಿದ್ದೆ ಮಾಡಲಿಲ್ಲ. ಕಡೆಯಲ್ಲಿ ನೀನೇನೋ ಮಾತನಾಡಿದೆ. ಆದರೆ ಅವೆಲ್ಲವೂ ಅರ್ಥವಿಲ್ಲದ ಮಾತುಗಳು. ನಿನ್ನೆ ನಾನು ಇಲ್ಲಿಗೆ ಬಂದಿದ್ದೆ. ಬಾಗಿಲಲ್ಲಿ ಕಾರು ನಿಂತಿದ್ದಿತು. ವೆಂಕಟರಾಯನಿರಬಹುದೆಂದು ಹಾಗೆಯೇ ಹೊರಟು ಹೋದೆ. ವೆಂಕಟರಾಯನಲ್ಲವೇ ಬಂದಿದ್ದುದು ?"

" ಹೌದು–"

" ನಿನ್ನೆಯ ದಿನ ನೀನು ಹೇಳಿದ ವಿಷಯವನ್ನು ಬಹಳ ಆಲೋಚನೆ ಮಾಡಿದೆ. ಜೀವನದಲ್ಲಿ ಆಗಾಗ ಹಾಗೆ ಆಗುವುದುಂಟು. ಅದರಿಂದ ಏನೂ ವ್ಯತ್ಯಾಸವಾಗುವುದಿಲ್ಲ "

" ಏನು ವ್ಯತ್ಯಾಸವಾಗುವುದಿಲ್ಲವೆನ್ನುತ್ತೀರಿ ?

" ಹಾಗಾದ ಮಾತ್ರಕ್ಕೆ ಅವನನ್ನೇ ಮದುವೆ ಮಾಡಿಕೊಳ್ಳಬೇಕು ಎಂಬುದೇನು ?"

ವಿಮಲೆಯು ಹೇಳುವುದೋ ಬೇಡವೋ ಎಂದು ಆಲೋಚನೆ ಮಾಡಿ, ಕಡೆಗೆ "ಗೊತ್ತಾದ ಮದುವೆಗಳನ್ನು ಮುರಿಯುವುದು ನಿಮಗೆ ಸುಲಭವಾಗಿ ಕಂಡು ಬರುತ್ತದೆಯೋನೋ ?" ಎಂದಳು.

" ನಾನು ಹಾಗೆನ್ನುವುದಿಲ್ಲ. ಆದರೆ ಶಕುಂತಲೆಯ ಮದುವೆಯು ಗೊತ್ತಾದ ತರಹವನ್ನು ನಾನು ನಿನಗೆ ಆ ದಿನವೇ ಹೇಳಿದ್ದೇನೆ. ಅದನ್ನೇ ತಾನೇ ನೀನು ಹೇಳುತ್ತಿರುವುದು "

"ಅದನ್ನಲ್ಲ........"

" ಓಹೋ ! ಅದಕ್ಕಿಂತ ಹಿಂದಿನದನ್ನೇನು ? ಸರಿ. ನಿಜ. ನನಗೆ ಮದುವೆಯಾಗಿತ್ತು. ನಾನು ನನ್ನ ಹೆಂಡತಿಯನ್ನು ಪ್ರೀತಿಸಿದ್ದೆ. ಅವಳು ನನ್ನನ್ನು ಪ್ರೀತಿಸಿದ್ದಳೋ ಇಲ್ಲವೋ ನನಗೆ ತಿಳಿಯದು. ಆಗ ಕನ್ನಡ ಪುಸ್ತಕಗಳಲ್ಲಿ ಸಂಪಾದನೆ ಇರಲಿಲ್ಲ. ನಮ್ಮ ತಂದೆಯು ಬದುಕಿದ್ದುದರಿಂದ ನನಗೆ ಆಸ್ತಿಯ ಮೇಲಿನ ಅಧಿಕಾರವು ಸಿಕ್ಕಿರಲಿಲ್ಲ. ನನ್ನ ಅತ್ತೆಗೆ ಬಹಳ ಹಣದಾಸೆ. ಆಕೆ ಬಯಸುತ್ತಿದ್ದ ಅಂತಸ್ತಿನಲ್ಲಿ ಆಕೆಯನ್ನೂ ಆಕೆಯ ಮಗಳನ್ನೂ ಇಡಲಾರದೇ ಹೋದೆ. ಒಂದು ದಿನ ತಾಯಿಮಕ್ಕಳಿಬ್ಬರೂ ಹೊರಟು ಹೋದರು. ಮಗಳೇ ಯಾರೊಡನೆಯೋ ಹೊರಟು ಹೋದಳೋ ಅಥವಾ ಮಗಳು ಓಡಿ ಹೋಗುವಂತೆ ತಾಯಿಯೇ ಮಾಡಿದಳೋ ನನಗೆ ಗೊತ್ತಿಲ್ಲ. ಶಕುಂತಲೆಗೆ ನಾನು ಮೊದಲೇ ಈ ವಿಷಯವನ್ನು ಹೇಳಿದ್ದೇನೆ "

" ಶಾಸ್ತ್ರೋಕ್ತವಾಗಿ ಮದುವೆಯಾಗದಿದ್ದರೂ ನಮಗೆ ಮದುವೆ ಯಾಗಿದೆ ಎಂದು ಇಬ್ಬರೂ ಭಾವನೆ ಮಾಡುತ್ತಿದ್ದೇವೆ. ಈ ಸಂಸಾರದಲ್ಲಿ ನಾನಿನ್ನೂ ಇರಬೇಕಾಗಿದೆ. ಶಾಮಣ್ಣನವರ ಮಗಳನ್ನು ಮದುವೆಯಾಗು

ವುದಿಲ್ಲವೆಂದು ಅವರಿನ್ನೂ ಹೇಳಿಲ್ಲ. ಅಷ್ಟರಿಂದ ಮಾತ್ರ ನಾವು ತಡೆದಿದ್ದೇವೆ. ಇಲ್ಲದಿದ್ದರೆ ಇಷ್ಟು ಹೊತ್ತಿಗಾಗಲೇ ನಾವು ಬೇರೆ ಸಂಸಾರವನ್ನು ಹೂಡುತ್ತಿದ್ದೆವು "

ನಟರಾಜನು ಗಳಿಗೆಯ ಹೊತ್ತು ದಿಗಂತದ ಕಡೆಗೆ ನೋಡುತ್ತಿದ್ದನು. ದೂರದ ಮರಗಳು ಸ್ವಚ್ಛವಾದ ಆಕಾಶಕ್ಕೆ ಅಡ್ಡಲಾಗಿ ಕಪ್ಪಗೆ ಕಂಡು ಬರುತ್ತಿದ್ದವು.

" ಈಗ ನೀವಿಬ್ಬರೂ ಗಂಡ ಹೆಂಡಿರ ಹಾಗೆ ಎನ್ನುತ್ತೀಯೇನು "

" ಹೌದು. ಹಾಗೆಯೇ ಇದೆ "

" ಅದರಲ್ಲಿ ಯಾವ ಬದಲಾವಣೆಗೂ ನೀನು ಸಿದ್ಧವಾಗಿಲ್ಲವೇನು ?"

ಅವಳು ಹೂ ಎಂದಳು· ಹೂ ಎಂಬುದು ಸಿದ್ಧವಾಗಿಲ್ಲ– ಎಂದು ಹೇಳುವಂತೆ ಇದ್ದಿತು.

" ಸರಿ. ನಾನು ಈ ಮಧ್ಯಾಹ್ನ ಶಕುಂತಲೆಯೊಡನೆ ಮಾತನಾಡುತ್ತೇನೆ. ನನ್ನ–ಅವಳ ಸಂಬಂಧವು ತೀರಿದಂತೆಯೇ. ಅದು ತಮಾಷೆಯಾಗಿ ಮೊದಲಾಯಿತು.ತಮಾಷೆಯಾಗಿಹಾಗೆಯೇ ಮುಕ್ತಾಯವಾಯಿತು. ಈ ದಿನ ರಾತ್ರಿ ಖಟುಮುಂಡುವಿಗೆ ಪ್ರಯಾಣ ಮಾಡುತ್ತೇನೆ. ನನ್ನ ಸ್ನೇಹಿತರು ಕೆಲವರು ಹಿಮಾಲಯದಕಾಂಚನಗಂಗಾ ಶಿಖರಾರೋಹಣವನ್ನು ಮಾಡುತ್ತಾರೆ. ಆಹ್ವಾನವು ಬಂದಿದ್ದಿತು. ಹೋಗುವುದೋ ಬೇಡವೋ ಎಂದು ಯೋಚನೆ ಮಾಡುತ್ತಿದ್ದೆ. ಈಗ ಹೋಗುತ್ತೇನೆ ನಾನು ನಿನ್ನನ್ನು ಪುನಃ ನೋಡುವುದಿಲ್ಲ. ನೀನು ಯಾವ ಬದಲಾವಣೆಗೂ ಒಪ್ಪಲಿಲ್ಲ. ಆದರೆ ಈ ಪ್ರಪಂಚದಲ್ಲಿ ಯಾವುದೂ ಸ್ಥಿರವಾಗುವುದಿಲ್ಲ ನೀನು ಹೇಗೆ ಆಗ ಬೇಕೆಂದಿದ್ದೆಯೋ ಹಾಗೆಯೇ ಆಗಲಿ "

ಈ ಮಾತುಗಳನ್ನು ಹೇಳುತ್ತಿದ್ದಾಗ ನಟರಾಜನು ಅವಳ ಕೈಯನ್ನು ಹಿಡಿದುಕೊಂಡಿದ್ದನು. ಮರು ಕ್ಷಣದಲ್ಲಿಯೇ ಅವಳನ್ನು ಆಲಂಗಿಸಿ ಚುಂಬಿಸಿದನು. ಅನಂತರ ಅವಳನ್ನು ಬಿಟ್ಟು ಹೊರಟು ಹೋದನು. ಅವನು ಹೋಗುವುದನ್ನೇ ವಿಮಲೆಯು ನೋಡುತ್ತಿದ್ದಳು. ಅಚಲವಾಗಿ, ಮೌನವಾಗಿ ನೋಡುತ್ತಾ ನಿಂತಿದ್ದಳು.

ಅವನು ಬೇಲಿಯಿಂದ ಹೊರಗೆ ಹೋದನಂತರ ವಿಮಲೆಯು ಗೇಟು

ಮುಂದೆ ಹೋಗಿ ನಿಂತು ನೋಡಿದಳು. ಅವನು ಬಸ್ಸಿನಲ್ಲಿ ಬಂದಿದ್ದ ಎಂದು ಕಾಣುತ್ತದೆ. ಬಸ್ ಸ್ಟ್ಯಾಂಡ್ ಕಡೆಗೆ ಹೋಗುತ್ತಿದ್ದನು. ಪುನಃ ತಿರುಗಿ ನೋಡಲಿಲ್ಲ. ಅವನು ಕಣ್ಮರೆಯಾದ ನಂತರ ವಿಮಲೆಯು ಮನೆಗೆ ವಾಪ್ಸು ಹೋದಳು.

ವಿಮಲೆಯು ಒಳಗೆ ಹೋಗುವುದರೊಳಗೆ ವಾಸುವು ಸ್ಕೂಲಿಗೆ ಹೊರಟು ಹೋಗಿದ್ದನು. ಶೀಲೆ ವರದೆಯರು ಊಟ ಮಾಡಿ ಮಲಗಿದ್ದರು. ಸಾವಿತ್ರಮ್ಮನವರ ಗೊರಕೆಯ ಶಬ್ದವು ಕೇಳಿ ಬರುತ್ತಿದ್ದಿತು.

ಕಾಲು ಸಪ್ಪಳವನ್ನು ಕೇಳಿ ಶೀಲೆಗೆ ಎಚ್ಚರವಾಯಿತು. ಅವಳು "ಅಕ್ಕಾ! ಎಲ್ಲಿ ಹೋಗಿದ್ದೆ. ನಾವು ಕಾದು ಕಾದು ಊಟ ಮಾಡಿದೆವು. ಏಳು, ಬಡಿಸುತ್ತೇನೆ" ಎಂದು ಮೇಲೇಳುವುದಕ್ಕೆ ಹೋದಳು.

ವಿಮಲೆಯು "ನೀನು ಮಲಗಿಕೋ, ಶೀಲ. ನಾನೇ ಬಡಿಸಿ ಕೊಳ್ಳುತ್ತೇನೆ" ಎಂದಳು.

ತಂಗಿಯು ಮಾತನಾಡಿದರೂ ಅವಳಿಗೆ ನಿದ್ದೆಯ ಕಣ್ಣು. ಅವಳು ಹಾಗೆಯೇ ಮಲಗಿಕೊಂಡಳು. ಅಕ್ಕನೇ ಬಡಿಸಿಕೊಂಡು ಊಟ ಮಾಡಿ ತಂಗಿಯರ ಪಕ್ಕದಲ್ಲಿ ಚಾಪೆಯ ಮೇಲೆ ಬಿದ್ದುಕೊಂಡಳು.

ಅವಳಿಗೆ ನಿದ್ದೆಯು ಬರಲಿಲ್ಲ. ಹೃದಯವು ಬಹಳ ಭಾರವಾಗಿದ್ದಿತು. ಇನ್ನು ಕೆಲವು ಗಂಟೆಗಳಲ್ಲಿ ನಟರಾಜನು ಹೊರಟು ಹೋಗುತ್ತಾನೆ. ಪುನಃ ಅವನನ್ನು ನೋಡುವುದು ಸಾಧ್ಯವಿಲ್ಲ. ಅವನನ್ನು ನೆನೆಸಿಕೊಳ್ಳುತ್ತಿದ್ದ ಹಾಗೆಯೇ ಅವನು ಹಿಮಾಲಯದ ಮಂಜಿನ ಗಡ್ಡೆಗಳಲ್ಲಿ ಲೀನವಾಗಿ ಹೋದಂತೆ ಕಂಡಿತು.

ಕೂಡಲೇ ಎದ್ದು ಕುಳಿತುಕೊಂಡಳು. ಅವಳ ಮನಸ್ಸು ಇಲ್ಲ. ಆಗು ವುದಿಲ್ಲ"ಎಂದು ಹೇಳಿತು. ನಟರಾಜನು ಕಣ್ಮರೆಯಾಗುವುದೇ? ಅದಕ್ಕೆ ಅವಕಾಶವನ್ನು ಕೊಡಕೂಡದು. ಈ ದಿನ ರಾತ್ರಿಯೇ ಹೋಗಿ ಅವನನ್ನು ಹಿಡಿಯಬೇಕು. ಎಲ್ಲಿಯೂ ಹೊರಟು ಹೋಗಲು ಬಿಡಕೂಡದು. ಅವನು ಎಲ್ಲಿಯೋ ಹೋಗುವುದಕ್ಕೆ ಅವಕಾಶ ಕೊಡುವುದೇ? ಅಲ್ಲಿ ಮಲಗಿರುವ ತಂಗಿಯರು, ಅತ್ತೆ ಇವರು ಕಣ್ಣಿಗೆ ಬಿದ್ದರು. ಮನೆ, ಪಾತ್ರೆ ಪಡಗಗಳು, ಸಾಮಾನುಗಳು ಕಂಡುವು. ಅವೆಲ್ಲವೂ ಯಾರವೋ ಎಂಬಂತೆ ತೋರಿತು.

ತಾನು ಎಲ್ಲಿಯೋ ಇರುವಂತೆಯೂ ವೆಂಕಟರಾಯನು ಬೀದಿಯಲ್ಲಿ ಹೋಗು ವವನಂತೆಯೂ ಭಾಸವಾಯಿತು.

ಸಂಜೆಯು ಸಮೀಪಿಸಿದಂತೆ ವಿಮಲೆಯು ಎದ್ದು ಟೀಮಾಡಿದಳು. ಮನೆಯಲ್ಲಿದ್ದವರಿಗೆ ಕೊಟ್ಟು ತಾನೂ ಕುಡಿದಳು. ಸ್ಕೂಲಿನಿಂದ ಬಂದ ವಾಸುವಿಗೆ ತಿಂಡೀ ಕೊಟ್ಟು ಟೀ ಬಿಸಿ ಮಾಡಿ ಕೊಟ್ಟಳು.

ಆದರೆ ಅವಳ ಮನಸ್ಸು ಮಾಡುವ ಕೆಲಸದಲ್ಲಿರಲಿಲ್ಲ. ಅವಳೇನೋ ಮಾಡುತ್ತಿದ್ದರೆ ಅದೆಲ್ಲೋ ಅಲೆಯುತ್ತಿದ್ದಿತು.

ವೆಂಕಟರಾಯನು ಕತ್ತಲು ಮಾಡುವ ವೇಳೆಗೆ ಬಂದನು.

ಅವನನ್ನು ಕಂಡೊಡನೆಯೇ ವಿಮಲೆಯು " ನಾನು ನಿಮ್ಮೊಡನೆ ಸ್ವಲ್ಪ ಜರೂರಾಗಿ ಮಾತನಾಡ ಬೇಕಾಗಿದೆ " ಎಂದು ಹೇಳಿದಳು.

ಇಬ್ಬರೂ ತೋಟದಲ್ಲಿದ್ದ ಬಂಡೆಯೊಂದರ ಮೇಲೆ ಹೋಗಿ ಕುಳಿತು ಕೊಂಡರು.

ವೆಂಕಟರಾಯನಿಗೆ ವಿಮಲೆಯು ಎಂದಿನಂತೆ ಕಂಡು ಬರಲಿಲ್ಲ. ಅವಳಲ್ಲಿ ಏನೋ ಅಸಹಜತೆಯು ಕಂಡು ಬಂದಿತು.

ಅವನು " ವಿಮಲಾ. ನೀನೇಕೆ ಏನೋ ಒಂದು ವಿಧವಾಗಿದ್ದೀಯೆ ? ನೀನು ಈ ರೀತಿಯಾಗಿರುವುದು ನನಗೆ ಬಹಳ ದುಃಖವಾಗುತ್ತದೆ. ನಾನು ನಿನ್ನನ್ನು ಎಷ್ಟು ಪ್ರೀತಿ ಮಾಡುತ್ತಿದ್ದೇನೆ.–ಎಂಬುದನ್ನು ಬಲ್ಲೆಯಾ ?" ಎಂದನು.

" ಅದೇ ಈಗ ಬಂದಿರುವ ತೊಂದರೆ "

" ಹಾಗೆಂದರೆ ನನಗೆ ಅರ್ಥವಾಗಲಿಲ್ಲ "

" ಬನ್ನಿ. ಅತ್ತ ಕಡೆ ಕುಳಿತು ಕೊಂಡು ಮಾತನಾಡೋಣ "

" ಅಷ್ಟೇ ಅಲ್ಲ. ನಾನು ನನ್ನ ಪ್ರಿಯೆಯಿಂದ ಚುಂಬನವನ್ನು ಸ್ವೀಕಾರ ಮಾಡ ಬೇಕಾಗಿದೆ. ಅತ್ತ ಕಡೆಗೇ ಹೋಗೋಣ "

ಇಬ್ಬರೂ ಸ್ವಲ್ಪ ದೂರನಡೆದುಹೋಗಿ ಮರೆಯಲ್ಲಿ ಕುಳಿತುಕೊಂಡರು. ವೆಂಕಟರಾಯನು ವಿಮಲೆಯ ಹೆಗಲಿನ ಮೇಲೆ ಕೈ ಹಾಕಿದನು. ಆದರೆ ಅದರಿಂದ ಇಬ್ಬರಿಗೂ ಸುಖವಾಗುವಂತಿರಲಿಲ್ಲ. ಅವಳು ಸೆಡೆದುಕೊಂಡು ಕುಳಿತಿದ್ದಳು.

" ನಾನು ನಿಮ್ಮನ್ನು ಪ್ರೀತಿ ಮಾಡಿದಾಗ ನನಗೆ ಪ್ರೇಮವೆಂದರೇನೋ ಗೊತ್ತಿರಲಿಲ್ಲ. ಅದರಿಂದ ಪ್ರಾಪ್ತವಾಗುವ ಜವಾಬ್ದಾರಿಗಳೂ ಗೊತ್ತಿರಲಿಲ್ಲ. ಆಗ ತಾನೇ ನಮ್ಮ ತಾಯಿ ಸತ್ತು ಹೋಗಿದ್ದರು. ನಾವು ಮನೆಯನ್ನು ಬದಲಾಯಿಸಿದೆವು. ಏನೇನೋ ತೊಂದರೆಗಳು ಬಂದುವು. ಆ ಜಂಜಾಟ ದಲ್ಲಿ ಯಾವುದನ್ನೂ ಸರಿಯಾಗಿ ಅರ್ಥ ಮಾಡಿಕೊಳ್ಳಲಾಗಲಿಲ್ಲ "

" ಅ ದಿ ರ ಲಿ, ಒಂದು ಮುತ್ತು ಕೊಡು, ಚಿನ್ನ. ಇದೆಲ್ಲಾ ಏನು ಮಾತು ?"

ಅವಳು ಚುಂಬಿಸಲಿಲ್ಲ. ಮಾತೂ ಆಡಲಿಲ್ಲ.

" ನೀನು ಏನೇನೋ ಹೇಳುತ್ತಿದ್ದೀಯೆ, ವಿಮಲಾ. ಆದರೆ ನನಗೆ ಹಾಗೆಲ್ಲಾ ಇಲ್ಲ. ಮೊದಲು ನಾನು ನಿನ್ನನ್ನು ಎಷ್ಟು ಪ್ರೀತಿ ಮಾಡುತ್ತಿ ದ್ದೆನೋ ಈಗ ಅವಕ್ಕೆ ಹತ್ತರಷ್ಟು ಹೆಚ್ಚಾಗಿ ಪ್ರೀತಿ ಮಾಡುತ್ತಿದ್ದೇನೆ"

" ನಾನು ಹೇಳುವುದು ನಿಮಗೆ ಅರ್ಥವಾಗುವುದಿಲ್ಲ. ಈಗ ಎಷ್ಟೋ ಕಾಲವು ಕಳೆದಿದೆ. ಎಷ್ಟೋ ಬದಲಾವಣೆಗಳು ಆಗಿವೆ. ನನ್ನಲ್ಲಿಯೂ ಬದ ಲಾವಣೆಯಾಗಿದೆ ಈಚೆಗೆ ನೀವು ಚಿಕ್ಕಮಗಳೂರಿಗೆ ಹೋ ೧ ದಿ ರ ಲ್ಲಾ, ಅಂದಿನಿಂದ ವಿಪರೀತ ವ್ಯತ್ಯಾಸವಾಗಿದೆ. ನಿಮಗೆ ನಿ ಜ ವ ನ್ನು ಹೇಳದೇ ಮುಚ್ಚಿಡುವುದರಿಂದ ಅಪರಾಧ ಮಾಡಿದವಳಂತೆ ನನಗೆ ಭಾಸವಾಗುತ್ತವೆ"

ಅವನು ಅವಳ ಹೆಗಲ ಮೇಲಿದ್ದ ಕೈ ತೆಗೆದು, ಅವಳ ಮುಖವನ್ನು ಸರಿಯಾಗಿ ನೋಡುತ್ತಾ, ಧ್ವನಿಯನ್ನು ಬದಲಾಯಿಸಿಕೊಂಡು ' ನನಗೆ ಅರ್ಥವಾಗಲಿಲ್ಲ. ನೀನೀಗ ನನ್ನನ್ನು ಪ್ರೇಮ ಮಾಡುತ್ತಿಲ್ಲವೆಂದು ಹೇಳು ತ್ತಿದ್ದೀಯಾ ?" ಎಂದನು.

" ಹಾಗಲ್ಲ. ನಾನು ನಿಮ್ಮನ್ನು ಯಾವಾಗಲೂ ವಿಶ್ವಾಸ ಮಾಡು ತ್ತೇನೆ. ನಿಮ್ಮ ಸ್ನೇಹಕ್ಕಾಗಿ ಕೃತಜ್ಞಳಾಗಿರುತ್ತೇನೆ. ಆದರೆ ಅದು ಕೇವಲ ಸ್ನೇಹ. ಮದುವೆಯಾಗುವುದು ನನಗೆ ಇಷ್ಟವಿಲ್ಲ ನಾವು ಪ್ರ ಣ ಯ ಸಂಬಂಧವನ್ನು ಇಟ್ಟುಕೊಂಡಿದ್ದೆವೆಂಬ ವಿಷಯವನ್ನು ನೆನೆಸಿಕೊಳ್ಳುವು ದನ್ನು ಸಹ ನನ್ನ ಮನಸ್ಸು ಒ ಪ್ಪು ವು ದಿ ಲ್ಲ ಅದನ್ನು ಜ್ಞಾಪಕ ಮಾಡಿ ಕೊಂಡರೆ ನನಗೆ ತಲೆಯ ನೋವು ಬಂದಂತೆ ಆಗುತ್ತದೆ. ನಾನು ಮೊದಲಿ ನಂತೆ ಸ್ವತಂತ್ರಳಾಗಲು ಬಯ——"

ಅವಳು ಮಾತನ್ನು ಅರ್ಧದಲ್ಲಿಯೇ ನಿಲ್ಲಿಸಿದಳು.

ಅವನು ನಗುತ್ತಾ "ಹುಚ್ಚಿ. ಯಾಕೆ, ನನ್ನನ್ನು ಕಂಡರೆ ಭಯವಾಗುತ್ತದೆಯೇ ?" ಎಂದನು.

ಅವಳಾ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟವಾಯಿತು. ತೊದಲುತ್ತ "ಇಲ್ಲ. ನನಗೆ ಮೊದಲಿನಂತೆ ಸ್ವತಂತ್ರಳಾಗಬೇಕೆಂದು ತೋರು——" ಎಂದಳು.

"ಯಾಕೆ ನಿನ್ನ ಗಂಡನ ವಿಷಯದಲ್ಲಿ ನಿನಗೆ ಬೇಸರಿಕೆಯು ಬಂದಿತೇ?"

"ಹಾಗಲ್ಲ. ನನ್ನ ಮನಸ್ಸು ಮತ್ತಾವನಲ್ಲಿಯೋ ಅನುರಕ್ತವಾದಂತೆ ಕಂಡುಬರುತ್ತಿದೆ. ವಿಚಿತ್ರವಾದ ಅದ್ಭುತವಾದ, ರೀತಿಯಿಂದ ಆ ಪ್ರೇಮವು ನನ್ನನ್ನು ಆಕ್ರಮಣ ಮಾಡುತ್ತಿದೆ. ನಾನು ನಿಮಗೆ ತಪ್ಪಾಗಿ ನಡೆಯಲು ನನ್ನ ಮನ———"

ಅವಳು ತಾನೇನು ಮಾತನಾಡ ಬೇಕೆಂಬುದನ್ನು ನಿರ್ಧರಿಸಿಕೊಂಡಿದ್ದಳು. ವಾಕ್ಯ ವಾಕ್ಯಗಳನ್ನು ಮನನ ಮಾಡಿ ಗಟ್ಟಿ ಮಾಡಿಕೊಂಡಿದ್ದಳು. ಆದರೆ ಆ ವಾಕ್ಯ ಸರಣಿಯು ಅರ್ಧದಲ್ಲಿಯೇ ನಿಲ್ಲುತ್ತಿದ್ದಿತು

"ನೀನು ನಟರಾಜನನ್ನು ಪ್ರೇಮ ಮಾಡುತ್ತಿದ್ದೀ, ಏನು ?"

"ಹೌದು. ನಾವು ಪರಸ್ಪರ ಪ್ರೇಮ ಮಾಡುತ್ತಿದ್ದೇವೆ" ಎಂದು ವಿಮಲೆಯು ದಿಟ್ಟತನದಿಂದ ಹೇಳಿದಳು.

"ನಾನು ಊರಿನಲ್ಲಿಲ್ಲದಿದ್ದಾಗ———" ಎಂದೇನೋ ಹೇಳಲು ಹೊರಟದ್ದವನು ತಡೆದು "ವಿಮಲಾ. ನೀನು ಭ್ರಾಂತಳಾಗಿದ್ದೀಯೆ. ನಿಜವಾಗಿಯೂ ಅವನು ನಿನ್ನನ್ನು ಪ್ರೇಮ ಮಾಡುತ್ತಿದ್ದಾನೆಯೇ ?" ಎಂದನು.

ಮಾತು ಕಡೆಗೆ ಬಂದಿತೆಂದು ತೃಪ್ತಿಯಿಂದ ವಿಮಲೆಯು ಹೌದೆಂದು ಹೇಳಿದಳು.

"ಅವನು ತಾನು ಪ್ರೀತಿಸುತ್ತಿರುವುದಾಗಿ ಹೇಳಿದನೇನೋ ?"

"ಸ್ಪಷ್ಟವಾಗಿ ಹೇಳಲಿಲ್ಲ. ಆದರೆ ನನಗೆ ಹಾಗೆ ತೋರಿತು"

"ನಾವು ಪರಸ್ಪರ ಪ್ರಣಯಿಗಳೆಂಬುದನ್ನು ಅವನು ಬಲ್ಲನೇನು ?"

"ಈ ದಿನ ಬೆಳಗಾಗ ಅವನಿಗೆ ಹೇಳಿದೆ"

" ನಾವು ಇದನ್ನು ಯಾರಿಗೂ ಹೇಳುವುದಿಲ್ಲವೆಂದು ನಿರ್ಧರ ಮಾಡಿ ಕೊಂಡಿದ್ದೆವಲ್ಲವೇ ?"

" ಹೌದು. ಆದರೆ ನಾನು ಹೇಳಲೇಬೇಕಾಗಿ ಬಂದಿತು "

" ಅವನು ಇದನ್ನೆಲ್ಲಾ ಡಂಗೂರ ಹೊಡೆದುಕೊಂಡು ಬರುತ್ತಾನೆ. ಶಕುಂತಲೆಗೂ ಇತರರಿಗೂ ಹೇಳುತ್ತಾನೆ "

" ಅವರು ಶಕುಂತಲೆಯನ್ನು ಮದುವೆಯಾಗುವುದಿಲ್ಲ "

" ನಿನಗೆ ಯಾರು ಹೇಳಿದರು ?"

" ಈ ದಿನ ಬೆಳಗಾಗ ಅವರೇ ಹೇಳಿದರು "

" ಅವನು ಹಾಗೆ ಹೇಳದೇ ಇನ್ನೇನು ತಾನೇ ಹೇಳುತ್ತಾನೆ. ಈ ದಿನ ಶಕುಂತಲೆಯು ನಮ್ಮ ಮಾವನ ಮನೆಗೆ ಬಂದಿದ್ದಳು. ಅವಳು ಖುಷಿಯಾಗಿದ್ದಳು. ಲಲಿತಮ್ಮನವರು ತನಗಾಗಿ ಮದುವೆ ನಿಲ್ಲುವುದು ಬೇಡವೆಂದು ಹೇಳಿದರಂತೆ. ಸದ್ಯದಲ್ಲಿಯೇ ತಮಗೆ ಮದುವೆಯಾಗುವುದೆಂದು ಹೇಳಿದಳು. ವಿಮಲಾ, ನೀನು ಆ ನಟರಾಜನನ್ನು ಅರ್ಥ ಮಾಡಿಕೊಂಡಿಲ್ಲ. ಅವನು ಕಾಮಿ. ನೋಡಿದ ಹೆಣ್ಣುಗಳೆಲ್ಲರೂ ಬೇಕೆನ್ನುತ್ತಾನೆ. ಮೊದಲ ಹೆಂಡತಿಯಲ್ಲಿ ಅವನಿಗಿದ್ದಷ್ಟು ಪ್ರೇಮವೇ ಶಕುಂತಲೆಯಲ್ಲಿರುವುದು. ಶಕುಂತಲೆಯಲ್ಲಿರುವಷ್ಟು ಪ್ರೇಮವೇ ನಿನ್ನಲ್ಲಿರುವುದು. ಅಂತಹ ಜನಗಳು ಹಾಗೆಯೇ ಇರುವುದು. ಕೂಡಿದವಳೊಡನೆ ಬಾಳಲಾರದೇ ಬಿಟ್ಟು ಬಂದ. ಶಕುಂತಲೆಯನ್ನು ಮದುವೆಯಾಗಲು ಒಪ್ಪಿಕೊಂಡ. ಈಗ ಅವಳನ್ನೂ ಬಿಟ್ಟು ನನ್ನ ಚಿನ್ನಳ ಮೇಲೆ ಕಣ್ಣು ಹಾಕಿದ್ದಾನೆ "

" ನಾವು ಪ್ರೇಮ ಮಾಡುತ್ತಿದ್ದೇವೆಂಬುದು ಅವರಿಗೆ ಗೊತ್ತಿರಲಿಲ್ಲ "

" ಗೊತ್ತಿದ್ದರೂ ಅಷ್ಟೆ ! ಅವನು ಸೇದುವ ಸಿಗರೇಟಿನ ತುಂಡು ಬಿಸಾಡಿದಂತೆ ಕೆಲಸವಾದ ನಂತರ ಹೆಣ್ಣುಗಳನ್ನು ಬಿಸಾಡುತ್ತಾನೆ. ಅಬ್ಬಾ! ಎಷ್ಟು ಕೆಟ್ಟ ಜನ. ಇಂತಹವರಿಂದ ಎಷ್ಟು ಮಂದಿ ಹೆಂಗಸರು ಹಾಳಾಗುತ್ತಾರೆ. ನಿನ್ನನ್ನು ಮೋಸ ಮಾಡಲು ಬಲೆ ಹಾಕಿದ್ದಾನೆ, ಚಿನ್ನ. ನೀನು ಅವನನ್ನು ಮರೆತುಬಿಡು "

ಅವಳು ಗದ್ಗದ ಕಂಠದಿಂದ " ಅದು ಅಸಾಧ್ಯ. ನಾನು ನಿಮ್ಮನ್ನು ವಿಶ್ವಾಸ ಮಾಡುತ್ತೇನೆ. ಆದರೆ ಅದು ಪ್ರೇಮವಲ್ಲ. ನಾನು ನಿಮ್ಮ ಹೆಂಡತಿ

ಎಂದು ಭಾವನೆ ಮಾಡಲಾರೆ. ನಾವು ಸ್ನೇಹಿತರಾಗಿರೋಣ. ಉಳಿದವು ಗಳೆಲ್ಲವನ್ನೂ ಮರೆತುಬಿಡೋಣ " ಎಂದಳು.

ಸ್ವಲ್ಪ ಹೊತ್ತು ಮೌನವಾಗಿದ್ದರು. ವಿಪರೀತವಾಗಿ ಮಳೆ ಬರುವ ಮೊದಲು ಹೆಚ್ಚು ಸೆಕೆ ಇರುವಂತೆ ಅವನು ಶಾಂತವಾಗಿದ್ದನು.

" ನಿನ್ನನ್ನು ಮದುವೆಯಾಗಿ ನಿನ್ನ ಸರ್ವನಾಶವನ್ನು ಮಾಡುತ್ತಾನೆಯಂತೋ ?"

"ಇಲ್ಲ. ಆ ಮಾತುಗಳೊಂದೂ ಬರಲಿಲ್ಲ. ಅವನೇನೂ ಹೇಳಲಿಲ್ಲ. ನಾನು ಹೇಳುತ್ತಿರುವುದೇ ಬೇರೆ. ಈ ರೀತಿ ಒಬ್ಬನನ್ನು ಪ್ರೇಮ ಮಾಡುತ್ತಾ ಮತ್ತೊಬ್ಬನ ಹೆಂಡತಿಯಾಗಿರುವುದು ಅಸಾಧ್ಯ ಎಂದು ಹೇಳು ತ್ತಿದ್ದೇನೆ "

" ಈಗ ಹಾಗೆನ್ನಿಸುತ್ತಿದೆಯೇನು ?"

" ಹೌದು. ಈ ಸ್ಥಿತಿಗೆ ಏನೆನ್ನಬೇಕೋ ನನಗೆ ಗೊತ್ತಿಲ್ಲ. ಯಾವಾಗಲೂ ನನ್ನ ಶರೀರವು ಕಂಪಿಸುತ್ತಿರುತ್ತದೆ. ಭಯವಾಗುತ್ತಿರುತ್ತದೆ. ಉಗುಳನ್ನು ನುಂಗುವುದಕ್ಕೆ ಸಹ ಆಗುವುದಿಲ್ಲ. ಆಹಾರದಲ್ಲಿ ರುಚಿಯಿಲ್ಲ. ಕಣ್ಣುಗಳು ಒಂದೇ ಸಮನೆ ಉರಿಯುತ್ತಿವೆ. ನಾನು ನಿದ್ದೆ ಮಾಡಿ ಒಂದು ವಾರವಾಯಿತು"

" ಇದು ಪ್ರೇಮವೋ ? ಪ್ರೇಮವು ಇದೇ ರೀತಿಯಾಗಿರುತ್ತದೆಯೋ "

ವಿಮಲೆಯು ವೆಂಕಟರಾಯನು ತನ್ನನ್ನು ದ್ವೇಷಿಸುತ್ತಿದ್ದಾನೆಂದುಕೊಂಡಳು. ಹೆದರಿಸುತ್ತಿದ್ದಾನೆಂದುಕೊಂಡಳು. ಇನ್ನು ಓಂದೆ ಹೋಗಿ ಫಲವಿಲ್ಲ. ಸಂಬಂಧವು ಕಡಿದುಹೋಗುವಂತೆ ಏನಾದರೂ ಮಾತು ಆಡಲೇಬೇಕು.

" ಅದು ಪ್ರೇಮವು ಹೌದೋ, ಇಲ್ಲವೋ, ನನಗಂತೂ ಹಾಗೆ ತೋರು ತ್ತಿದೆ " ಎಂದಳು.

" ನಿನಗೆ ಹಾಗೆ ತೋರುತ್ತದೆ ಎಂದು ನಾನು ನಿನ್ನನ್ನು ತ್ಯಾಗ ಮಾಡಬೇಕೆಂದು ಹೇಳುತ್ತಿದ್ದೀಯಲ್ಲವೇ ?"

" ನೀವು ಹಾಗೆ, ಆ ಧ್ವನಿಯಿಂದ ಮಾತನಾಡಬೇಡಿ. ನಾವು ಮಾಡಿದುದು ಸರಿಹೋಗಲಿಲ್ಲ. ನಾನು ಪ್ರೇಮ ಮಾಡಬಾರದಾಗಿದ್ದಿತು. ಈ

ಸಂಸಾರವನ್ನು ಇಷ್ಟು ಬೇಗ ಬಿಟ್ಟು ಹೋಗುವಂತಹ . ಯೋಚನೆಯನ್ನು ಮಾಡಬಾರದಾಗಿದ್ದಿತು. ಈ ಮನೆಯು ನನ್ನನ್ನು ಈಗಲೇ ಕಳಿಸುವ ಸ್ಥಿತಿಯಲ್ಲಿಲ್ಲ"

ಅವನು ಶಾಂತವಾಗಿ " ವಿಮಲಾ. ಸರಿಯೋ ತಪ್ಪೋ, ನಾವು ಪರಸ್ಪರ ಪ್ರೇಮ ಮಾಡಿದೆವು. ಹೇಗಾದರೂ ನಾವು ಗಂಡ ಹೆಂಡಿರಂತೆ. ಈಗ ನಾವು ಒಬ್ಬರನ್ನು ಮತ್ತೊಬ್ಬರು ಮರೆತರೆ ಅಂತರಾತ್ಮ ಸಾಕ್ಷಿಯಾಗಿ ತಪ್ಪು ಮಾಡಿದ ಹಾಗಾಗುತ್ತದೆ ಬದುಕಿರುವಾಗಲೂ ಸತ್ತ ಮೇಲೂ ಇದಕ್ಕಾಗಿ ಪಶ್ಚಾತ್ತಾಪ ಪಡುವಂತೆ ಆಗುತ್ತದೆ. ಅಂತಹ ಅಧೋಗತಿಯು ನಮಗೆ ಬರದಿರಲೆಂದು ಹಾರೈಸುತ್ತೇನೆ " ಎಂದನು.

ಅವಳು ಉತ್ತರ ಕೊಡಲಿಲ್ಲ.

ಅವನ ಕಣ್ಣುಗಳಲ್ಲಿ ನೀರು ಬರುತ್ತಿತ್ತು. ಅಳುತ್ತಾ ಅವನು " ವಿಮಲಾ. ನನಗೆ ಏನು ಮಾಡಬೇಕೆಂದು ತೋರುತ್ತಾ ಇಲ್ಲ. ಏನೇ ಆಗಬಹುದು. ಆದರೆ ಹೀಗಾಗುತ್ತದೆಂದು ನಾನು ಯೋಚಿಸಿರಲಿಲ್ಲ. ನಮ್ಮ ಸೋದರ ಮಾವನ ಐಶ್ವರ್ಯ ಸಿಗುವುದಿಲ್ಲವೆಂದು ಗೊತ್ತಾದಾಗ ನನಗೆ ದುಃಖವಾಗಲಿಲ್ಲ. ನಾಳೆ ಕಡುಬಡವನಾಗಿ ಬದುಕಬೇಕಾಗಿ ಬರಬಹುದು. ಅದಕ್ಕೂ ನಾನು ಹೆದರುವುದಿಲ್ಲ. ಆದರೆ--ಆದರೆ ನೀನು ಹೇಳುತ್ತಿರುವುದು ನನ್ನ ಹೃದಯವನ್ನು ಛೇದಿಸುತ್ತಾ ಇದೆ "

ಅವರಾರೂ ಮಾತನಾಡಲಿಲ್ಲ. ಕತ್ತಲಾಗುತ್ತ ಬಂದಿತ್ತು. ಚಳಿಯಾಗಿತ್ತು. ಆಕಾಶದಲ್ಲಿ ನಕ್ಷತ್ರಗಳು ಹುಟ್ಟುತ್ತಿದ್ದವು.

ಅವನು "ವಿಮಲಾ. ಇದುವರೆವಿಗೆ ನಮ್ಮ ಸಂಬಂಧವನ್ನು ನಾವು ರಹಸ್ಯವಾಗಿಟ್ಟಿದ್ದೆವು. ಇನ್ನೂ ಕೆಲವು ದಿನಗಳು ಹೀಗೆಯೇ ಇಡಬೇಕು. ಇಷ್ಟರಲ್ಲಿಯೇ ನಮ್ಮ ಸೋದರ ಮಾವನ ಷಷ್ಠ್ಯಪೂರ್ತಿ ಶಾಂತಿಯು ನಡೆಯುತ್ತದೆ. ಅದಾಗುವವರೆವಿಗೆ ಯಾವ ಗಲಾಟೆಗಳೂ ಆಗುವುದು ಬೇಡ" ಎಂದನು.

ವೆಂಕಟರಾಯನು ಮೇಲೆದ್ದನು. ವಿಮಲೆಯೂ ಮೇಲೆದ್ದು ನಿಂತುಕೊಂಡಳು.

ಮನೆಯ ಕಡೆಗೆ ಹೋಗುತ್ತಾ ಅವನು " ನಾವು ಒಬ್ಬರನ್ನೊಬ್ಬರು ಮರೆತುಬಿಡುವುದು ಸಾಧ್ಯವಿಲ್ಲ, ವಿಮಲಾ. ನಟರಾಜನ ವಿಷಯವನ್ನು ಮರೆತುಬಿಡು. ನಾನು ನಿನ್ನನ್ನು ಒಂದು ಬಾರಿಯಲ್ಲ, ಹತ್ತು ಬಾರಿ ಪರಿತ್ಯಾಗ ಮಾಡಿದರೂ ಅವನು ನಿನ್ನನ್ನು ಮದುವೆಯಾಗುವುದಿಲ್ಲ. ನಮ್ಮ ಮದುವೆ, ನಾವು ಸಂಸಾರ ಹೂಡುವುದು, ಇವುಗಳನ್ನು ನಿನಗೆಷ್ಟು ದಿನಗಳು ಬೇಕೋ ಅಷ್ಟು ದಿನಗಳು ಮುಂದೆ ಹಾಕೋಣ. ಅದು ಬೇರೆಯ ವಿಷಯ. ಆಮೇಲೆಯೂ ನೀನು ನನ್ನನ್ನು ನಿರಾಕರಿಸುವುದಾದರೆ ನಾನೇನು ತಾನೇ ಮಾಡಲಾಗುತ್ತದೆ ? ನಾನು ಬೇರೊಂದು ಮದುವೆಯನ್ನು ಮಾಡಿಕೊಳ್ಳುವುದಿಲ್ಲ. ನಿನ್ನನ್ನು ಪ್ರೀತಿ ಮಾಡಿದಂತೆ ನಾನು ಬೇರಾವಳನ್ನೂ ಪ್ರೇಮ ಮಾಡಲಾರೆ. ಅಲ್ಲಿಗೇ ಅದು ಮುಕ್ತಾಯ. ಈ ವಿಷಯಗಳನ್ನು ಇನ್ನೊಂದು ದಿನ ಮಾತನಾಡಿ, ನಿರ್ಧಾರ ಮಾಡೋಣ. ಆದರೆ ಈಗ ಯಾವುದನ್ನೂ ಬಹಿರಂಗ ಪಡಿಸುವುದು ಬೇಡ. ಎಂದೆಂದಿಗೂ ಬಹಿರಂಗ ಪಡಿಸುವುದು ಬೇಡ. ನಮ್ಮ ವಿಷಯವನ್ನು ಸಿಕ್ಕಿದವರು ಸಿಕ್ಕಿದಂತೆ ಮಾತನಾಡುವುದು ಬೇಡ " ಎಂದನು.

ವಿಮಲೆಯು " ಆಗಬಹುದು. ಬಹಿರಂಗ ಪಡಿಸುವುದೇಕೆ ? ಅಂತೂ ನಾವು ಪ್ರೇಮ ಮಾಡಬಾರದಾಗಿದ್ದಿತು. ತಪ್ಪು ಮಾಡಿದೆವು. ಅದನ್ನು ನಾವು ಅರ್ಥ ಮಾಡಿಕೊಂಡರೆ ಸಾಕು " ಎಂದಳು.

" ನೀನು ನಟರಾಜನನ್ನು ನೋಡದಿದ್ದರೆ ಈ ರೀತಿಯಾಗಿ ಭಾವನೆ ಮಾಡುತ್ತಿರಲಿಲ್ಲ. ಅಲ್ಲವೇ, ವಿಮಲಾ "

" ಹಾಗೆಲ್ಲಾ ಹೇಳಬೇಡಿ. ಈಗಲೂ ನಾನು ನಿಮ್ಮನ್ನು ವಿಶ್ವಾಸ ಮಾಡುತ್ತೇನೆ. ಆದರೆ ಯಾವ ಬಂಧನಗಳೂ ನನಗೆ ಬೇಡ. ನಾವು ಎಂದೆಂದಿಗೂ ಸ್ನೇಹಿರಾಗಿಯೇ ಇ———"

" ನಿನ್ನ ಪ್ರೇಮವು ಅಮರವಾದುದೆಂದು ನನಗೆ ಗೊತ್ತಿತ್ತು, ವಿಮಲಾ "

ಅವನು ನೇರವಾಗಿ ಬಾಗಿಲಿನಲ್ಲಿದ್ದ ಕಾರಿನ ಬಳಿಗೆ ಹೋದನು. ನಿಮಿಷದಲ್ಲಿ ಕಾರು ಹೊರಟುಹೋಯಿತು.

ಅವಳೆಷ್ಟೇ ಪ್ರಯತ್ನ ಮಾಡಿದರೂ ಎಳೆಯು ಕಿತ್ತುಹೋಗಲಿಲ್ಲ

ವೆಂಬುದು ಅವಳಿಗೂ ಗೊತ್ತಿತ್ತು. ಅವಳು ಅದಕ್ಕಿಂತ ಹೆಚ್ಚಾಗಿ ಮತ್ತೇ ನನ್ನೂ ಮಾಡಲಾರದವಳಾಗಿದ್ದಳು. ಕಾರು ಹೊರಟು ಹೋದ ನಂತರ ಸ್ವಲ್ಪ ಹೊತ್ತು ಅವಳು ನಿಂತಿದ್ದಳು. ಕಂಪಿಸುತ್ತಾ, ಕಷ್ಟದಿಂದ ಉಸಿರಾಡುತ್ತಾ ನಿಂತಿದ್ದಳು. ಕಾರ್ಯವು ಸಾಧಿತವಾಗದಿದ್ದರೂ ಅವಳ ಹೃದಯವು ಸ್ವಲ್ಪ ಮಟ್ಟಿಗೆ ಹಗುರವಾಗಿದ್ದಿತು.

೧೫

ಶಾಮಣ್ಣನವರ ಶಷ್ಟಪೂರ್ತಿ ಶಾಂತಿಗೆ ವಿಮಲೆಯ ಮನೆಯವರನ್ನು ಕರೆಯಲು ನಾಗವೇಣಿಯು ಬಂದಿದ್ದಳು.

ನಾಗವೇಣಿಯು ಚೆಂದೊಳ್ಳೆ ಹೆಣ್ಣು. ಅವಳದು ಮಗುವಿನಂತೆ ಮುಗ್ಧವಾದ ಮುಖ. ಅಕ್ಕಪಕ್ಕದಲ್ಲಿ ಕೆಂಪು ತುಂಬಿದ ಕೆನ್ನೆಗಳು. ಮುಖದ ಮಾಟಕ್ಕೆ ತಕ್ಕಂತಹ ಪುಟ್ಟ ಪುಟ್ಟ ಕಣ್ಣುಗಳು. ಗುಂಗುರಾಗಿಲ್ಲದಿದ್ದರೂ ನಯವಾಗಿ ಉದ್ದವಾಗಿರುವ ತಲೆಗೂದಲು. ಅಷ್ಟು ಎತ್ತರವೂ ಅಷ್ಟು ಕುಳ್ಳೂ ಅಲ್ಲದ ದೇಹ. ಸೊಗಸಾದ ಜಾರ್ಜೆಟ್ ಸೀರೆಯುಟ್ಟುಕೊಂಡು ನಗುನಗುತ್ತಾ ಬಂದಿದ್ದಳು.

ನಾಗವೇಣಿಯು ಬಂದಾಗ ಶೀಲೆವರದೆಯರು ಅಡಿಗೆಯ ಮನೆಯಲ್ಲಿದ್ದರು. ವಿಮಲೆಯು ಹೊರಗಡೆ ಬಟ್ಟೆಯೊಗೆಯುತ್ತಿದ್ದಳು. ತಂಗಿಯರು ಕರೆಯಲು ವಿಮಲೆ ಹೊರಗೆ ಬಂದಳು. ಅವಳ ಮುಖ, ತಲೆ, ಸೀರೆಗಳ ಮೇಲೆಲ್ಲಾ ನೀರು ಬಿದ್ದಿತ್ತು. ಒರಸಿಕೊಳ್ಳುತ್ತಾ ಅವಳು ಬಂದು ನಾಗವೇಣಿಯನ್ನು ನೋಡಿದಳು.

ಅವಳನ್ನು ನೋಡಿದ ವಿಮಲೆಯು " ಹುಡುಗಿಯು ಮುದ್ದಾಗಿದ್ದಾಳೆ " ಎಂದುಕೊಂಡಳು.

ನಾಗವೇಣಿ ಎಲ್ಲರಿಗೂ ಪ್ರಿಯವಾಗುವಂತೆ ಮಾತನಾಡಿದಳು. ತಮ್ಮ ತಂದೆಯ ಶಾಂತಿಗೆ ಬರಬೇಕೆಂದೂ ಮನೆಯವರಾರೂ ತಪ್ಪಿಸಿಕೊಳ್ಳಬಾರದೆಂದೂ ಹೇಳಿದಳು. ವಾಸುವನ್ನು ವಿಶ್ವಾಸದಿಂದ ಮಾತನಾಡಿಸಿದಳು. ಶೀಲೆ ವರದೆಯರನ್ನು ಬಲು ದಿನದ ಗೆಳತಿಯರನ್ನು ಕಾಣುವಂತೆ ಕಂಡಳು.

ವಿಮಲೆಯೊಡನೆ ಅಕ್ಕನಂತೆ ನಡೆದುಕೊಂಡಳು. ಸಾವಿತ್ರಮ್ಮನವರನ್ನು "ಅಜ್ಜಿ" ಎಂದಳು.

ವರದೆಯು ನಾಗವೇಣಿಗೆ ಕಾಫೀ ಮಾಡಿ ಕೊಟ್ಟಳು.

ಶೀಲೆಯು " ಸುಧಾಮನ ಮನೆಗೆ ಕೃಷ್ಣಪರಮಾತ್ಮನು ದಯಮಾಡಿಸಿದಂತೆ ದಯಮಾಡಿಸಿದ್ದೀರಿ. ಅವಲಕ್ಕಿಯೂ ಇಲ್ಲದ ಈ ಮನೆಯಲ್ಲಿ ಕಾಫಿಯನ್ನು ಕೊಟ್ಟಿದ್ದೇವೆ, ಒಪ್ಪಿಸಿಕೊಳ್ಳಬೇಕು " ಎಂದು ಹೇಳಿದಳು.

ನಾಗವೇಣಿಯು " ಕಾದಂಬರಿಕಾರರಂತೆ ಮಾತನಾಡುತ್ತೀರಲ್ಲಾ " ಹೇಳಿ, ನಕ್ಕು, ಕಾಫಿಯನ್ನು ಕುಡಿದಳು.

ನಾಗವೇಣಿಯು ಸ್ವಲ್ಪ ಹೊತ್ತು ಮಾತನಾಡುತ್ತಿದ್ದು " ನಮ್ಮ ಭಾವ ಹೇಳಿದರೆ ಏನೋ ಎಂದುಕೊಂಡಿದ್ದೆ. ಇಷ್ಟು ದಿನ ನಾನು ಇಲ್ಲಿ ಬರದೇ ಇದ್ದುದೇ ತಪ್ಪಾಯಿತು. ಇವರು ನಿಮ್ಮನ್ನು ಬಹಳ ಮೆಚ್ಚಿಕೊಂಡಿದ್ದಾರೆ " ಎಂದು ಹೇಳಿ ತನ್ನ ಭಾವನಾದ ವೆಂಕಟರಾಯನ ಕಡೆಗೆ ನೋಡಿದಳು.

ವಿಮಲೆಯು ನಗುತ್ತಾ " ನಾವು ಅವರನ್ನೂ ಮೆಚ್ಚಿಕೊಂಡಿದ್ದೇವೆ " ಎಂದು ಹೇಳಿದಳು.

ನಾಗವೇಣಿಯು ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ವಾಪ್ಸು ಹೊರಟು ಹೋದಳು. ಹೊಗುತ್ತಾ ವೆಂಕಟರಾಯನೊಂದಿಗೆ " ವಿಮಲೆಯು ಚೆನ್ನಾಗಿದ್ದಾಳೆಂದು ಕೇಳಿದ್ದೆ. ಆದರೆ ಇಷ್ಟು ರೂಪವತಿ ಎಂದುಕೊಂಡಿರಲಿಲ್ಲ. ಅವರ ಜಡೆ ಎಷ್ಟು ಉದ್ದವಾಗಿದೆ. ಒಳ್ಳೆಯ ಫಿಲಂ ಸ್ಟಾರ್ ಇದ್ದ ಹಾಗೆ ಇದ್ದಾಳೆ ". ಎಂದಳು.

ವಿಮಲೆಯು ವೆಂಕಟರಾಯನ ಸಂಬಂಧವಾಗಿ " ನಾವು ಅವರನ್ನು ಮೆಚ್ಚಿಕೊಂಡಿದ್ದೇವೆ " ಎಂದು ಹೇಳಿದುದು ಸ್ವಲ್ಪ ಮಟ್ಟಿಗೆ ನಿಜ. ಇತ್ತೀಚೆಗೆ ಕೆಲವು ದಿನಗಳಿಂದ ವೆಂಕಟರಾಯನು ಬಹಳ ನಯವಾಗಿಯೂ ಮೃದುವಾಗಿಯೂ ನಡೆದು ಕೊಳ್ಳುತ್ತಿದ್ದನು. ವಿಮಲೆಯನ್ನು ಹಿಂಸೆ ಮಾಡಲಿಲ್ಲ. ಅವರು ತಮ್ಮ ಪ್ರಣಯ ಸಂಬಂಧವನ್ನು ಪರಿತ್ಯಜಿಸಬೇಕೇ ಅಥವಾ ಮುಂದುವರಿಸಬೇಕೇ ಎಂಬ ವಿಷಯವು ತೀರ್ಮಾನಕ್ಕೆ ಬಂದಿರಲಿಲ್ಲ. ಅದು ಹಾಗೇಯೇ ಉಳಿದಿತ್ತು.

ಈ ನಡುವೆ ನಟರಾಜನಿಂದ ಒಂದು ಕಾಗದವು ಬಂದಿದ್ದಿತು. ಅದು ಖಟಮುಂಡುವಿನಿಂದ ಬರೆದ ಕಾಗದ. ಅವರೆಲ್ಲಾ ನಗರವನ್ನು ಬಿಟ್ಟರಂತೆ. ಈ " ಜೀವನವು ಬಹಳ ಚೆನ್ನಾಗಿದೆ. ನಾನಿಲ್ಲಿ ಬರದೇ ಇದ್ದಿದ್ದರೆ ಅತ್ಯುತ್ತಮ ವಾದ ಅವಕಾಶವನ್ನು ಕಳೆದುಕೊಳ್ಳುತ್ತಿದ್ದೆ. ಈ ಜೀವನದ ಒನ್ನೆಲೆಯಲ್ಲಿ ಸೊಗಸಾದುದೊಂದು ಕಾದಂಬರಿಯನ್ನು ಬರೆಯಲು ಲೆಕ್ಕ ಹಾಕುತ್ತಿದ್ದೇನೆ. ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ. ಪ್ರೇಮಕ್ಕೆ ಸಾನ್ನಿಧ್ಯವೇ ಇರಬೇಕೇಯಿಲ್ಲ. ನೀನು ಸುಖವಾಗಿರಲೆಂದೂ ಆನಂದವಾಗಿರಬೆಂದೂ ಯಾವಾಗಲೂ ಬಯಸುತ್ತಿದ್ದೇನೆ " ಎಂದು ಬರೆದಿದ್ದನು. ಆಗಾಗ ತಾನು ಕಾಗದಗಳನ್ನು ಬರೆಯುವುದಾಗಿ ಬರೆದು, ಪ್ರತ್ಯುತ್ತರ ಬರೆಯಲು ಖಟಮುಂಡುವಿನ ವಿಳಾಸವನ್ನು ಕೊಟ್ಟಿದ್ದನು.

ಆ ಕಾಗದವು ಬಂದ ಎರಡು ದಿನ ವಿಮಲೆಯು ಎಂದಿನಂತೆ ಇರಲಿಲ್ಲ. ಮೊದಲಿನಂತೆ ಅವಳ ಮನಸ್ಸಿನಲ್ಲಿ ಅಲ್ಲಕಲ್ಲೋಲಗಳು ಆರಂಭವಾದುವು. ತುಯ್ದಾಟವು ಮೊದಲಾಯಿತು. ಹುಚ್ಚಳಂತೆ ನಡೆದುಕೊಳ್ಳುತ್ತಿದ್ದಳು. ದಿನಗಳು ಕಳೆದ ಹಾಗೆ ಆ ಬಿಸಿಯು ಆರುತ್ತಾ ಬಂದಿತು.

ಶಕುಂತಲೆಯು ಇದ್ದಕ್ಕಿದ್ದಂತೆಯೇ ಮುಣಿಪುರಕ್ಕೆ ಹೊರಟು ಹೋದಳು. ಆಕೆಯ ಸಂಬಂಧವಾದ ಯಾವ ವಿವರಗಳೂ ಗೊತ್ತಾಗಲಿಲ್ಲ. ನಟರಾಜನ ಮತ್ತು ಅವಳ ವಿವಾಹವು ಸದ್ಯಕ್ಕೆ ನಿಂತು ಹೋದಂತೆಯೇ. ಅದರಿಂದ ಅವಳ ಮೇಲೆ ಯಾವ ಬಗೆಯ ಪರಿಣಾಮವಾಯಿತೆಂಬುದು ಗೊತ್ತಾಗಲಿಲ್ಲ. ಶಕುಂತಲೆಯು ಹೋಗುವ ಮೊದಲು ವಿಮಲೆಯು ಅವಳನ್ನು ನೋಡಲಾಗಲಿಲ್ಲ.

ಒಂದು ದಿನ ಶಾರದಮ್ಮ ವಿಮಲೆಯನ್ನು ನೋಡಲು ಬಂದಿದ್ದಳು. ಈಚೆಗೆ ಅನೇಕ ಬಾರಿ ಬಂದು ಅವರಿಬ್ಬರಿಗೂ ಬಹಳ ಸಲಿಗೆಯುಂಟಾಗಿತ್ತು. ವಿಮಲೆಯು ಕಷ್ಟ ಸುಖಗಳನ್ನು ಮಾತನಾಡಬೇಕಾದರೆ ಅವಳೊಡನೆಯೇ ಹೇಳಿಕೊಳ್ಳಬೇಕು. ಶೀಲಾ ವರದೆಯರು ಹುಡುಗಿಯರು. ಸಾವಿತ್ರಮ್ಮನವರ ಬುದ್ಧಿಯು ನೆಟ್ಟಗಿಲ್ಲ. ವಿಮಲೆಯು ಶಾರದಮ್ಮನವರೊಂದಿಗೆ ತನ್ನ ವಿಷಯಗಳೆಲ್ಲವನ್ನೂ ಹೇಳಿದಳು. ತನ್ನ ಮನಸ್ಸಿನ ತುಯ್ದಾಟವನ್ನು

ಸ್ವಲ್ಪ ಮಟ್ಟಿಗೆ ಹೇಳಿದಳು. ತನ್ನ ಮತ್ತು ವೆಂಕಟರಾಯನ ಸಂಬಂಧವನ್ನು ಸೂಕ್ಷ್ಮವಾಗಿ ತಿಳಿಸಿದಳು.

ಶಾರದಮ್ಮನು " ನೀವೆಲ್ಲಾ ದೊಡ್ಡ ಮನುಷ್ಯರು. ಓದಿದವರು. ನಾವು ಏನಾದರೂ ಹೇಳಿದರೆ ತಪ್ಪಾಗಬಹುದು. ಆದರೆ ವಯಸ್ಸಾದವಳಲ್ಲ ಎಂದು ಹೇಳುತ್ತೇನೆ. ವೆಂಕಟರಾಯರ ವಿಷಯವನ್ನು ನೀವು ಹೇಳಿದ್ದು ಕೇಳಿ ನನಗೆ ಬಹಳ ಸಂತೋಷವಾಗಿದೆ. ಅವರು ಬಹಳ ಒಳ್ಳೆಯವರು. ಚೆನ್ನಾಗಿ ಸಂಪಾದನೆ ಮಾಡುತ್ತಿದ್ದಾರೆ. ಅವರನ್ನು ಮದುವೆಯಾಗುವುದೇ ಒಳ್ಳೆಯದೆಂದು ನನಗೆ ತೋರುತ್ತದೆ " ಎಂದಳು.

" ಆಗು ಸರಿ, ಶಾರದಮ್ಮ. ನಾನೂ ಅವರನ್ನು ಪ್ರೀತಿ ಮಾಡುತ್ತೇನೆ. ಆದರೆ ಅದು ಹೆಂಡತಿಯು ಗಂಡನನ್ನು ಮಾಡುವಂತಹ ಪ್ರೇಮವಲ್ಲ. ಅವರನ್ನು ಗಂಡ ಎಂದುಕೊಳ್ಳಲು ನನ್ನ ಮನಸ್ಸು ಒಪ್ಪುವುದಿಲ್ಲ. ಆ ನಟರಾಜ್ ಇದ್ದಾರಲ್ಲಾ. ಅವರು ಇನ್ನೂ ಹೊಸಬರು. ನಾನು ನಾಲ್ಕೈದು ದಿನಗಳಿಗಿಂತಲೂ ಹೆಚ್ಚಾಗಿ ನೋಡಿಲ್ಲ. ಆದರೂ ಅವರ ವಿಷಯದಲ್ಲಿ ನನ್ನ ಮನಸ್ಸು ಹಾತೊರೆಯುತ್ತಿದೆ. ಯಾವುದೋ ಜನ್ಮದ ಋಣಾನುಬಂಧವಿರಬೇಕು.

" ಅದೆಲ್ಲಾ ಪ್ರೇಮವಲ್ಲಮ್ಮ. ಮಕ್ಕಳು ಬೀದಿಯಲ್ಲಿ ಮಾರುವ ತಿಂಡಿಯು ಬೇಕೆಂದು ಹಠಹಿಡಿದಂತೆ. ಒಂದು ವೇಳೆ ನೀವು ಅವರನ್ನು ಮದುವೆಮಾಡಿಕೊಂಡರೂ ಎರಡು ದಿನ ಸಂಸಾರ ಮಾಡುವುದಕ್ಕಾಗುವುದಿಲ್ಲ. ಅವರೇನು, ಇಂದು ಮದರಾಸು, ನಾಳೆ ಬೊಂಬಾಯಿ, ನಾಡಿದ್ದು ಹಿಮಾಲಯ, ಹೀಗಿದ್ದರೆ ಸಂಸಾರ ಮಾಡುವುಕ್ಕಾಗುತ್ತದೆಯೋ ? ನೋಡಿ, ಶಕುಂತಲೆಯನ್ನು ಮದುವೆ ಮಾಡಿಕೊಳ್ಳುತ್ತೇನೆಂದು ಹೇಳಿ ಅರ್ಧದಲ್ಲಿಯೇ ಕೈ ಬಿಟ್ಟನು. ಒಂದೇನೋ ಗಲಾಟ ಮಾಡಿಕೊಂಡಿದ್ದರಂತೆ. ಇಂತಹ ರೊಡನೆ ಸಂಸಾರ ಮಾಡುವುದಕ್ಕಾಗುತ್ತದೆಯೋ ? ಸಂಸಾರವೆಂದರೆ ಮನೆ, ಬಾಗಿಲು, ಮಕ್ಕಳುಮರಿ, ಎಲ್ಲವೂ ಆಗಬೇಕು. ಗಂಡನು ಜವಾಬ್ದಾರಿಯಿಂದ ನಿಂತಲ್ಲಿ ನಿಂತು ನಿಭಾಯಿಸಬೇಕು. ಇದ್ಕಕೆಲ್ಲಾ ವೆಂಕಟರಾಯರೇ ಸರಿ"

ವಿಮಲೆಯು ಈ ವಿಷಯವನ್ನು ಶಾರದಮ್ಮನವರೊಂದಿಗೆ ಎತ್ತಬಾರದಾಗಿತ್ತೆಂದುಕೊಂಡಳು. ಉರಿಯದಿದ್ದ ಒಲೆಯನ್ನು ಊದತೊಡಗಿದಳು.

ಅನಂತರ ವಿಮಲೆಯು " ನೀವು ಏನೇ ಹೇಳಿ ಇಷ್ಟವಿಲ್ಲದವರನ್ನು ಮದುವೆಯಾಗುವುದು ನನ್ನಿಂದ ಸಾಧ್ಯವಿಲ್ಲ " ಎಂದು ಹೇಳಿದಳು.

" ಮದುವೆಯಲ್ಲಿ ಇಷ್ಟ ಅನಿಷ್ಟಗಳೇನು ಬಂದಿತು? ವಿಮಲಮ್ಮ ಅದೆಲ್ಲಾ ಅನುಭವವಿಲ್ಲದವರು ಹೇಳುವ ಮಾತು. ಇಂದು ಇಷ್ಟವಾಗಿರುವುದು ನಾಳೆಯ ದಿನ ಇಷ್ಟವಾಗಿರುವುದಿಲ್ಲ. ನಾಳೆ ಇಷ್ಟವಾಗುವಂತಹುದು ಇಂದು ಇಷ್ಟವಾಗುವುದಿಲ್ಲ. ಮೊದಲು ಮೊದಲು ಹಾಗೆ ಹಾಗೇ ಕಾಣುತ್ತದೆ. ಮದುವೆಯಾಗಿ ಒಂದೆರಡು ಮಕ್ಕಳಾದನಂತರ ಹೆಂಗಸು ತಾಯಿಯಾಗುತ್ತಾಳೆ. ಆಗ ಅವಳಿಗೆ ಇವನು ಗಂಡನಾದರೂ ಒಂದೇ. ಅವನು ಗಂಡನಾದರೂ ಒಂದೇ. ತನ್ನನ್ನೂ, ತನ್ನ ಮಕ್ಕಳನ್ನೂ ಸಾಕುವಂತಹ ಒಳ್ಳೆಯವನು ಅವಳಿಗೆ ಬೇಕಾಗುತ್ತದೆ. ಎಲ್ಲರೂ ಅಷ್ಟೆ. ಮೊದಲು ನಿಮ್ಮಂತೆಯೇ ಯೋಚನೆ ಮಾಡುತ್ತಾರೆ. ಮೂರು ನಾಲ್ಕು ಮಕ್ಕಳಾದ ನಂತರ ಅವರಿಗೆ ಆ ಆಲೋಚನೆಯೇ ಬರುವುದಿಲ್ಲ. ತಾವು, ತಮ್ಮ ಮನೆ, ತಮ್ಮ ಮಕ್ಕಳು, ಅಷ್ಟೇ ಅವರ ಯೋಚನೆ. ಗಂಡನು ಮನೆಯಲ್ಲಿ ಎಮ್ಮೆಯನ್ನು ಕಟ್ಟುವ ಗೂಟವಿದ್ದ ಹಾಗೆ "

" ಸಂಸಾರದಲ್ಲಿ ಗಂಡನು ಅಂತಹ ನಿರುಪಯೋಗ ಪದಾರ್ಥವೆಂದು ನಾನು ಒಪ್ಪುವುದಿಲ್ಲ "

" ನೀವು ಹುಡುಗರಮ್ಮ. ಅದರಿಂದ ಒಪ್ಪುವುದಿಲ್ಲ. ನಾನು ವಯಸ್ಸಾದವಳು. ನನಗೆ ಅನುಭವವಿದೆ. ನನ್ನ ಮಾತು ನಂಬಿ. ನಾನು ಹೇಳುವುದು ನಿಜ "

"ನೀವು ಹೇಳುವುದು ಗೊಡ್ಡು ಕತೆ, ಶಾರದಮ್ಮ. ಗಂಡನು ನಿರುಪಯುಕ್ತವಾದ ಪದಾರ್ಥವಲ್ಲ. ಸಂಸಾರದಲ್ಲಿ ಪತಿಯ ಸಾನ್ನಿಧ್ಯ–ಸಹವಾಸಗಳು ಅತ್ಯಂತ ಪ್ರಾಮುಖ್ಯವಾದವು. ಅದು ಪ್ರಿಯವಾಗಿರಬೇಕಾದರೆ ಸರಿಯಾದ ಪತಿಯನ್ನು ಆರಿಸಿಕೊಳ್ಳಬೇಕು. ಇಷ್ಟವಿಲ್ಲದವರನ್ನು ಮದುವೆಯಾಗುವುದಕ್ಕಿಂತಲೂ ಸಾಯುವುದೇ ಮೇಲು "

" ನೀವು ವೆಂಕಟರಾಯನ್ನು ಪ್ರೇಮಿಸಿರಲಿಲ್ಲವೇನಮ್ಮಾ "

" ಒಂದು ಸಮಯದಲ್ಲಿ ಪ್ರೇಮ ಮಾಡಿದ್ದೆ. ಆಗ ನನಗೆ ಹೀಗಾಗುವದೆಂದು ತಿಳಿದಿರಲಿಲ್ಲ "

" ಪ್ರಪಂಚದಲ್ಲಿ ಎಲ್ಲರೂ ನಿಮ್ಮಂತೆ ಹೇಳ ತೊಡಗಿದರೆ ಮನೆಮಠ, ಸಂಸಾರ, ಇವುಗಳೆಲ್ಲವೂ ಎಲ್ಲಿರುತ್ತದೆ ?"

ಇಬ್ಬರೂ ಮಾತನಾಡದೇ ಸ್ವಲ್ಪ ಹೊತ್ತು ಕುಳಿತಿದ್ದರು.

ಶಾರದಮ್ಮ " ನೀವು ವೆಂಕಟರಾಯರನ್ನು ಮದುವೆ ಮಾಡಿಕೊಳ್ಳ ಬೇಕಾದ್ದು ನಿಮ್ಮ ಕರ್ತವ್ಯ " ಎಂದಳು.

ವಿಮಲೆಯು ಭಾವನಾ ಪೂರಿತಳಾಗಿ " ಕರ್ತವ್ಯ ! ಎಲ್ಲಿಯ ಕರ್ತವ್ಯ ! ಏನು ಕರ್ತವ್ಯ ! ಹಾಗಾದರೆ ಪ್ರೇಮಕ್ಕೆ ಬೆಲೆಯೇ ಇಲ್ಲವೇ ? ಹೆಂಗಸರೆಂದರೆ ಮೂಗುದಾರ ಹಾಕಿದ ದನಗಳೇ ? ಇಲ್ಲ. ನನಗೆ ಇದೊಂದೂ ಬೇಡ. ನಾನು ಸ್ವತಂತ್ರಳು. ನನಗೆ ಬೇಕಾದ ಹಾಗೆ ಇರುತ್ತೇನೆ. ನಾನೇನು ಅವರನ್ನು ಮದುವೆ ಮಾಡಿಕೊಂಡಿದ್ದೇನೆಯೆ ? ಮಾಡಿಕೊಂಡಿದ್ದರೂ ಏನಂತೆ ? ಬೇಕಾಯಿತು, ಮಾಡಿಕೊಂಡೆ. ಬೇಡ, ಬಿಟ್ಟುಬಿಡುತ್ತೇನೆ. ಈ ಸಂಸಾರ ತಾನೇ....ನನ್ನದೆ ? ಇಲ್ಲಿ ಬಿದ್ದು ಸಾಯುವುದಕ್ಕೆ ಈ ಶಂಕರ.... ಈ ಶೀಲೆ, ವರದೆ ವಾಸುಗಳು ನನ್ನ ಮಕ್ಕಳೆ........" ಎಂದು ಮುಂದೇನೋ ಹೇಳುವುದಕ್ಕೆ ಹೋಗಿ ಆವೇಶದಿಂದ ಮುಂದೆ ಮಾತನಾಡಲಾರದೇ ಹೋದಳು.

ಶಾರದಮ್ಮ ಶಾಂತವಾಗಿ ವಿಮಲೆಯು ಹೇಳುವುದನ್ನು ಕೇಳುತ್ತಾ ಕುಳಿತಿದ್ದಳು. ಅನಂತರ ನಿದಾನವಾಗಿ " ವಿಮಲಮ್ಮ, ನಾನು ಹೇಳುವು ದನ್ನು ಸಾವಧಾನವಾಗಿ ಕೇಳಿ. ನೀವಿನ್ನೂ ಮದುವೆಯಾಗದವರು. ವೆಂಕ ಟರಾಯರನ್ನು ಬೇಕಾದರೂ ಮದುವೆಯಾಗಬಹುದು. ನಟರಾಜರನ್ನು ಬೇಕಾದರೂ ಮದುವೆಯಾಗಬಹುದು. ಅಥವಾ ಮದುವೆಯೇ ಇಲ್ಲದೇ ಇರಬಹುದು. ನಾನು ಹೆಂಗಸು. ಪ್ರಪಂಚವನ್ನು ನೋಡಿದವಳು. ನಿಮ್ಮನ್ನು ನೋಡಿದರೆ ಐದಾರು ತಿಂಗಳೊಳಗೆ ನೀವು ತಾಯಿಯಾಗುವ ಲಕ್ಷಣಗಳು ಅತ್ಯಂತ ಸೂಕ್ಷ್ಮವಾಗಿ ಕಂಡು ಬರುತ್ತವೆ. ಮುಖ್ಯವಾಗಿ ನೀವು ಅದನ್ನು ಯೋಚಿಸಬೇಕು. ನೀವು ಯಾರ ಮಗುವಿನ ತಾಯಿಯಾ ಗುತ್ತೀರೋ ಅವರನ್ನು ಮದುವೆಯಾಗಿಬಿಡಬೇಕು. ಯಾರನ್ನಾದರೂ ಆಗಲಿ, ಕೂಡಲೇ ಮದುವೆಯಾಗಬೇಕು. ಅದಿಲ್ಲದೇ ಹೋದರೆ ಸಮಾ ಜದ ಎದುರಿನಲ್ಲಿ ಚೆನ್ನಾಗಿರುವುದಿಲ್ಲ " ಎಂದು ಹೇಳಿದಳು.

ವಿಮಲೆಯು ಆ ಮಾತಿಗೆ ಜವಾಬು ಕೊಡಲಿಲ್ಲ.

## ೧೬

ಶಾಮಣ್ಣನವರ ಮನೆಯಲ್ಲಿ ಬಹಳ ದಿನಗಳಿಂದ ಯಾವ ವಿಶೇಷ ಕಾರ್ಯಗಳೂ ನಡೆದಿರಲಿಲ್ಲ. ಅವರಿಂದ ಷಷ್ಟ್ಯಪೂರ್ತಿಯ ಏರ್ಪಾಟುಗಳನ್ನು ವಿಜೃಂಭಣೆಯಿಂದ ಮಾಡಿದ್ದರು ವಿಮಲೆ, ಶಂಕರ, ವಾಸು ಇವರುಗಳು ಬೆಳಗಾಗುತ್ತಲೇ ಹೋದರು. ಶೀಲಾ ವರದೆಯರು ಅಡಿಗೆ ಮಾಡಿ ಅತ್ತಿಗೆ ಬಡಿಸಿ ಸುಮಾರು ಹನ್ನೊಂದು ಗಂಟೆಯ ವೇಳೆಗೆ ಬಂದರು. ಶಾಂತಿಗೆ ಬೇಕಾದಷ್ಟು ಜನರು ಬಂದಿದ್ದರು. ಅವರಲ್ಲಿ ವಿಮಲೆಯ ಮನೆಯವರಿಗೆ ಪರಿಚಯಸ್ಥರಾದವರೂ ಅಪರಿಚಿತಸ್ಥರೂ ಇದ್ದರು. ಮನೆಯ ಯಜಮಾನಿ ಅಚ್ಚಮ್ಮನವರು ರೋಗಿಷ್ಠರು. ನಾಗವೇಣಿ, ವಿಮಲೆ, ಶೀಲಾ ವರದೆಯರೇ ಓಡಿಯಾಡಬೇಕಾಗಿ ಬಂದಿತು. ವೆಂಕಟರಾಯನೂ ಶಂಕರನೂ ಬಂದಿದ್ದ ಗಂಡಸರನ್ನೆಲ್ಲಾ ಆದರಿಸಿ ಉಪಚರಿಸಿದರು.

ಪುರೋಹಿತರು ಸಾಂಗೋಪಾಂಗವಾಗಿ ವಿಧಿವತ್ತಾದ ಕರ್ಮಕಾಂಡವನ್ನು ಮುಗಿಸುವ ಹೊತ್ತಿಗೆ ಮಧ್ಯಾಹ್ನ ಒಂದು ಗಂಟೆಯಾಯಿತು. ಅನಂತರ ಊಟಗಳಾದವು. ಬಂದಿದ್ದವರಲ್ಲಿ ಎಲ್ಲೋ ಕೆಲವರು ವಿನಾ ಉಳಿದವರು ಹೊರಟು ಹೋದರು.

ಊಟವಾದ ನಂತರ ಹೆಣ್ಣುಹುಡುಗರು ಅಚ್ಚಮ್ಮನವರ ಕೋಣೆಯಲ್ಲಿಯೇ ಕುಳಿತುಕೊಂಡು ಎಲೆಅಡಿಕೆ ಹಾಕಿಕೊಂಡರು. ಆಗ ಅಚ್ಚಮ್ಮನವರು ಸೂಕ್ಷ್ಮವಾಗಿ ನಾಗವೇಣಿಯನ್ನು ವೆಂಕಟರಾಯನಿಗೆ ಕೊಟ್ಟು ಮದುವೆ ಮಾಡಲಾಗುವುದೆಂದು ಹೇಳಿದರು. ಕಡೆಯದಾಗಿ ವಿಮಲೆಯನ್ನು ಕುರಿತು "ನಮ್ಮ ನಾಗವೇಣಿಯ ಮದುವೆಯೊಂದು ಆದರೆ ಎಲ್ಲವೂ ಆದಂತೆ.

ಆ ಮದುವೆಗೂ ನೀವು ಬಂದು ಹೀಗೆಯೇ ಓಡಿಯಾಡಿ ಪೂರೈಸಬೇಕು" ಎಂದು ಉಪಚಾರವನ್ನು ಹೇಳಿದರು.

ವಿಮಲೆಯು ನಾಗವೇಣಿಯ ಕೋಣೆಗೆ ಹೋದಳು. ಅಲ್ಲಿದ್ದ ದೊಡ್ಡ ಹಾಸಿಗೆಯ ಮೇಲೆ ಇಬ್ಬರೂ ಬಿದ್ದುಕೊಂಡರು. ಎಷ್ಟೋ ಹೊತ್ತು ಮಾತನಾಡುತ್ತಿದ್ದರು.

ಆಗ ನಾಗವೇಣಿಯು "ಅಕ್ಕಾ!" ಎಂದಳು.

ನಾಗವೇಣಿಯು ಮನೆಯಲ್ಲಿ ಒಬ್ಬಳೇ ಹುಟ್ಟಿ ಒಂಟಿಯಾಗಿಯೇ ಬೆಳೆದ ಹುಡುಗಿ. ತನಗಿಂತ ದೊಡ್ಡವಳಾದ ವಿಮಲೆಯನ್ನು ಅವಳು ಬಲು ಬೇಗ ಅಕ್ಕನಾಗಿ ಮಾಡಿಕೊಂಡಳು.

ವಿಮಲೆಯು ದಿಂಬಿನ ಮೇಲಿದ್ದ ತನ್ನ ತಲೆಯನ್ನು ತಿರುಗಿಸಿ ವಿಶ್ವಾಸದಿಂದ "ಏನು?" ಎಂಬಂತೆ ನಾಗವೇಣಿಯ ಕಡೆಗೆ ನೋಡಿದಳು.

ನಾಗವೇಣಿಯು ಮಾತನಾಡದೇ ಮುಖ ಮುಚ್ಚಿಕೊಂಡಳು. ಮಾತನಾಡಲಿಲ್ಲ.

ವಿಮಲೆಯು ಬಲಾತ್ಕಾರ ಮಾಡಲು "ಏನೋ ಹೇಳಬೇಕೆಂದುಕೊಂಡೆ. ಬೇಡಕ್ಕಾ. ನನಗೆ ನಾಚಿಕೆಯಾಗುತ್ತದೆ" ಎಂದಳು.

"ಹೇಳೇ! ನನ್ನೊಂದಿಗೆ ನಾಚಿಕೆ ಎಂದರೇನು?"

ವಿಮಲೆಯು ಒಹಳನಾಗಿ ಹೇಳಿದ ನಂತರ "ಗಂಡಸರನ್ನು ಪ್ರೇಮ ಮಾಡುತ್ತೇವಲ್ಲಾ. ನಾವು ಪ್ರೇಮ ಮಾಡುತ್ತಿದ್ದೇವೆಂಬುದು ಅವರಿಗೆ ಗೊತ್ತಾಗುವುದಿಲ್ಲವೇ?" ಎಂದು ಕೇಳಿದಳು.

ವಿಮಲೆಯು ನಕ್ಕು "ಹೌದು. ಗಂಡಸರ ಸ್ವಭಾವವು ವಿಚಿತ್ರವಾದುದು. ಕಠಿಣ ಸ್ವಭಾವದ ಗಂಡಸರಿಗೆ ಕುಸುಮ ಕೋಮಲೆಯರಾದ ಹೆಂಗಸರ ಮನಸ್ಸು ಅರ್ಥವಾಗುವುದಿಲ್ಲ' ಎಂದು ಹೇಳಿ ಅವಳ ತಲೆಯನ್ನು ಸವರುತ್ತಾ "ಏನೇ ನಾಗು. ನಿನಗೆ ಪ್ರೇಮ ಭಂಗವಾಯಿತೇನೆ? ಯಾರನ್ನು ಪ್ರೀತಿಸಿದೆಯೋ?" ಎಂದು ಕೇಳಿದಳು.

"ಇಲ್ಲಕ್ಕ. ಅಂತಹದೇನೂ ಇಲ್ಲ. ಭಾವನಿಗೆ ಕೊಟ್ಟು ನನ್ನನ್ನು ಮದುವೆ ಮಾಡಬೇಕೆಂದಿದ್ದಾರಲ್ಲ ಹಾಗೇ ನೋಡುತ್ತಾ ಇದ್ದರೆ ನನ್ನಲ್ಲಿ

ಅವರಿಗೆ ಪ್ರೀತಿ ಇಲ್ಲವೇನೋ ಎಂದೆನಿಸುತ್ತದೆ. ಅವರಿಗೇ ಇಷ್ಟವಿಲ್ಲದಿದ್ದರೆ ನಾನೇಕೆ ಅವರನ್ನು ಮದುವೆ ಮಾಡಿಕೊಳ್ಳಲಿ ?"

" ನೀನು ಹೇಳುವುದು ನ್ಯಾಯವಾಗಿದೆ "

" ಸರಿಯಕ್ಕ. ಅದೇ ನನಗೆ ಕಷ್ಟವಾಗಿದೆ ಅವರು ನನ್ನನ್ನು ಪ್ರೇಮ. ಮಾಡುತ್ತಾರೆಯೋ, ಇಲ್ಲವೋ, ಎಂಬುದು ನನಗೆ ಸರಿಯಾಗಿ ಗೊತ್ತಾ ಗುತ್ತಿಲ್ಲ "

ಅವಳ ಮಾತಿಗೆ ವಿಮಲೆಯು ಜವಾಬು ಹೇಳಲಾರದೇ ಹೋದಳು. ಏನಾದರೂ ಮಾಡಿ ಮಾತು ಮುಗಿಸಬೇಕೆಂದು " ನನ್ನ ಪುಟ್ಟ ತಂಗಿಗೆ ಪ್ರೇಮದ ನಿಜ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವ ಅನುಭವವಿಲ್ಲ; ಮಲಗಿಕೋ " ಎಂದು ಹೇಳಿ ಅವಳನ್ನು ಚುಂಬಿಸಿದಳು.

ಚುಂಬಿಸಿದವಳು ಹೆಂಗಸಾದರೂ ಮುಗ್ಧೆಯಾದ ನಾಗವೇಣಿಗೆ ನಾಚಿಕೆಯಾಗಿ ಮುಖ ಮುಚ್ಚಿಕೊಂಡು ಮಲಗಿಬಿಟ್ಟಳು.

ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿಗೆ ವರದೆಯು ಎರಡು ಬೆಳ್ಳಿಯ ಲೋಟಾಗಳಲ್ಲಿ ಕಾಫಿಯನ್ನು ತಂದು ಅಕ್ಕನನ್ನೂ ನಾಗವೇಣಿಯನ್ನೂ ಎಬ್ಬಿಸಿ ಕಾಫೀ ಕೊಟ್ಟಳು. ಅನಂತರ ವಿಮಲೆಯ ಮನೆಯವರು ಹೊರಡುವುದೆಂದು ಮಾತು ಬಂದಿತು.

ನಾಗವೇಣಿಯು " ಅಕ್ಕಾ ! ನೀವುಗಳೆಲ್ಲರೂ ಈ ದಿನವೇ ಹೊರಟು ಹೋಗಕೂಡದು. ಇನ್ನೂ ಎರಡು ಮೂರು ದಿನಗಳಿದ್ದು ಹೋಗಬೇಕು " ಎಂದಳು.

ಅವರು ಮನೆಯಲ್ಲಿ ಸೋದರತ್ತೆಯನ್ನು ಬಿಟ್ಟು ಬಂದಿದ್ದರು. ಶಂಕರನಿಗೆ ದಿನವೂ ಏರ್ ಕ್ರಾಫ್ಟ್‌ಗೆ ಹೋಗಲು ತೊಂದರೆಯಾಗುತ್ತದೆ. ಅದರಿಂದ ಅವರುಗಳು ಇರುವುದು ಸಾಧ್ಯವೇ ಇರಲಿಲ್ಲ.

ರಾಜೀಕಬೂಲಿ ಮಾಡಿಕೊಳ್ಳುತ್ತಾ "ನೀವು ಇನ್ನೊಂದು ದಿನವಾದರೂ ಇದ್ದು ಹೋಗಬೇಕೆಂಬುದಾಗಿ ನಾಗವೇಣಿಯು ವಿಮಲೆಯನ್ನು ಬಲಾತ್ಕಾರ ಮಾಡಿದಳು.

ಕಡೆಗೆ ಶೀಲಾ ವರದೆಯರನ್ನು ಕಾರಿನಲ್ಲಿ ಕೆಂಗೇರಿಗೆ ಕಳುಹಿಸಲಾಯಿತು. ವಿಮಲೆಯು ಮಾರನೆಯ ದಿನ ಬೆಳಗಾಗ ಹೋಗುವುದೆಂದು

ಇತ್ಯರ್ಥವಾಯಿತು. ಶಂಕರನೂ ವೆಂಕಟರಾಯನೂ ಸಾಯಂಕಾಲ ಸಿನಿಮಾಗೆ ಹೋಗಲು ಸಿದ್ಧವಾಗಿರಬೇಕೆಂದು ಹೇಳಿ ಹೊರಗಡೆ ಹೊರಟು ಹೋದರು.

ವಿಮಲೆಯೂ ನಾಗವೇಣಿಯೂ ಐದೂವರೆಯ ವೇಳೆಗೆ ಸಿನಿಮಾಗೆ ಹೋಗಲು ಸಿದ್ಧವಾಗ ತೊಡಗಿದರು. ವಿಮಲೆಯು ತಲೆಗೂದಲನ್ನು ಬಾಚಿಕೊಂಡು ನಾಗವೇಣಿಯನ್ನು ತುರುಬು ಕಟ್ಟಲು ಹೇಳಿದಳು.

ನಾಗವೇಣಿಯು ಅವಳ ನೀಳವೂ ವಿಪುಲವೂ ಆದ ಕೂದಲನ್ನು ಸಿಲ್ಕ್ ಸುರುಳಿಗೆ ಸುತ್ತುತ್ತಾ "ಅಕ್ಕಾ. ನೀನು ದಿನವೂ ತಲೆಗೆ ಯಾವ ಎಣ್ಣೆಯನ್ನು ಹಚ್ಚುತ್ತೀ ?" ಎಂದು ಕೇಳಿದಳು.

ವಿಮಲೆಯ ತಲೆಗೂದಲನ್ನು ನೋಡಿದ ನಾಗವೇಣಿಗೆ ತನಗಂತಹ ಕೂದಲಿಲ್ಲವಲ್ಲ ಎಂದು ತೋರುತ್ತಿತ್ತು. ಕೂದಲಿನ ಮರ್ಮವನ್ನು ಅರಿತು ತಾನೂ ಅದನ್ನು ಅನುಸರಿಸಬೇಕೆಂದು ತಂಗಿಗೆ ಇಷ್ಟವಿದ್ದಿತು. ವಿಮಲೆಯು ತಲೆಗೆ ಕೊಬರಿ ಎಣ್ಣೆಯನ್ನು ಹಚ್ಚುವುದಾಗಿ ಹೇಳಿದನಂತರ ಅವಳಿಗೆ ಸ್ವಲ್ಪ ನಿರಾಸೆಯಾಯಿತು

ಕಟ್ಟಿದ ತುರುಬಿನ ಸುತ್ತಲೂ ವಿಮಲೆಯು ಮಲ್ಲಿಗೆಯ ದಂಡೆಯನ್ನು ಮುಡಿದು ಕೊಂಡಳು. ಕರಿಯ ಸಿಲ್ಕ್ ಸೀರೆಯನ್ನು ಉಟ್ಟು ಬಿಳಿಯ ಚೋಳಿಯನ್ನು ಧರಿಸಿದಳು.

ನಾಗವೇಣಿಯು ರೋಜಾ ಬಣ್ಣದ ಸೀರೆಯುಟ್ಟಳು. ಅಚ್ಚಗೆಂಪು ಬಣ್ಣದ ಬ್ಲೌಸ್ ಧರಿಸಿದಳು. ತಲೆ ಕೂದಲನ್ನು ಬಾಚಿ ತುದಿಯವರೆಗೂ ಜಡೆ ಹಾಕದೇ ಕರಿಯ ರಿಬ್ಬನ್ ಕಟ್ಟಿ, ದೊಡ್ಡ ಬಿಳೀ ಗುಲಾಬಿಯನ್ನು ಮುಡಿದುಕೊಂಡಳು. ಮುಂದಲೆಯನ್ನು ಕೆದರಿ ಹಾರುವ ಮುಂಗೂದಲು ಮಾಡಿಕೊಂಡಳು. ರೇಕು ಕತ್ತರಿಸಿದ ತಿಲಕವನ್ನಿಟ್ಟುಕೊಂಡಳು. ಎರಡು ಮೂರು ಚಿನ್ನದ ಸರಗಳನ್ನು ಹಾಕಿಕೊಂಡಳು. ಕಿವಿಯ ಓಲೆಗಳನ್ನು ಬದಲಾಯಿಸಿದಳು. ಕೈಬಳೆಗಳನ್ನು ತೆಗೆದು, ಒರೆಸಿ ಪುನಃ ಧರಿಸಿದಳು.

ಕೈಬಳೆಗಳನ್ನು ಒರಸುತ್ತಾ ನಾಗವೇಣಿಯು ವಿಮಲೆಯನ್ನು ನೋಡಿದಳು. ಅವಳು ನಿರಾಭರಣ ಸುಂದರಿಯಾಗಿ ಕುಳಿತಿದ್ದಳು. ಅವಳು

ಹಾಗಿದ್ದು ತಾನು ಮಾತ್ರ ಆಭರಣ ಭೂಷಿತೆಯಾಗಿ ಹೋಗುವುದು ಅವಳ ಮನಸ್ಸಿಗೊಪ್ಪಲಿಲ್ಲ.

ಅವಳು ತನ್ನ ಒಡವೆಗಳನ್ನು ತೆಗೆದು ಕೊಟ್ಟು ವಿಮಲೆಯನ್ನು ಹಾಕಿಕೊಳ್ಳಲು ಹೇಳಿದಳು.

ವಿಮಲೆಯು ಬೇಡವೆಂದಳು.

"ಯಾಕಕ್ಕಾ ! ನನ್ನ ಒಡವೆ ಹಾಕಿಕೊಳ್ಳಬಾರದೇ ?" ಎಂದು ನಾಗವೇಣಿಯು ಕೇಳಿದಳು .

"ನಿನ್ನ ಒಡವೆಗಳನ್ನು ಹಾಕಿಕೊಳುವುದಕ್ಕೇನಮ್ಮಾ ! ಆದರೆ ನಾನು ಒಡವೆಗಳನ್ನೇ ಇಟ್ಟುಕೊಳ್ಳುವುದಿಲ್ಲ. ನಿನಗದು ತಿಳಿಯದೇ ? ನಮ್ಮಂತಹವರು ಒಡವೆಗಳನ್ನು ಹಾಕಿಕೊಳ್ಳುವುದು ಹೇಗೆ ?"

"ನೀನು ಹಾಗೆಲ್ಲಾ ಮಾತನಾಡಬೇಡ. ಇಲ್ಲದಾಗ ಹಾಕಿಕೊಳ್ಳುವುದಿಲ್ಲ. ಇದ್ದಾಗ ಹಾಕಿಕೊಳ್ಳುವುದಕ್ಕೇನು ? ಈಗ ಇದೆಯಲ್ಲಾ "

"ಇದ್ದಾಗ ಹಾಕಿಕೊಳ್ಳಬಹುದು. ಈಗೇಕೆ ? ಒಡವೆ ಇಲ್ಲದೇ ಇದ್ದರೆ ನಾನು ಚೆನ್ನಾಗಿರುವುದಿಲ್ಲವೇ, ನಾಗು "

"ಒಡವೆ ಇಲ್ಲದಿದ್ದರೂ ನೀವು ಚೆನ್ನಾಗಿರುತ್ತೀರಕ್ಕಾ. ರೂಪವೇ ನಿಮಗೆ ಒಡವೆಯಾಗಿದೆ. ಆದರೆ ನಾನು ನಿಮ್ಮ ಜೊತೆಯಲ್ಲಿ ಬರುವಾಗ ನಾನು ಒಡವೆಗಳನ್ನಿಟ್ಟುಕೊಂಡು ನೀವು ಹಾಗೆಯೇ ಬಂದರೆ ಚೆನ್ನಾಗಿರುತ್ತದೆಯೇ ?"

ವಿಮಲೆಯು ನಗುತ್ತಾ "ನೀನೂ ಒಡವೆಗಳನ್ನು ತೆಗೆದುಬಿಟ್ಟು ಬಾ" ಎಂದಳು.

ನಾಗವೇಣಿಯು ತನ್ನ ಮುಖವನ್ನು ಸ್ವಲ್ಪ ಸೊಟ್ಟಗೆ ಮಾಡಿಕೊಂಡು "ಒಡವೆಗಳನ್ನಿಟ್ಟುಕೊಳ್ಳಬೇಕೆಂದು ನನಗಾಸೆ. ನಾನು ಹಾಗೆಯೇ ಬರುವುದಿಲ್ಲ. ನೀನೂ ಹಾಗೆಯೇ ಬರಕೂಡದು " ಎಂದು ಬಲಾತ್ಕಾರ ಮಾಡಿದಳು.

ವಿಮಲೆಯು ಅವಳ ಕೆನ್ನೆಯನ್ನು ಮೃದುವಾಗಿ ತಿರುಚುತ್ತಾ, "ನಿನಗೆ ಒಡವೆಗಳೆಂದರೆ ಆಸೆಯೇನೇ ?" ಎಂದಳು

ತಂಗಿಯೇ ಅಕ್ಕನಿಗೆ ಶೃಂಗಾರ ಮಾಡಿದಳು. ದೊಡ್ಡ ಮುತ್ತಿನ

ಸರವೊಂದನ್ನು ತೆಗೆದು ವಿಮಲೆಯ ಕೊರಳಿಗೆ ಕಟ್ಟಿದಳು. ಅವಳು ಹಾಕಿಕೊಂಡಿದ್ದ ಸಾಧಾರಣವಾದ ಬೆಂಡೋಲೆಯನ್ನು ತೆಗೆದು ದೊಡ್ಡ ಮುತ್ತುಗಳನ್ನು ಇಟ್ಟಂತೆ ಕಂಡುಬರುವ ಬೆಂಡೋಲೆ ಇಟ್ಟಳು. ಅಗಲವಾಗಿ ಚಿತ್ತಾರದ ಕೆಲಸಗಳನ್ನು ಮಾಡಿದ್ದ ಮೇಣದ ಕೈಬಳೆಗಳನ್ನು ಎರಡು ಕೈಗಳಿಗೂ ತೊಡಿಸಿದಳು. ತನ್ನ ವ್ಯಾನಿಟಿ ಬ್ಯಾಗುಗಳಲ್ಲಿ ಒಂದನ್ನು ತೆಗೆದು ಕೈಗೆ ಕೊಟ್ಟಳು.

ಇದಿಷ್ಟನ್ನೂ ಮಾಡಿ ನಾಗವೇಣಿಯು ವಿಮಲೆಯನ್ನು ನಿಲುವುಗನ್ನಡಿಯ ಎದುರಿಗೆ ನಿಲ್ಲಿಸಿ " ನೋಡಕ್ಕಾ. ಈಗ ನೀನು ಎಷ್ಟು ಚೆನ್ನಾಗಿ ಕಂಡು ಬರುತ್ತೀಯೆ. ಅಷ್ಟಿಲ್ಲದೆ ಒಡವೆಗಳನ್ನು ಭೂಷಣಗಳೆಂದು ಕರೆಯುತ್ತಾರೆಯೇ ?" ಎಂದು ಹೇಳಿದಳು.

ಅಕ್ಕತಂಗಿಯರ ಶೃಂಗಾರ ಮುಗಿದ ಹದಿನೈದು ಇಪ್ಪತ್ತು ನಿಮಿಷಗಳೊಳಾಗಾಗಿ ಶಂಕರನೂ ವೆಂಕಟರಾಯನೂ ಬಂದರು. ಅವರು ಆ ಮೊದಲೇ ಬಟ್ಟೆಬರೆಗಳನ್ನು ಧರಿಸಿ ಸಿದ್ಧವಾಗಿದ್ದರು. ನಾಲ್ಕು ಮಂದಿಯೂ ಸಿನಿಮಾಗೆ ಹೊರಟರು.

ಅವರು ಚಿತ್ರಮಂದಿರವನ್ನು ತಲುಪುವ ವೇಳೆಗೆ ಫಿಲಂ ಇನ್ನೂ ಆರಂಭವಾಗಿರಲಿಲ್ಲ. ಇನ್ನೂ ಹತ್ತು ನಿಮಿಷಗಳಿದ್ದವು. ಮಹಡಿಯ ಮೆಟ್ಟಿಲುಗಳನ್ನು ಹತ್ತಿ ಹೋದರೆ ಬಾಲ್ಕನಿಗೆ ಹೋಗುವ ಮೊದಲು ದೊಡ್ಡದೊಂದು ಅಂಗಳ. ಅದಕ್ಕೆಲ್ಲಾ ನಯವಾದ ಸಿಮೆಂಟ್ ಹಾಕಲಾಗಿದ್ದಿತು. ಸಿಮೆಂಟ್ ಹಸಿರು ಬಣ್ಣವಾಗಿದ್ದಿತು. ಹಸಿರಿನಲ್ಲಿ ಸಣ್ಣ ಸಣ್ಣ ಬಿಳಿಯ ಚೂರುಗಳು ಹೊಳೆಯುತ್ತಿದ್ದವು. ಒಂದು ಪಕ್ಕದಲ್ಲಿ ಅಂಗಳವು ಅರ್ಧ ವರ್ತುಲಾಕಾರವಾಗಿದ್ದಿತು. ಅದೇ ಆಕಾರವಾಗಿ ಮೆತ್ತೆಯಿಂದ ಕೂಡಿದ ಸುಖಾಸನವನ್ನು ಹಾಕಲಾಗಿದ್ದಿತು. ಅಲ್ಲಿ ಅನೇಕ ಸಣ್ಣ ಸಣ್ಣ ಮೇಜುಗಳನ್ನು ಹಾಕಿ ಅವುಗಳ ಮೇಲೆ ಆಷ್‌ಟ್ರೇಗಳನ್ನು ಇಡಲಾಗಿತ್ತು. ಅವುಗಳ ಪಕ್ಕದಲ್ಲಿ ಕುಳಿತುಕೊಳ್ಳುವುದಕ್ಕೆ ಮೆತ್ತೆಯಿಂದ ಕೂಡಿದ ಆಸನಗಳಿದ್ದವು. ಆ ಸುಖಾಸನಗಳೂ, ಮೇಜುಗಳೂ, ಆಷ್‌ಟ್ರೇಗಳೂ ನೆಲದಂತೆ ಹಸಿರು ಬಣ್ಣವಾಗಿಯೇ ಇದ್ದವು. ಗೋಡೆಗೂ ಹಸಿರು ಬಣ್ಣವನ್ನು ಬಳಿದು, ಹಸಿರು ಬಣ್ಣದ ದೀಪಗಳನ್ನು ಹಚ್ಚಲಾಗಿದ್ದಿತು. ಎಲ್ಲಿಂದಲೋ

ಸಣ್ಣ ದನಿಯಲ್ಲಿ ಸುಂದರವಾದುದೊಂದು ಪ್ರೇಮಗೀತವು ಕೇಳಿ ಬರುತ್ತಿತ್ತು.

ಆ ಅಂಗಳವು ಪಾತಾಳ ಲೋಕದ ಪಕ್ಷಿಯ ವಿಮಾನದಂತೆ ಕಂಗೊಳಿಸುತ್ತಿದ್ದಿತು. ನಾಲ್ಕೂ ಮಂದಿಯೂ ಅಲ್ಲಿ ಹೋಗಿ ಕುಳಿತುಕೊಂಡರು. ಶಂಕರನೂ ವೆಂಕಟರಾಯನೂ ಸಿಗರೇಟುಗಳನ್ನು ಹಚ್ಚಿಕೊಂಡು ಮಾತನಾಡ ತೊಡಗಿದರು. ವಿಮಲೆಯೂ ನಾಗವೇಣಿಯೂ ನಡುನಡುವೆ ಬಾಯಿ ಹಾಕುತ್ತಿದ್ದರು.

ನಿಮಿಷಗಳು ಕಳೆದಂತೆಲ್ಲಾ ಸ್ತ್ರೀಪುರುಷರು ಮೇಲಿಂದ ಮೇಲೆ ಬರುತ್ತಿದ್ದರು. ಕೆಲವರು ನೇರವಾಗಿ ಚಿತ್ರಮಂದಿರದೊಳಗೆ ಹೊರಟು ಹೋಗುತ್ತಿದ್ದರು. ಮತ್ತೆ ಕೆಲವರು ಅದೇ ಅಂಗಳದಲ್ಲಿ ಕುಳಿತುಕೊಂಡೂ ನಿಂತುಕೊಂಡೂ ಮಾತನಾಡುತ್ತಿದ್ದರು.

ಸ್ವಲ್ಪ ಹೊತ್ತಿನಲ್ಲಿಯೇ ಗಂಟೆಯು ಹೊಡೆಯಿತು. ಚಿತ್ರಮಂದಿರದೊಳಗಿನ ದೀಪಗಳು ಆರಿದವು. ಹಾಡುತ್ತಿದ್ದ ಪ್ರೇಮಗೀತವು ನಿಂತಿತು. ನಾಲ್ವರೂ ಒಳಗೆ ಹೋದರು. ಬಾಲ್ಕನಿಯಲ್ಲಿ ತಮಗಾಗಿಯೇ ರಿಸರ್ವ್ ಮಾಡಲಾಗಿದ್ದ ಆಸನಗಳಲ್ಲಿ ಕುಳಿತುಕೊಂಡರು.

ಚಿತ್ರವು ಆರಂಭವಾಯಿತು.

ಅದೊಂದು ಸಂಸಾರದ ಕಥೆ. ಗಂಡಹೆಂಡಿರ ಚಿತ್ರ. ಗಂಡನು ಅತ್ಯಂತ ದುರುಳ. ಹೆಂಡತಿ ಸತೀ ಸಾಧ್ವಿ. ಗಂಡನು ತನ್ನ ದುರ್ಗುಣಗಳಿಂದ ಹೆಂಡತಿಗೆ ಅತ್ಯಂತ ದಾರುಣವಾದ ಕಷ್ಟಗಳನ್ನು ತರುತ್ತಾನೆ. ಹೆಂಡತಿಯು ಸಹನೆಯಿಂದ ಸಹಿಸಿ ಗೆಲ್ಲುತ್ತಾಳೆ. ಕಡೆಗೆ ಗಂಡನು ತನ್ನ ತಪ್ಪುಗಳನ್ನು ತಿಳಿದುಕೊಳ್ಳುತ್ತಾನೆ. ಪಶ್ಚಾತ್ತಾಪ ಪಡುತ್ತಾನೆ. ತನ್ನ ಹೆಂಡತಿಯಲ್ಲಿ ಕ್ಷಮಾಯಾಚನೆ ಮಾಡುತ್ತಾನೆ.

ಅರ್ಧದ ವಿಶ್ರಾಂತಿ ಕಾಲದಲ್ಲಿ ಎಲ್ಲರೂ ಹೊರಗಡೆ ಬಂದರು. ಕಾಫಿಯನ್ನು ತರಿಸಿ ಕುಡಿದರು.

ವೆಂಕಟರಾಯನು " ವಿಮಲಾದೇವಿ. ಕವಿಗಳೂ ಕತೆಗಾರರೂ ಯಾವಾಗಲೂ ಸ್ತ್ರೀ ಪಕ್ಷಪಾತಿಗಳು. ಅವರು ಗಂಡಸರನ್ನು ಕೆಟ್ಟವರಾಗಿ ಚಿತ್ರಿಸುತ್ತಾರೆಯೇ ವಿನಾ, ಹೆಂಗಸರಿಂದ ಗಂಡಸರು ಪಡುವ ಬಾಧೆಗಳನ್ನು ಎಲ್ಲಿಯೂ ಚಿತ್ರಿಸಲಿಲ್ಲ. ಈ ಚಿತ್ರವೂ ಹಾಗೆಯೇ ಇದೆ " ಎಂದನು.

ವಿಮಲೆಯು " ಅದರಲ್ಲಿ ಪಕ್ಷಪಾತವೇನಿಲ್ಲ. ಅವುಗಳು ಸಹಜ ಚಿತ್ರಗಳು. ಹೆಂಗಸರಿಂದ ಕಷ್ಟಕ್ಕೆ ಸಿಕ್ಕಿ ಪಾಡು ಪಟ್ಟ ಒಬ್ಬ ಗಂಡಸಿನ ಉದಾಹರಣೆಯನ್ನು ಕೊಡಬಲ್ಲಿರಾ ? ಹೆಂಗಸರಾಗಿ ಹುಟ್ಟಿದಾಗಲೇ ಕಷ್ಟವು ನಮ್ಮ ಹಣೆಯಲ್ಲಿ ಬರೆದಿದೆ ". ಎಂದು ಹೇಳಿದಳು.

ಶಂಕರನು ನಡುವೆ ಬಾಯಿ ಹಾಕಿ " ಇದರಲ್ಲೆಲ್ಲಾ ಹೆಂಗಸರು ಗಂಡಸರೆಂಬ ವ್ಯತ್ಯಾಸವಿಲ್ಲ. ಒಳ್ಳೆಯವರು ಒಳ್ಳೆಯವರೇ. ಕೆಟ್ಟವರು ಕೆಟ್ಟವರೇ " ಎಂದು ಹೇಳಿದನು.

ಗಂಡಸರಿಬ್ಬರೂ ಹಚ್ಚಿದ್ದ ಸಿಗರೇಟು ಮುಗಿಯುವವರೆವಿಗೆ ಮಾತನಾಡುತ್ತಾ ಕುಳಿತಿದ್ದರು. ಅದಾದ ಕೂಡಲೇ ಒಳಗೆದ್ದು ಹೋದರು. ಅಷ್ಟು ಹೊತ್ತಿಗೆ ಚಿತ್ರವು ಆರಂಭವಾಯಿತು.

ಸಿನಿಮಾ ಮುಗಿಸಿಕೊಂಡು ಮನೆಗೆ ಬರುವ ವೇಳೆಗೆ ಒಂಬತ್ತೂವರೆಯಾಯಿತು. ಎಲ್ಲರೂ ಊಟ ಮಾಡಿದರು. ಶಂಕರನು ರಾತ್ರಿಯೇ ಮನೆಗೆ ಹೋಗಬೇಕೆಂದು ಹೇಳಿದನು. ವೆಂಕಟರಾಯನು ಅವನನ್ನು ಬಿಟ್ಟು ಬರಲು ಕೆಂಗೇರಿಗೆ ಹೋದನು.

ಮಹಡಿಯ ಮೇಲಿನ ಕೋಣೆಯಲ್ಲಿ ನಾಗವೇಣಿಯೂ ವಿಮಲೆಯೂ ಹಾಸಿಗೆಯ ಮೇಲೆ ಮಲಗಿಕೊಂಡು ಮಾತನಾಡುತ್ತಿದ್ದರು. ಅವರು ತಮಗೆ ತೋರಿದ ಮಾತುಗಳೆಲ್ಲವನ್ನೂ ಆಡಿದರು.

ಸುಮಾರು ಹನ್ನೊಂದೂವರೆ ಗಂಟೆಯಲ್ಲಿ ನಾಗವೇಣಿಯು " ಅಕ್ಕಾ. ನೀನು ಮಲಗಿಕೋ. ನಾನಿನ್ನು ಹೋಗುತ್ತೇನೆ " ಎಂದಳು.

" ಯಾಕೆ ? ಇದೇ ನಿನ್ನ ಕೋಣೆಯಲ್ಲವೇನೇ ?"

" ಹೌದಕ್ಕ. ಆದರೆ ರಾತ್ರಿಯ ಹೊತ್ತು ನಾನು ಇಲ್ಲಿ ಮಲಗುವುದಿಲ್ಲ. ನಮ್ಮಮ್ಮನಿಗೆ ಮೈ ಚನ್ನಾಗಿಲ್ಲವಲ್ಲ. ರಾತ್ರಿ ಅವರಿಗೇನಾದರೂ ಬೇಕೇನೋ ಎಂದು ಅಲ್ಲಿಯೇ ಮಲಗುತ್ತೇನೆ "

" ನಾನೊಬ್ಬಳೇ ಇಲ್ಲಿ ಮಲಗಿಕೊಳ್ಳಲೇ ?"

" ಭಯವೇನು ? ನಮ್ಮಮ್ಮ ಹುಷಾರಾಗಿದ್ದಾಗ ನಾನು ಒಬ್ಬಳೇ ಮಲಗಿಕೊಳ್ಳುತ್ತಿರಲಿಲ್ಲವೇ ?" ಎಂದು ಹೇಳಿ ಮೇಲೆದ್ದಳು.

ಎದ್ದವಳು ಹೋಗದೇ ಸುಮ್ಮನೆ ನಿಂತಿರಲು, ವಿಮಲೆಯು "ಯಾಕೆ ನಿಂತಿದ್ದೀಯೆ ? " ಎಂದಳು.

" ನೀನು ಮಲಗಿಕೋ. ನಾನು ಹೊದ್ದಿಸಿ, ದೀಪವಾರಿಸಿ, ಹೋಗುತ್ತೇನೆ " ಎಂದಳು.

ವಿಮಲೆಯು ನಕ್ಕು ಮಲಗಿಕೊಂಡಳು. ನಾಗವೇಣಿಯು ಅವಳಿಗೆ ಹೊದ್ದಿಸಿ, ದೀಪವಾರಿಸಿ, ಬಾಗಿಲು ಸೇರಿಸಿಕೊಂಡು ಹೋದಳು.

ವಿಮಲೆಗೆ ನಿದ್ದೆ ಬರಲಿಲ್ಲ. ಸ್ವಲ್ಪ ಹೊತ್ತು ಹಾಸಿಗೆಯ ಮೇಲೆಯೇ ಬಿದ್ದು ಹೊರಳಾಡಿದಳು. ಅನಂತರ ಎದ್ದು ಕುಳಿತುಕೊಂಡಳು. ಹಾಗೆಯೇ ಏನೇನೋ ಆಲೋಚನೆಗಳು ಬಂದುವು. ಕೋಣೆಯ ಬಾಗಿಲು ಹಾಕಿಕೊಂಡು ಬರಬೇಕೆಂದು ಅವಳಿಗೆ ತೋರಿತು. ಇನ್ನೂ ನಿದ್ದೆ ಬರಲಿಲ್ಲವಲ್ಲ, ನಿದ್ದೆ ಬಂದು ಮಲಗಿಕೊಳ್ಳುವಾಗ ಬಾಗಿಲು ಹಾಕಿಕೊಳ್ಳೋಣವೆಂದುಕೊಂಡಳು.

ರಾತ್ರಿ ಸುಮಾರು ಹನ್ನೆರಡು ಗಂಟೆಗಳ ಮೇಲೆ ಆಗಿರಬಹುದು. ಮನೆಯಲ್ಲವೂ ನಿಶ್ಶಬ್ದವಾಗಿದ್ದಿತು. ಅಂತಹ ನಿಶೆಯಲ್ಲಿ ಯಾರೋ ಬಾಗಿಲು ತೆರೆದ ಶಬ್ದವು ಕೇಳಿಬಂದಿತು. ಆ ಶಬ್ದವನ್ನು ಕೇಳಿ ವಿಮಲೆಗೆ ದಿಗಿಲಾಯಿತು. ಎದ್ದು ದೀಪ ಹಾಕಿ ಯಾರು ನೋಡೋಣವೆಂದುಕೊಂಡಳು.

ವಿಮಲೆಯು ಯೋಚನೆ ಮಾಡಿದಳು. ಸುಮಾರು ನಾಗವೇಣಿಯು ಬಂದಿದ್ದಾಳೆಂದುಕೊಂಡಳು.

" ನಾಗವೇಣೀ ?" ಎಂದು ಕರೆದಳು.

ಉತ್ತರವು ಬರಲಿಲ್ಲ. ನಾಗವೇಣಿಯು ಈ ನಡುರಾತ್ರಿಯಲ್ಲಿ ಬಂದಿದ್ದರೆ ಮಾತನಾಡುತ್ತಿದ್ದಳು. ಬಂದವಳು ಅವಳಲ್ಲ.

ಮರುಕ್ಷಣದಲ್ಲಿಯೇ ದೀಪ ಹಾಕಲಾಯಿತು. ಬಂದವನು ವೆಂಕಟರಾಯ. ಅವನು ದೀಪವನ್ನು ಹಾಕಿದ ಕೂಡಲೇ ಬಾಗಿಲು ಚಿಲಕ ಹಾಕಿ ಒಳಗೆ ಬಂದನು.

ಅವನನ್ನು ನೋಡಿದಾಗ ವಿಮಲೆಗೆ ಗಾಬರಿಯಾಯಿತು. ಅವಳು " ಇದೇನು ನೀವು ?" ಎಂದಳು.

ಅವಳ ಪ್ರಶ್ನೆಗೆ ಅವನು ಕೂಡಲೇ ಉತ್ತರ ಕೊಡಲಿಲ್ಲ. ಬಂದು

ಅವಳು ಕುಳಿತಿದ್ದ ವಿಶಾಲವಾದ ಹಾಸಿಗೆಯ ಮೇಲೆ ಕುಳಿತುಕೊಂಡು, ಮೆಲ್ಲನೆ " ಯಾಕೆ ವಿಮಲಾ ? ಎದ್ದು ಕುಳಿತಿದ್ದೀಯೆ ? ನಿದ್ದೆ ಬರಲಿಲ್ಲವೆ? ಎಂದು ಕೇಳಿದನು.

ಅವಳ ಗಂಟಲು ಕಟ್ಟಿಕೊಂಡು ಬಂದಿತ್ತು. ಕೂಡಲೇ ಮಾತನಾಡ ಲಾಗಲಿಲ್ಲ. ಕಷ್ಟದಿಂದ ಒಂದೊಂದೇ ಮಾತನಾಡುತ್ತಾ " ಇದೇನಿದು ? ಈ ಅರ್ಧರಾತ್ರಿಯಲ್ಲಿ ಇಲ್ಲೀಕೆ ಬಂದಿರಿ ? ಏನು ಸಮಾಚಾರ " ಎಂದು ಕೇಳಿದಳು.

" ನಾನು ಹೀಗೆಯೇ———" ಎಂದು ಹೇಳಿದ ಕೂಡಲೇ ಅವನ ಮಾತು ನಿಂತುಹೋಯಿತು. ಮುಂದೆ ಮಾತನಾಡುವ ಪದವನ್ನು ಹುಡು ಕುತ್ತಿರುವವನಂತೆ ಅವನು ತತ್ತರಿಸಿದನು. ಅನಂತರ ಚೇತರಿಸಿಕೊಂಡು "ವಿಮ್ಮು, ಹಾಗೆಯೇ ಕುಳಿತಿರುವಾಗ ನನಗೊಂದು ಯೋಚನೆಯು ಬಂದಿತು. ಪರಸ್ಪರ ಪ್ರೇಮ ಮಾಡುತ್ತಿರುವ ನಾವು ಯಾಕೆ ಪಾಡು ಪಡಬೇಕು ? ಯಾವನೋ ತಿಳಿಯದ ಅಪರಿಚಿತನಿಗಾಗಿ ನಮ್ಮಿಬ್ಬರ ಜೀವನಗಳು ಯಾಕೆ ಹಾಳಾಗಬೇಕು. ನಾವು ಇದನ್ನು ಸರಿಮಾಡಿಕೊಳ್ಳುವವರೆವಿಗೆ ನಮಗೆ ಸುಖವಿಲ್ಲ. ನಮಗೆ ಮದುವೆಯಾಗದೇ ಇರಬಹುದು. ಆದರೆ ನೀನು ನನ್ನ ಪತ್ನಿ. ನಾನು ನಿನ್ನನ್ನು ಮನಸಾರೇ ಪ್ರೀತಿಸುತ್ತೇನೆ. ಆ ಪ್ರೀತಿಯು ಎಷ್ಟೆಂಬುದನ್ನು ಪ್ರತಿಕ್ಷಣವೂ ವಿರಹವೇದನೆಯಿಂದ ತಪ್ತವಾಗುತ್ತಿರುವ ನನ್ನ ಹೃದಯವು ಅಳೆಯಲಾರದಾಗಿದೆ. ವಿಮಲಾ. ಇನ್ನು ಅತ್ಯಲ್ಪ ಕಾಲ ದಲ್ಲಿಯೇ ನಾವು ಸಂಸಾರವನ್ನು ಆರಂಭಿಸಿ ಇವುಗಳನ್ನೆಲ್ಲಾ ಮರೆತುಬಿಡ ಬೇಕು. ವಿಮ್ಮು———ವಿಮ್ಮು, ನನ್ನ ವಿಷಯದಲ್ಲಿ ನೀನು ದಯಾರಹಿತಳಾ ಗಬೇಡ. ನಾನೇನು ತಪ್ಪು ಮಾಡಿದ್ದೇನೆ. ನೀನೇ ಹೇಳು. ನನ್ನ ಹೆಂಡ ತಿಯನ್ನು ಪ್ರೇಮ ಮಾಡುವುದೇ ನನ್ನ ಅಪರಾಧವೇ ?" ಎಂದನು.

ಈ ಮಾತುಗಳನ್ನು ಹೇಳುವಾಗ ಅವನು ಅಂಗಲಾಚುವಂತೆ ಅವಳ ಕಡೆ ನೋಡುತ್ತಿದ್ದನು. ಹಾಸಿಗೆಯ ಮೇಲೆ ಕುಳಿತಿದ್ದವಳು ಕುಳಿತುಕೊ ಳ್ಳಲಾರದೇ ದಿಂಬುಗಳ ಮೇಲೆ ಒರಗಿಕೊಂಡಿದ್ದಳು. ಆದರೂ ಅವಳ ಶರೀ ರವು ಕಂಪಿಸುತ್ತಿದ್ದಿತು.

ಅವಳು ನಡುಗುವ ಧ್ವನಿಯಿಂದ " ಈ ಮಾತುಗಳನ್ನು ಈಗೇಕೆ

ಆಡುವುದು ? ಈಗಾಗಲೇ ಅರ್ಧ ರಾತ್ರಿಯು ಮೇಲಾಗಿದೆ. ನನಗೆ ದಣಿವಾಗಿದೆ. ನಿಮಗೂ ದಣಿವಾಗಿರಬಹುದು. ಹೋಗಿ ಮಲಗಿಕೊಳ್ಳಿ. ನಾಳೆ-ನಾಡಿದ್ದು ಬೇಕಾದ ಹಾಗೆ ಮಾತನಾಡೋಣ "ಎಂದಳು.

ಅವನು ದಿಟ್ಟತನದಿಂದ "ಇದೇನು ವಿಮ್ಮು. ಈ ರೀತಿಯಾಗಿ ಮಾತನಾಡುತ್ತಿರುವೆ. ಎಂದೋ ನಿನಗೆ ಏನೋ ತೋರಿತು. ಅದರಿಂದ ಆದ ಪ್ರಮಾದವೇನು ? ನಾಳೆ, ನಾಡಿದ್ದು ನಾವು ಮಾತನಾಡಬೇಕಾದ್ದೇನಿದೆ ? ದೇವರ ಎದುರಿಗೂ ಮನುಷ್ಯರ ಎದುರಿಗೂ ನಾವು ದಂಪತಿಗಳು " ಎಂದನು.

ಆ ಮಾತು ಕೇಳಿ ವಿಮಲೆಗೆ ವಿಪರೀತ ಕೋಪವು ಬಂದಿತು. ಮೈಯೆಲ್ಲಾ ಉರಿಯಿತು. ಅವಳು ದುರುಗುಟ್ಟಿಕೊಂಡು ನೋಡುತ್ತಾ "ಅದೆಲ್ಲಾ ಈಗ ಬೇಡ. ನಿಮ್ಮ ಉಪದೇಶವೊಂದೂ ನನಗೆ ಬೇಡ. ನೀವು ಕೂಡಲೇ ಇಲ್ಲಿಂದ ಹೊರಟು ಹೋಗಿರಿ". ಎಂದಳು.

"ಯಾಕೆ ವಿಮ್ಮು. ನಾನು ಇಲ್ಲಿರುವುದರಲ್ಲಿ ತಪ್ಪೇನಿದೆ ? ಯಾಕೆ ಈ ರೀತಿಯಾಗಿ ನನ್ನನ್ನು ಹೋಗಲು ಹೇಳುತ್ತಿದ್ದಿಯೆ ?"

"ಹೌದು ತಪ್ಪು. ಸಾವಿರ ಬಾರಿ ತಪ್ಪು. ಈ ಕೋಣೆಗೆ ಬರಲು ನಿಮಗೆ ಅಧಿಕಾರವಿಲ್ಲ. ಹೊರಗೆ ಹೋಗಿ "

ಅವನು ನಗುತ್ತಾ " ಯಾಕೆ ತಪ್ಪು ? ಯಾಕೆ ಇಲ್ಲಿಗೆ ಬರಲು ಅಧಿಕಾರವಿಲ್ಲ ? ನನ್ನ ಹೆಂಡತಿಯ ಕೋಣೆಗೆ ಬರುವುದರಲ್ಲಿ ತಪ್ಪೇನಿಲ್ಲ. ನನ್ನ ಹೆಂಡತಿಯ ಕೋಣೆಯಲ್ಲಿರಲು ಅಧಿಕಾರವಿಲ್ಲದೇ ಇಲ್ಲ. ನಾನು ನನ್ನ ಚಿನ್ನಳ ಮೇಲಿನ ಮೋಹದಿಂದ ಬಂದಿದ್ದೇನೆ" ಎಂದು ಹೇಳುತ್ತಾ ಅವಳನ್ನು ಬಲಾತ್ಕಾರವಾಗಿ ಚುಂಬಿಸಿದನು.

## ೧೭

ವಿಮಲೆಯು ಬೆಳಗಾಗ ಏಳುವ ವೇಳೆಗೆ ಬಹಳ ಹೊತ್ತಾಗಿದ್ದಿತು. ಅವಳು ಕಾಫೀ ಕುಡಿದುಕೊಂಡು, ನಾಗವೇಣಿಯಿಂದ ಬೀಳ್ಕೊಂಡು, ಕೆಂಗೇರಿಯ ಮನೆಗೆ ಬರುವ ವೇಳೆಗೆ ಸುಮಾರು ಒಂಬತ್ತೂವರೆ ಗಂಟೆಯ ಮೇಲಾಗಿದ್ದಿತು. ಆ ವೇಳೆಗೆ ಶೀಲಾ ವರದೆಯರು ಅಡಿಗೆಯ ಪ್ರಯತ್ನಗಳಲ್ಲಿದ್ದರು. ಹಿಂದಿನ ದಿನ ತಾವು ಸಿನಿಮಾಗೆ ಹೋಗಿದ್ದುದನ್ನು ಶಂಕರನೇ ತಂಗಿಯರಿಗೆ ಹೇಳಿದ್ದನು. ವಿಮಲೆಯು ಅದನ್ನೆಲ್ಲಾ ವಿವರ ವಿವರವಾಗಿ ಹೇಳಿದಳು. ಸೂಕ್ಷ್ಮವಾಗಿ ಕತೆಯನ್ನು ಹೇಳಿದಳು. ಅಕ್ಕತಂಗಿಯರು ಚಿತ್ರವನ್ನೂ ನಟನಟಿಯರನ್ನೂ ಕುರಿತು ಸ್ವಲ್ಪ ಹೊತ್ತು ಚರ್ಚಿಸುತ್ತಿದ್ದರು.

ಮಾಮೂಲಿನ ದಿನಚರ್ಯೆಯು ಆರಂಭವಾದರೂ ಕೂಡಾ ವಿಮಲೆಯ ಮನಸ್ಸು ಅತ್ಯಂತ ಚಿಂತೆಯಲ್ಲಿಯೇ ಇದ್ದಿತು. ಅವಳಿಗೆ ಬಹಳ ಮುಜುಗರವಾಗಿತ್ತು. " ದೇವರೇ ! ನನ್ನನ್ನು ಎಂತಹ ಸ್ಥಿತಿಗೆ ತಂದೆ " ಎಂದುಕೊಳ್ಳುತ್ತಿದ್ದಳು.

ನಟರಾಜನ ಜ್ಞಾಪಕವು ಬರುತ್ತಿದ್ದಿತು. ಆದರದು ಮೊದಲಿನಷ್ಟು ಸ್ಪಷ್ಟವಾಗಿರಲಿಲ್ಲ. ಆ ನೆನಪು ಪ್ರಿಯವಾದರೂ ಏನೋ ಮಂಕು ಮಂಕಾಗಿದ್ದಿತು. ಅದರೂ ಸಹ ನಟರಾಜನಿಂದ ಅವಳ ಮನಸ್ಸಿನ ಮೇಲೆ ವಿಪರೀತ ಪರಿಣಾಮವಾಗಿತ್ತು. ಮೊದಲು ತನ್ನ ತಂಗಿಯರು, ತನ್ನ ಅಣ್ಣ ತಮ್ಮಂದಿರು ಎಂದರೆ ಅವಳಿಗೆಷ್ಟೋ ಮಮತೆ ಇದ್ದಿತು. ಇಂದೂ ಮಮತೆ ಇದೆ. ಆದರೆ ಅದು ಮೊದಲಿನಷ್ಟು ಪ್ರಖರವಲ್ಲ.

ಇದೆಲ್ಲಾ ನಿಜವಿರಬಹುದು, ಅಥವಾ ಮನಸ್ಸಿನ ಮುಜುಗರವೇ ಇದಕ್ಕೆ ಕಾರಣವಾಗಿರಬಹುದು.

ಅವಳಿಗೆ ವೆಂಕಟರಾಯನ ಜ್ಞಾಪಕವು ಬರದಿರಲಿಲ್ಲ. ಅವನ ನೆನಪು ಬಂದೊಡನೆಯೇ ಅವಳ ಮೈಯೆಲ್ಲವೂ ಉರಿಯ ತೊಡಗಿತು. ತನ್ನ ದೇಹವೇ ತನಗೆ ಅಸಹ್ಯವಾದಂತೆ ಆಯಿತು. ವಾಸ್ತವವಾಗಿ ಹೇಳುವುದಾದರೆ ಅವನ ಮೇಲೆ ದ್ವೇಷ ಉಂಟಾಗಿದ್ದಿತು. ಆದರೇನು ಪ್ರಯೋಜನ? ಅವಳು ಅವನನ್ನು ಪ್ರೇಮ ಮಾಡುತ್ತಿದ್ದಾಳೆಯೋ, ದ್ವೇಷ ಮಾಡುತ್ತಿದ್ದಾಳೆಯೋ? ಅಂತೂ ಅವನಿಗೆ ಸಿಕ್ಕಿಹಾಕಿಕೊಂಡಿದ್ದಾಳೆ. ಪ್ರತಿ ಕ್ಷಣವೂ ಅವನಿಂದ ದೂರವಾಗಲು ಪ್ರಯತ್ನ ಮಾಡುತ್ತಿದ್ದಾಳೆ. ಆದರೆ ಅವನು ಬಿಡುವುದಿಲ್ಲ. ಜಿಗಣೆಯಂತೆ ಕಚ್ಚಿಕೊಂಡು ಬಿಟ್ಟಿದ್ದಾನೆ.

ಶೀಲಾ ವರದೆಯರು ಅಷ್ಟು ಹೊತ್ತಿಗೆ ಮನೆಗೆಲಸಗಳನ್ನು ಮುಗಿಸಿದ್ದರು. ಶಂಕರನ ಮತ್ತು ವಾಸುವಿನ ಬಟ್ಟೆಗಳನ್ನು ಒಗೆದಿದ್ದರು. ವಿಮಲೆ ಮತ್ತು ಅತ್ತೆಯ ಹಾಗೂ ತಮ್ಮ ಸೀರೆಗಳನ್ನು ಹಿಂಡಿ ಹರಡಿದ್ದರು. ಅಡಿಗೆಯ ಕೆಲಸಕ್ಕೆ ಕೈ ಹಚ್ಚಿದ್ದರು. ವಿಮಲೆಗೆ ಕಣ್ಣಿಗೆ ಬೀಳುವಂತೆ ಯಾವ ಕೆಲಸವೂ ಇರಲಿಲ್ಲ. ಸುಮ್ಮನೆ ಕುಳಿತುಕೊಂಡರೆ ಮನಸ್ಸಿನ ಬಾಧೆಯು ವಿಪರೀತವಾಗುತ್ತದೆ. ಏನಾದರೂ ಮಾಡುತ್ತಿದ್ದರೆ ಉತ್ತಮ. ಮನೋವ್ಯಥೆಯು ಸ್ವಲ್ಪ ಮಟ್ಟಿಗಾದರೂ ಕಡಿಮೆಯಾಗುತ್ತದೆ. ಆದರಿಂದ ಮನೆಯನ್ನೆಲ್ಲಾ ಸವರಿಸ ತೊಡಗಿದಳು. ಕೆಲಸಕ್ಕೆ ಬಾರದ ಚಿಂದಿಪಂದಿ ಬಟ್ಟೆಗಳನ್ನೆಲ್ಲಾ ಸೇರಿಸಿ ಗಂಟು ಕಟ್ಟಿ ಹಾಕಿದಳು. ಎಲ್ಲೆಲ್ಲೋ ಬಿದ್ದಿದ್ದ ಹಳೆಯ ಅಂಗಿಗಳನ್ನೂ ಟವಲುಗಳನ್ನೂ ತೆಗೆದಿಟ್ಟಳು. ಶಂಕರನ ಹರಿದು ಹೋದ ಎರಡು ಪಂಚೆಗಳನ್ನು ನೋಡಿ, ಬೆಡ್‌ಷೀಟ್‌ಗಳಾಗುತ್ತವೆ ಎಂದುಕೊಂಡಳು. ಮನೆಯನ್ನು ತೆರಪು ಮಾಡಿ, ಗುಡಿಸಿ, ಸಾರಿದಳು. ಸಾರಿಸಿಯಾದ ಮೇಲೆ ಬಟ್ಟೆಗಳನ್ನು ಒಗೆಯ ಬೇಕೆಂದಿದ್ದಳು. ಇತರ ಕೆಲಸಗಳು ಮುಗಿಯುವ ವೇಳೆಗೆ ಆಯಾಸವಾಗಿದ್ದಿತು. ಮತ್ತೊಂದು ದಿನ ಒಗೆಯೋಣವೆಂದುಕೊಂಡು ಎದ್ದು ಊಟ ಮಾಡಿ ಮಲಗಿದಳು. ದಣಿದಿದ್ದ ಅವಳಿಗೆ ಚೆನ್ನಾಗಿ ನಿದ್ದೆಯು ಬಂದಿತು.

ಮಧ್ಯಾಹ್ನ ಕಾಫಿಯನ್ನು ಕುಡಿಯುತ್ತಿರುವಾಗ ನಾಗವೇಣಿಯು

ಮಾತು ಬಂದಿತು. ಶೀಲಾ ವರದೆಯರಿಗೆ ಅವಳ ವಿಷಯವನ್ನು ಎಷ್ಟು ಮಾತನಾಡಿದರೂ ತೃಪ್ತಿಯಿಲ್ಲ. ವಿಮಲೆಗೂ ಅವಳನ್ನು ಕಂಡರೆ ಬಹಳ ವಿಶ್ವಾಸ. ಆದರೆ ತಾನು ಅವಳ ಪ್ರೇಮ ಭಂಗಕ್ಕೆ ಕಾರಣಳಾದೆನೆಂದು ಆಗುತ್ತಿದೆಯಲ್ಲಾ ಎಂದು ಆಗಾಗ ಚುಚ್ಚಿದಂತೆ ಆಗುತ್ತಿತ್ತು.

ಶೀಲೆಯು " ನಾಗವೇಣಿಯನ್ನು ವೆಂಕಟರಾಯರಿಗೆ ಕೊಡುವುದಾಗಿ ಅಚ್ಚಮ್ಮನವರು ಹೇಳಿದರಲ್ಲಾ. ಅವಳು ಒಪ್ಪಿದ್ದಾಳೇನಕ್ಕಾ " ಎಂದಳು.

ವಿಮಲೆಯು " ನೀನು ಅವಳನ್ನೇ ಯಾಕೆ ಕೇಳಲಿಲ್ಲ ?" ಎಂದಳು.

" ನಾನು ಕೇಳ ಬೇಕೆಂದಿದ್ದೆ. ಆ ಗಲಾಟೆಯಲ್ಲಿ ಕೇಳಲಾಗಲಿಲ್ಲ. ಪುರಸತ್ತಾಗುವ ವೇಳೆಗೆ ನಾವು ಬಂದು ಬಿಟ್ಟೆವು "

" ಅವಳು ನನಗಿಂತ ಸಣ್ಣವಳು. ನಾನು ಅದನ್ನೆಲ್ಲಾ ಹೇಗೆ ಕೇಳಲಿ ?"

" ಓ ! ನೀನು ಬಿಡುತ್ತೀಯಾ ? ನೀನು ಯಾವುದನ್ನೂ ಬಿಡದೇ ಕೇಳಿಯೇ ಇರುತ್ತೀ. ನಮ್ಮೊಡನೆ ಹೇಳುವುದಿಲ್ಲ. ಅಷ್ಟೇ "

ವಿಮಲೆಯು ತಂಗಿಯ ಮಾತಿಗೆ ಜವಾಬು ಕೊಡಲಿಲ್ಲ.

ಅಷ್ಟು ಹೊತ್ತೂ ಮಾತನಾಡದೇ ಕುಳಿತಿದ್ದ ವರದೆಯು " ನಾನು ಹೇಳುತ್ತೇನೆ, ಕೇಳಿ. ನಾಗವೇಣಿಯು ಒಪ್ಪಿದ್ದಾಳೆ. ಅವಳು ವೆಂಕಟರಾಯರ ಕಡೆಗೆ ನೋಡುವುದರಲ್ಲಿಯೇ ನಾನು ಕಂಡುಕೊಂಡೆ " ಎಂದಳು.

ವಿಮಲೆಯು ಹುಸಿ ಕೋಪದಿಂದ ವರದೆಯನ್ನು ಗುದ್ದಿ " ಪ್ರಣಯ ಕಟಾಕ್ಷ ವೀಕ್ಷಣದಲ್ಲಿ ಪರಿಣತೆ " ಎಂದು ಹೇಳಿ ಹೊರಟು ಹೋದಳು.

ಈ ವಿಷಯವಾಗಿ ತಂಗಿಯರೊಡನೆ ಚರ್ಚೆ ಮಾಡಲು ಅವಳಿಗೆ ಇಷ್ಟ ವಿರಲಿಲ್ಲ. ಅವಳು ಹೋಗಿ ಅತ್ತೆಯೊಡನೆ ಕುಳಿತುಕೊಂಡು ಮಾತನಾಡ ತೊಡಗಿದಳು.

ಮಾರನೆಯ ದಿನ ಭಾನುವಾರ. ಶಂಕರನು ಫ್ಯಾಕ್ಟರಿಗೆ ಹೋಗಬೇಕಾಗಿ ರಲಿಲ್ಲ. ಅವಸರವಿಲ್ಲದಿದ್ದರೂ ಬೇಕಾದಷ್ಟು ಕೆಲಸಗಳನ್ನು ಹಚ್ಚಿಕೊಂಡಿದ್ದರು. ಮನೆಯಲ್ಲಿ ಸೊಳ್ಳೆ, ತಿಗಣೆಗಳು ಹೆಚ್ಚಿದ್ದವು. ಶಂಕರನು ಯಾರಿಂ

ದಲೋ ಪಂಪ್ ಕೇಳಿ ತಂದಿದ್ದ. ರಾತ್ರಿ ಮನೆಗೆ ಬರುವಾಗ ಡಿ. ಡಿ. ಟಿ ಹೊಡೆಯುವುದೆಂದೂ ಮಧ್ಯಾಹ್ನ ಊಟ ಮಾಡಿದ ಮೇಲೆ ಎಲ್ಲರೂ ಸಿನಿಮಾಗೆ ಹೋಗುವುದೆಂದೂ ನಿರ್ಧರಿಸಿದ್ದರು.

ಶೀಲೆ ವರದೆಯರು ಮನೆಯನ್ನು ತೆರಪು ಮಾಡಿ ಸಾಮಾನುಗಳೆಲ್ಲವನ್ನೂ ಹೊರಗೆ ತಂದಿಟ್ಟರು. ಶಂಕರನು ಪುಡಿಯನ್ನು ನೀರಿನಲ್ಲಿ ಕಲಿಸಿ ತಂಗಿಯರ ಸಹಾಯದಿಂದ ಡಿ. ಡಿ. ಟಿ. ಹೊಡೆಯಲು ಮೊದಲು ಮಾಡಿದನು. ವಾಸುವೂ ಅವರಿಗೆ ಸಹಾಯ ಮಾಡುತ್ತಿದ್ದನು. ಹಿಂದಿನ ದಿನ ಸಾಯಂಕಾಲವೇ ವಿಮಲೆಯು ತೋಟದಲ್ಲಿ ಹುರುಳೀ ಕಾಯಿಗಳು ಬಿಟ್ಟಿರುವುದನ್ನು ನೋಡಿದ್ದಳು. ಹುಳಿ ಮಾಡಬೇಕೆಂದು ಕೊಂಡಿದ್ದಳು. ಅವುಗಳನ್ನು ಕಿತ್ತುಕೊಂಡು ಅವಳು ಅಡಿಗೆಯ ಮನೆಯೊಳಗೆ ಹೋದಳು.

ಅಡಿಗೆಯು ಮುಗಿದು, ಒಗ್ಗರಣೆ ಹಾಕುವ ವೇಳೆಗೆ ಸುಮಾರು ಹನ್ನೊಂದೂವರೆ ಗಂಟೆಯಾಗಿತ್ತು. ಅಷ್ಟು ಮಾಡಿ ಮುಖದಲ್ಲಿ ಮೂಡಿದ್ದ ಬೆವರಿನ ಹನಿಗಳನ್ನು ಸೆರಗಿನಿಂದ ಒರಸಿಕೊಳ್ಳುತ್ತಾ ಹೊರಗೆ ಬಂದಳು. ಹಜಾರದಲ್ಲಿ ಗೋಡೆಗಳು ಒಣಗಿರಲಿಲ್ಲ. ನೆಲದ ಮೇಲೆ ಬಿಳಿಯ ನೀರು ಹಾಗೆ ಹಾಗೆಯೇ ಇದ್ದಿತು. ಅದರ ಮೇಲೆಯೇ ಸಾಮಾನುಗಳನ್ನು ಇಟ್ಟಿದ್ದರು.

ಹೊರಗಡೆ ಅಂಗಳದಲ್ಲಿ ಗಲಾಟೆಯಾಗಿದ್ದಿತು. ಅಲ್ಲಿ ಹುಡುಗರೆಲ್ಲರೂ ಸೇರಿ ಡಿ. ಡಿ. ಟಿ. ಹೊಡೆಯುತ್ತಿದ್ದರು. ವಿಮಲೆಯು ಅಲ್ಲಿಗೆ ಹೋದಳು. ಶಂಕರನೊಡನೆ ವಯಸ್ಸಾದವನೊಬ್ಬನಿದ್ದಾನೆ. ಅವನು ಕೆಳಗೆ ನಿಂತು ಪಂಪ್ ಮಾಡುತ್ತಿದ್ದಾನೆ. ಶಂಕರನು ಕೊಳವೆ ಹಿಡಿದು ಓಡಿಯಾಡುತ್ತಿದ್ದಾನೆ.

ವಿಮಲೆಯು ಎರಡು ಮೂರು ಸಲ ಬಂದಿದ್ದಳು. ಆಗ ಈತನು ಇರಲಿಲ್ಲ. ಯಾರು ವಯಸ್ಸಾದವನೆಂದು ನೋಡಿದಳು. ಅವನು ವೆಂಕಟರಾಯ.

" ಇದೇನು ಇವರಿಂದ ಕೆಲಸ ಮಾಡಿಸುತ್ತಿದ್ದೀಯೆ ? ಶಂಕರ್ " ಎಂದು ಕೇಳಿದಳು.

" ಬೇಡ ಎಂದರೆ ಕೇಳುವುದಿಲ್ಲವಲ್ಲ, ವಿಮಲಾ "

ವೆಂಕಟರಾಯನು "ನಾನೂ ನಿಮ್ಮವನೇ ! ಕೆಲಸ ಮಾಡಿದರೇನಂತೆ, ಬಿಡಿ" ಎಂದು ವಿಮಲೆಯನ್ನು ಉದ್ದೇಶ ಮಾಡಿ ಹೇಳಿದನು.

ವರದೆಯು "ಈಗ ಅರ್ಧ ನಮ್ಮವರಾಗಿದ್ದೀರಿ. ಪೂರಾ ನಮ್ಮವರಾಗಿಲ್ಲ" ಎಂದಳು.

ಕೂಡಲೇ ವೆಂಕಟರಾಯನು "ಹಾಗೆಂದರೆ ?" ಎಂದುಬಿಟ್ಟನು. ಮಾತು ಬಾಯಿಂದ ಹೊರಗಡೆ ಬಂದ ನಂತರ ಹಾಗನ್ನಬಾರದಾಗಿದ್ದಿತೆಂದು ಕೊಂಡನು.

ಮಾತು ಎತ್ತಕಡೆಗೋ ತಿರುಗಿದುದರಿಂದ ವಿಮಲೆಯ ಎದೆಯು ಹೊಡೆದುಕೊಳ್ಳಲಾರಂಭವಾಯಿತು.

"ನಮ್ಮವರಾಗುವುದೆಂದರೆ ನೀವು ಬೆಂಗಳೂರು ಬಿಟ್ಟು ಕೆಂಗೇರಿಯಲ್ಲಿಯೇ ಇರಬೇಕು" ಎಂದು ವರದೆಯು ನಗುತ್ತಾ ಹೇಳಿದಳು.

ವಿಮಲೆಯು ದೊಡ್ಡದೊಂದು ಭಾರವು ಇಳಿದಂತೆ ನಿಟ್ಟುಸಿರು ಬಿಟ್ಟಳು.

ಅಲ್ಲಿಯೇ ಕುಳಿತಿದ್ದ ಸಾವಿತ್ರಮ್ಮನವರು "ಶಂಕರ. ನಿನ್ನ ಸ್ನೇಹಿತರನ್ನು ಇಲ್ಲಿಯೇ ಊಟ ಮಾಡುವುದಕ್ಕೆ ಹೇಳು. ಹೊತ್ತಾಗಿದೆ" ಎಂದರು.

ಶಂಕರನು "ಹನ್ನೆರಡು ಗಂಟೆಯಾದ ಮೇಲೆ ಎಲ್ಲಿ ಹೋಗುತ್ತಾರತ್ತೆ. ಇಲ್ಲಿಯೇ ಊಟ ಮಾಡುತ್ತಾರೆ" ಎಂದು ಹೇಳಿದನು.

ಎಲ್ಲರೂ ಸ್ನಾನ ಮಾಡಿ ಊಟಕ್ಕೆ ಕುಳಿತರು.

ಊಟ ಮಾಡುತ್ತಾ ವೆಂಕಟರಾಯನು "ಹುಳಿಯು ಬಹಳ ಚೆನ್ನಾಗಿದೆ. ಇದೇನಾದರೂ ಯುದ್ಧ ಕಾಲವಾಗಿದ್ದರೆ ಇಂತಹ ಹುಳಿಯನ್ನು ಮಾಡಿಸಿ ಬಾಟಲುಗಳಲ್ಲಿ ಹಾಕಿ ಮಾರಿ ದುಡ್ಡು ಸಂಪಾದನೆ ಮಾಡುತ್ತಿದ್ದೆ" ಎಂದು ಹೇಳಿದನು.

ನಿಜವಾಗಿಯೂ ಹುಳಿಯು ಬಹಳ ಚೆನ್ನಾಗಿದ್ದಿತು.

ಊಟ ಮಾಡಿ ಕುಳಿತು ಮಾತನಾಡುತ್ತಿದ್ದರು. ಎರಡು ಗಂಟೆಯಾಗುತ್ತಲೇ ಸಿನಿಮಾಗೆ ಹೋಗಬೇಕೆಂಬ ಮಾತು ಬಂದಿತು. ವಿಮಲೆಯು ಎದ್ದು ಚಹಾ ಮಾಡಿ ಎಲ್ಲರಿಗೂ ತಂದು ಕೊಟ್ಟಳು.

ಅನಂತರ " ನೀವುಗಳೆಲ್ಲರೂ ಹೋಗಿ ಬನ್ನಿ. ನಾನು ಮೊನ್ನೆ
ತಾನೇ ಹೋಗಿದ್ದೇನೆ. ಅಲ್ಲೆಲ್ಲಿಯೂ ಕಾಫೀ ತಿಂಡಿಗೆ ಹೋಗಬೇಡಿ. ನೇ
ವಾಗಿ ಬಂದು ಬಿಡಿ. ನಾನೇನಾದರೂ ಮಾಡಿಟ್ಟಿರುತ್ತೇನೆ " ಎಂದು ಹೇ
ವಿಮಲೆಯು ವೆಂಕಟರಾಯನ ಕಡೆಗೆ ನೋಡುತ್ತಾ " ನೀವೇನೂ ಬಸ್‌ನ
ಹೋಗಬೇಕಾಗಿಲ್ಲ. ವೆಂಕಟರಾಯರೇ ನಿಮಗೆಲ್ಲಾ ಥಿಯೇಟರಿನ ಬ
ಡ್ರಾಪ್ ಕೊಡುತ್ತಾರೆ " ಎಂದು ಹೇಳಿದಳು.

ಕೂಡಲೇ ವೆಂಕಟರಾಯನು " ಇಲ್ಲ. ಈ ಬಿಸಿಲಿನಲ್ಲಿ ನಾನ
ಹೋಗುವುದಿಲ್ಲ. ಊಟ ಮಾಡಿದ ಮೇಲೆ ಸ್ವಲ್ಪ ಹೊತ್ತು ನನಗೆ ಮ
ಗುವ ಅಭ್ಯಾಸ. ಮಲಗದೇ ಮಾತಿನಲ್ಲಿಯೇ ಕುಳಿತಿದ್ದೇನೆ " ಎಂದನು

ಶಂಕರನು " ವೆಂಕಟರಾಯರು ನಮಗೆ ಡ್ರಾಪ್ ಕೊಡದಿದ್ದರೆ ನೀ
ಗಳೆಲ್ಲಾ ಬೇಗ ಏಳಬೇಕು. ಬಸ್ ತಪ್ಪಿದರೆ ಸಿನಿಮಾ ತಪ್ಪಿ ಹೋಗ
ತ್ತದೆ " ಎಂದನು.

ವೆಂಕಟರಾಯನು " ಅದೇಕೆ ಬಸ್‌ನಲ್ಲಿ ಹೋಗುವುದು ? ನನ
ಕಾರನ್ನೇ ತೆಗೆದುಕೊಂಡು ಹೋಗಿ ಬನ್ನಿ. ಈಗೇನು ಅವಸರವಿ
ಮೂರು ಗಂಟೆಗೆ ಹೋದರಾಯಿತು " ಎಂದನು.

ವರದೆಯೂ ಶಂಕರನೂ ಯಾರೂ ಗಮನಿಸದಂತೆ ಪರಸ್ಪರ ಮುಖ
ಳನ್ನು ನೋಡಿಕೊಂಡರು.

ಮೂರು ಗಂಟೆಯ ಹೊತ್ತಿಗೆ ಅವರೆಲ್ಲರೂ ಕಾರಿನಲ್ಲಿ ಹೊರಟ
ಹೋದರು. ಅವರು ಹೋಗುವ ವೇಳೆಗೇ ವೆಂಕಟರಾಯನು ಮಲಗಿ ನಿ
ಮಾಡುತ್ತಿದ್ದನು.

ಅವನೆದ್ದು ಬರುವ ವೇಳೆಗೆ ವಿಮಲೆಯು ಟೊಮೆಟೋ ಕಾಯಿಗಳನ
ಹೆಚ್ಚುತ್ತಿದ್ದಳು. ಅವನೂ ಬಂದು ಕುಳಿತುಕೊಂಡನು.

ಸ್ವಲ್ಪ ಹೊತ್ತಾದರೂ ಅವಳು ಮಾತನಾಡದೇ ಇದ್ದುದನ್ನು ನೋ
ವೆಂಕಟರಾಯನು " ವಿಮಲಾ. ನನ್ನ ಮೇಲೆ ಕೋಪವೇ ?" ಎಂ
ಕೇಳಿದನು.

ಅದಕ್ಕೂ ವಿಮಲೆಯು ಉತ್ತರ ಹೇಳಲಿಲ್ಲ.

ಅವನು ಮತ್ತಷ್ಟು ಹತ್ತಿರ ಬಂದು ಕುಳಿತುಕೊಂಡು ಹೆಚ್ಚಲು ಕಾಯಿಯನ್ನು ತೆಗೆದುಕೊಳ್ಳುತ್ತಿದ್ದ ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು " ವಿಮ್ಮು, ಮಾತನಾಡು. ನೀನು ಕೋಪದಿಂದ ಮಾತನಾಡದೇ ಹೋದರೆ ನನಗೆ ಬಹಳ ದುಃಖವಾಗುತ್ತದೆ. ಮೊನ್ನೆಯ ದಿನ ನಾನು ಸಿನಿಮಾಗೆ ಕರೆದುಕೊಂಡು ಹೋಗಲು ಬಂದಾಗ ನಿನ್ನನ್ನು ನೋಡಿ ನನ್ನ ಮನಸ್ಸು ಹತೋಟಿ ತಪ್ಪಿ ಹೋಯಿತು. ಎಷ್ಟೋ ದಿನಗಳಿಂದ ನಾನು ನಿನ್ನನ್ನು ನೋಡುತ್ತಿದ್ದೇನೆ. ಆದರೆ ಆ ದಿನ ನನ್ನ ಮನಸ್ಸಿಗಾದಂತೆ ಯಾವಾಗಲೂ ಆಗಲಿಲ್ಲ " ಎಂದು ಹೇಳಿದನು.

ವಿಮಲೆಗೆ ಏನು ಹೇಳಬೇಕೋ ತೋರಲಿಲ್ಲ.

" ಮಾತನಾಡು, ವಿಮ್ಮು "

" ಏನು ಮಾತನಾಡಲಿ ?"

" ಏನಾದರೂ ಮಾತನಾಡು. ನೀನು ಹೆಚ್ಚುತ್ತಿರುವ ಈ ಕಾಯಿ ಯಾವುದು ಹೇಳು "

ವಿಮಲೆಗೆ ನಗು ಬಂದಿತು. ಅವಳು ನಗುತ್ತಾ " ಇದು ಟೊಮೆಟೋ ಕಾಯಿ " ಎಂದಳು.

" ಈಗ ಇವರಲ್ಲೇನು ಮಾಡುತ್ತೀ ?"

" ಅವರುಗಳು ಮನೆಗೆ ಬರುವ ವೇಳೆಗೆ ಇದನ್ನು ಹಾಕಿ ಉಪ್ಪಿಟ್ಟು ಮಾಡುತ್ತೇನೆ "

ವೆಂಕಟರಾಯನು ಅವಳಿಗೆ ಕೇಳಿಸುವಂತೆ ದೊಡ್ಡ ನಿಟ್ಟುಸಿರು ಬಿಟ್ಟು ಅಬ್ಬಾ. ನಿನ್ನ ಬಾಯಿ ಬಿಡಿಸಬೇಕಾದರೆ ನನಗೆ ಸಾಕಾಗಿ ಹೋಯಿತು. ಕಡೆಗೂ ಮಾತನಾಡಿದೆಯಲ್ಲಾ " ಎಂದನು.

" ಹೀಗೇ ಇದ್ದರೆ ನಿಮಗೆ ಹುಚ್ಚು ಹಿಡಿದು ಹೋಗುತ್ತದೆ "

" ಹಿಡಿದರೆ ಹಿಡಿಯಲಿ, ವಿಮ್ಮು. ಅದಕ್ಕೊಂದಕ್ಕೂ ನಾನು ಹೆದರುವುದಿಲ್ಲ. ನಾನು ಹೆದರುವುದು ನಿನ್ನ ಕೋಪಕ್ಕೆ ಮಾತ್ರ. ಬೆಳಗ್ಗಿನಿಂದ ನಾನು ಬಂದು ಕಾಯುತ್ತಿದ್ದರೆ ನೀನು ಮಾತೇ ಆಡಿಸಲಿಲ್ಲವಲ್ಲ. ಏನು ಬಂದೆ, ಏನು ವಿಷಯ ಎಂದು ಕೇಳಲಿಲ್ಲವಲ್ಲ "

" ಏನು ಬಂದಿರಿ ? ಏನು ವಿಷಯ ?"

" ಹಾಗೆ ಕೇಳು. ನೋಡು, ಬೇಕಾದಾಗ ಈ ಊರಿನಲ್ಲಿ ಮನೆಗಳು ಸಿಕ್ಕುವುದು ಕಷ್ಟ. ಅದರಿಂದ ನೆಹರೂ ನಗರದಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡೆ. ತಿಂಗಳಿಗೆ ನೂರ ಇಪ್ಪತ್ತು ರೂಪಾಯಿ ಬಾಡಿಗೆ. ಸೊಗಸಾದ ಮನೆ. ಸುತ್ತಲೂ ಕಾಂಪೌಂಡು. ಸಣ್ಣ ತೋಟ. ನೀನು ಅದನ್ನು ನೋಡಿದರೆ ಭೇಷ್ ಎನ್ನುತ್ತೀಯೆ ?"

ವೆಂಕಟರಾಯನು ಇಂದೇ ಬರುತ್ತಾನೆಂದು ವಿಮಲೆಯು ನೆನಸದಿದ್ದರೂ ಕ್ಷಿಪ್ರದಲ್ಲಿಯೇ ಬಂದು ನೋಡುತ್ತಾನೆಂದು ಅವಳು ನಿರೀಕ್ಷಿಸಿದ್ದಳು. ಈ ದಿನ ಮಧ್ಯಾಹ್ನ ಅವನನ್ನು ನೋಡಿದ ಮೇಲಂತೂ ಆ ಕ್ಷಿಪ್ರವು ಬಂದೇ ಬಿಟ್ಟಿತ್ತು. ಅವನು ಪ್ರತ್ಯೇಕ್ಷವಾಗಿ ಸಂಧಿಸಿ ಮಾತನಾಡಿದಾಗ ಅವನಿಗೇನು ಹೇಳಬೇಕೆಂದು ಬಹಳವಾಗಿ ಯೋಚಿಸುತ್ತಿದ್ದಳು. ಆದರೆ ಅವಳಿಗೆ ಏನೂ ತೋರಲಿಲ್ಲ. ಈಗಲೂ ಹೊಳೆಯುತ್ತಿಲ್ಲ. ಅವಳು ಅವನ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿದ್ದಾಳೆ. ಅವನು ಬಲಾತ್ಕಾರ ಮಾಡುತ್ತಾನೆ. ಅಂಗಲಾಚುತ್ತಾನೆ. ಅಳುತ್ತಾನೆ. ಗೋಗರೆಯುತ್ತಾನೆ. ಅವಳು ತಪ್ಪಿಸಿಕೊಂಡು ಹೋಗದಂತೆ ಕಾಯುತ್ತಿದ್ದಾನೆ.

ವಿಮಲೆಯು ಸುಮ್ಮನಿದ್ದುದನ್ನು ನೋಡಿ ಅವನು " ಅದಕ್ಕೆ ಫರ್ನೀಚರ್ ಹಾಕಿಬಿಡುವುದು ಮುಂದಿನ ಕೆಲಸ. ಸರಿಯಾದ ಫರ್ನೀಚರ್ ಹಾಕಿ ಮನೆಯನ್ನು ಶೃಂಗರಿಸಲು ಏನಿಲ್ಲವೆಂದರೂ ಎರಡು ವಾರಗಳಾದರೂ ಆಗುತ್ತವೆ. ಅನಂತರ ನಿನ್ನನ್ನು ಕರೆದುಕೊಂಡು ಹೋಗಿ ತೋರಿಸೋಣವೆಂದಿದ್ದೇನೆ. ನಿನ್ನನ್ನು ಕೇಳಿ ನಿನ್ನ ಇಷ್ಟದಂತೆ ಎಲ್ಲವನ್ನೂ ಮಾಡೋಣವೆಂದು ಮೊದಲು ತೋರಿತು. ಮನಸ್ಸು ಬದಲಾಯಿಸಿದೆ. ನಾನೇ ಎಲ್ಲವನ್ನೂ ಮಾಡಿ ಆಮೇಲೆ ನಿನಗೆ ಒಪ್ಪಿಸೋಣವೆಂದುಕೊಂಡೆ. ನನ್ನ ಯೋಚನೆ ಹೇಗಿದೆ ?" ಎಂದನು.

ಅವಳು ಮಾತನಾಡಲಿಲ್ಲ.

ಅವನು ಗೋಗರೆಯುತ್ತಾ " ಇದೇನು ವಿಮ್ಮು, ನನ್ನನ್ನು ಹೀಗೆ ಗೋಳು ಹುಯ್ದುಕೊಳ್ಳುತ್ತೀ. ನೀನು ಎಲ್ಲೋ ಇಲ್ಲದ ಆಲೋಚನೆಯನ್ನು ಇಟ್ಟುಕೊಂಡು ನನ್ನನ್ನು ಕಷ್ಟಪಡಿಸುತ್ತಿದ್ದೀಯೆ. ಅದರಿಂದ ನಿನಗೇನಾದರೂ ಸುಖವಿದೆಯೆ ? ವಿಮ್ಮು, ನೀನು ನನ್ನನ್ನು ಪ್ರೇಮ ಮಾಡಲಿಲ್ಲವೇ ?

ನನ್ನಲ್ಲಿ ಆಸೆ ಭರವಸೆಗಳನ್ನು ಉಂಟು ಮಾಡಲಿಲ್ಲವೇ ? ಹಾಗಿರುವಾಗ ನಿನ್ನನ್ನು ನಾನು ಪ್ರೀತಿಸಿದ್ದು ತಪ್ಪೆ ? ನೀನು ಉಂಟು ಮಾಡಿದ ಆಸೆ ಭರವಸೆಗಳಲ್ಲಿ ನಂಬಿಕೆಯನ್ನಿಟ್ಟಿದ್ದು ತಪ್ಪೆ ? ಈಗಲೂ ಅಷ್ಟೇ. ನಾನೇನು ಮಾಡುತ್ತಿದ್ದೇನೆ ? ನನ್ನ ಚಿನ್ನಳನ್ನು ಪ್ರೀತಿ ಮಾಡುತ್ತಿದ್ದೇನೆ. ಮದುವೆ ಮಾಡಿಕೊಳ್ಳಬೇಕು ಎನ್ನುತ್ತಿದ್ದೇನೆ. ಸಂಸಾರ ಮಾಡಿಕೊಂಡು ನಾಲ್ಕು ಮಂದಿಯಂತೆ ನಾನೂ ಬದುಕಬೇಕೆಂದು ಅಪೇಕ್ಷೆ ಮಾಡುತ್ತಿದ್ದೇನೆ. ಇದೆಲ್ಲಾ ತಪ್ಪಾದರೆ ಹೇಳಿಬಿಡು. ವಿಮ್ಮು ಹೇಳಿಬಿಡು " ಎಂದನು ಅರಗಳಿಗೆ ಬಿಟ್ಟು " ನಮ್ಮ ಮನೆಯನ್ನು ನೋಡಲು ಬರುತ್ತೇನೆಂದು ಹೇಳು. ಮಾತನಾಡು " ಎಂದು ಅಂಗಲಾಚಿದನು.

ವಿಮಲೆಯು ಟೊಮೆಟೋ ಕಾಯನ್ನು ನಿದಾನವಾಗಿ ಹೆಚ್ಚುತ್ತಾ ಆಲೋಚನೆ ಮಾಡಿದಳು. ಅವಳೇನು ಮಾಡಬೇಕು ? ಇದೇ ರೀತಿಯಾಗಿ ಪೇಚಾಡುತ್ತಾ ಕುಳಿತುಕೊಂಡಿರುವುದೇ, ಅಥವಾ ಏನೋ ಇದ್ದುದರಲ್ಲಿ ಸರಿ ಮಾಡಿಕೊಂಡು ಹೋಗುವುದೇ ? ಶಾರದಮ್ಮನು ಹೇಳಿದ ಕಡೆಯ ಮಾತು ಅವಳ ನೆನಪಿಗೆ ಬಂತು. ಅದು ಅವಳನ್ನು ಬಗ್ಗಿಸಿತು. ಒಂದು ಸಣ್ಣ ಆಸೆಯು ಮನಸ್ಸಿನಲ್ಲಿ ಮೂಡಿದಂತೆ ಆಯಿತು.

ವಿಮಲೆಯು " ನೀವು ಹೇಳಿದಂತೆ ಮನೆಯನ್ನು ಶೃಂಗರಿಸಲು ಎರಡು ವಾರಗಳು ಬೇಕಲ್ಲ. ಈಗಲೇ ಏನು ಅವಸರ ? " ಎಂದಳು

ವಿಮಲೆಯು ಈ ರೀತಿಯಾಗಿ ಮಾತನಾಡಿದುದು ವೆಂಕಟರಾಯನಿಗೆ ವಿಸ್ಮಯವನ್ನು ಉಂಟು ಮಾಡಿತು. ಅವನಿಗೆ ಹಾಗಾಯಿತೆಂದು ಅವಳಿಗೂ ಗೊತ್ತಾಯಿತು. ವಿಮಲೆಯು ಕೂಗಿ ಗಲಾಟೆ ಮಾಡುತ್ತಾಳೆಂದು ಅವನು ಭಾವಿಸಿದ್ದನು. ಆದರೆ ಹೀಗಾದುದನ್ನು ನಿಜವೆಂದು ನಂಬಲು ಅವನಿಗೆ ಕ್ಷಣಕಾಲವು ಬೇಕಾಯಿತು.

ವೆಂಕಟರಾಯನು ಆನಂದಾತಿರೇಕದಿಂದ ಈಳಿಗೆ ಮಣೆಯ ಮೇಲೆ ಕುಳಿತಿದ್ದ ವಿಮಲೆಯನ್ನು ಎಳೆದುಕೊಂಡು ಮೇಲೆ ಮೇಲೆ ಚುಂಬಿಸುತ್ತಾ " ವಿಮ್ಮು, ವಿಮ್ಮು, ನೀನು ದಯಾಮಯಿ ಎಂದು ಎಂದು–ನನಗೆ ಗೊತ್ತಿತ್ತು. ಗೊತ್ತಿತ್ತು " ಎಂದು ಹೇಳಿದನು.

ಅವಳು ಬಿಡಿಸಿಕೊಂಡು ಮಾತನಾಡಲು ಪ್ರಯತ್ನ ಮಾಡಿದಳು. ಅವಳ ಕತ್ತು ಕಟ್ಟಿಕೊಂಡು ಬಂದಿತು. "ಅವರು ಆದರೆ ನೀವು ಅವಸರ ಮಾಡಬಾರದು. ನಾನು ನಿದಾನವಾಗಿ ನಮ್ಮ ವಿಷಯವನ್ನು ಅವರಿಗೆ ಹೇಳುತ್ತೇನೆ" ಎಂದು ಹೇಳಿದಳು.

ವೆಂಕಟರಾಯನ ಕಣ್ಣುಗಳಲ್ಲಿಯೂ ನೀರು ಮೂಡಿದ್ದಿತು. ಅವನು ಕರ್ ಚೀಫ್‌ನಿಂದ ಕಣ್ಣೊರಸಿಕೊಳ್ಳುತ್ತಾ "ವಿಮಲಾ ! ನಿನ್ನ ಸುಖಕ್ಕೆ ಅಡ್ಡಿಯಾದಂತಹ ಯಾವ ಕೆಲಸವನ್ನೂ ನಾನು ಮಾಡುವುದಿಲ್ಲ" ಎಂದು ಹೇಳಿದನು.

ಆ ಮಾತು ಅವನು ಅವನು ಹೇಳಿದಾಗ ಬಾಂಡಲೆಯಲ್ಲಿದ್ದ ಒಗ್ಗರಣೆಗೆ ರವೆಯನ್ನು ಹಾಕಿಕೊಂಡು ಹುರಿಯುತ್ತಿದ್ದವಳು ತಿರುಗಿ ನೋಡಿದಳು. ಯಾರೇ ಆಗಲಿ ತನ್ನ ಸುಖಕ್ಕಾಗಿ ಯಾವ ಬಗೆಯ ತ್ಯಾಗವನ್ನು ಮಾಡುವುದೂ ಅವಳಿಗೆ ಬೇಕಾಗಿರಲಿಲ್ಲ. ಅವಳಿಗೆ ಜೀವನದಲ್ಲಿ ಜಿಗುಪ್ಸೆಯುಂಟಾಗಿದ್ದಿತು. ದ್ವೇಷವುಂಟಾಗಿದ್ದಿತು. ತನ್ನಂತಹ ನಿರ್ಬಂಧಕ್ಕೆ ಸಿಕ್ಕಿಹಾಕಿಕೊಳ್ಳದೇ ತೋರಿದಾಗ ತೋರಿದ ಕಡೆಗೆ ಹೊರಟು ಹೋಗುವ ನಟರಾಜ-ಶಕುಂತಲೆಯರ ವಿಷಯದಲ್ಲಿ ಅವಳಿಗೆ ಅಸೂಯೆಯುಂಟಾಗಿದ್ದಿತು. ಇಲ್ಲಿರುವ ವೆಂಕಟರಾಯ, ಇಲ್ಲದ ಪ್ರೀತಿಯ ಹೆಸರು ಹೇಳಿಕೊಂಡು ಸ್ವಾರ್ಥ ಸಾಧಿಸುತ್ತಾ ಜಿಗಣೆಯಂತೆ ಅಂಟಿಕೊಂಡಿರುವ ವೆಂಕಟರಾಯನ ಮೇಲೆ ತಾತ್ಸಾರ ಉಂಟಾಗಿದ್ದಿತು. ಅವನನ್ನು ಹೊರಗಡೆ ಕಳುಹಿಸಿ ಮನೆಯು ಅದುರುವಂತೆ ಬಾಗಿಲು ಹಾಕಬೇಕೆಂದು ತೋರುತ್ತಿತ್ತು.

ವಿಮಲೆಗೆ ಜೀವನವುಅಪ್ರಿಯವಾಗಿದ್ದಿತು, ಅವಳುಜೀವನವನ್ನುದ್ವೇಷ ಮಾಡುತ್ತಿದ್ದರೂ ಕಾದಂಬರಿಯ ಹಿನ್ನೆಲೆಗಾಗಿ ಹಿಮರಾಶಿಗಳ ಮೇಲೆ ಓತಿಯಾಡುತ್ತಿರುವ ಮನುಷ್ಯನ ಮೇಲಿನ ಪ್ರೇಮವು ಒಳ ಮನಸ್ಸಿನಿಂದ ಇಣಿಕಿ ನೋಡುತ್ತಿದ್ದಿತು.

ವಿಮಲೆಯು ಬಾಂಡಲೆಯನ್ನು ತೆಗೆದು ಸಣ್ಣ ಕೆಂಡದ ಮೇಲಿಟ್ಟು, ಒಲೆಯ ಮೇಲೆ ಕಂಚಿನಲ್ಲಿ ನೀರು ಎಸರಿಗಿಟ್ಟು ಹೊರಗಡೆ ಬಂದಳು.

ಅವಳೊಡನೆಯೇ ಬರುತ್ತಿದ್ದ ವೆಂಕಟರಾಯನು "ವಿಮ್ಮ, ನೀನು ನನ್ನನ್ನು ಬಹಳ ಸುಖಿಯಾಗಿ ಮಾಡಿದೆ" ಎಂದನು.

ವಿಮಲೆಯು ಗಂಭೀರವಾಗಿ ಸುಮ್ಮನಿದ್ದಳು.

ಅವನು ಅವಳ ಭುಜದ ಮೇಲೆ ಕೈ ಹಾಕಿಕೊಂಡು ಹಜಾರಕ್ಕೆ ಬಂದನು.

ಅವಳು ಅಲ್ಲಿ ಅತ್ತೆ ಇದ್ದಾರೆ, ಕೈ ತೆಗೆಯಿರಿ. ನೋಡಿದರೆ ಏನೆಂದು ಕೊಂಡಾರು ?" ಎಂದಳು.

ಇಬ್ಬರೂ ಬಂದು ಅತ್ತೆಯೊಡನೆ ಮಾತನಾಡುತ್ತಾ ಕುಳಿತು ಕೊಂಡರು.

ಮಾತಿನ ನಡುವೆ ಸಾವಿತ್ರಮ್ಮನವರು " ನೀವು ದಿನವೂ ಬೆಂಗಳೂರಿನಿಂದ ಬರುತ್ತೀರಲ್ಲವೇ ?" ಎಂದು ಕೇಳಿದರು.

" ಹೌದಮ್ಮ. ನಾನಿರುವುದು ಅಲ್ಲಿಯೇ "

" ಈಗ ಬೆಂಗಳೂರು ಹೇಗಿದೆ ?"

ವೆಂಕಟರಾಯನಿಗೆ ಕೂಡಲೇ ಉತ್ತರವನ್ನು ಕೊಡಲು ಗೊತ್ತಾಗಲಿಲ್ಲ. " ಒಂದು ಬಾರಿ ಬನ್ನಿ. ಮೋಟಾರಿನಲ್ಲಿ ಕರೆದುಕೊಂಡು ಹೋಗುತ್ತೇನೆ. ನೋಡಿಕೊಂಡು ಬರುವಿರಂತೆ " ಎಂದನು.

ಆಕೆ ಮೋಟಾರು ಕಾರು ಹತ್ತುವುದಿಲ್ಲವೆಂಬ ವಿಷಯವು ವೆಂಕಟರಾಯನಿಗೆ ಗೊತ್ತಿರಲಿಲ್ಲವೋ ಅಥವಾ ಮರೆತು ಹೋಗಿದ್ದಿತೋ, ಅಂತೂ ಅವನು ಹಾಗೆಂದನು.

ಸಾವಿತ್ರಮ್ಮನವರು ಚೇಳು ಕುಟಕಿದಂತೆ " ಮೋಟಾರು ಕಾರಿನಲ್ಲಿಯೋ ?" ಎಂದು ಚೀರಿದರು.

ವಿಮಲೆಯು " ಮೋಟಾರು ಕಾರು ಬಹಳ ಕೆಟ್ಟ ಪದಾರ್ಥ. ಅದನ್ನು ಹತ್ತಿದ ಜನಗಳೆಲ್ಲರೂ ಸಾಯುತ್ತಾರೆ. ಅದರಿಂದ ನಮ್ಮ ಅತ್ತೆ ಮೋಟಾರು ಹತ್ತುವುದಿಲ್ಲ. ಅದಕ್ಕಾಗಿಯೇ ಮೊನ್ನೆ ಶಷ್ಟ ಪೂರ್ತಿಗೂ ಬರಲಿಲ್ಲ " ಎಂದಳು.

ಅದಾದ ನಂತರ ಮೋಟಾರು ಪ್ರಸ್ತಾಪವಿಲ್ಲದ ಮಾತುಗಳನ್ನು ಆಡುತ್ತಾ ಕುಳಿತಿದ್ದರು. ಸಿನಿಮಾಗೆ ಹೋದವರು ಬಂದ ನಂತರ ಸಿನಿಮಾದ ಮಾತುಗಳನ್ನಾಡುತ್ತಾ ಎಲ್ಲರೂ ಉಪ್ಪಿಟ್ಟು ತಿಂದರು. ಬಿಸಿ

ಮಾಡಿದ ಕಾಫಿಯನ್ನು ಕುಡಿದರು. ವೆಂಕಟರಾಯನು ಬೀಳ್ಕೊಂಡು ಹೊರಟು ಹೋದನು.

ವಿಮಲೆಯು ಶೀಲೆಯನ್ನು ಕರೆದು " ಶೀಲಾ. ನೀನೂ ವರದಾ ಸೇರಿಕೊಂಡು ಅಡಿಗೆ ಮಾಡಿಬಿಡಿ. ಏನೋ ಮೈಯಲ್ಲಿ ಹುಷಾರಿಲ್ಲ"ವೆಂದು ಹೇಳಿ ಸುತ್ತಿಟ್ಟಿದ್ದ ಹಾಸಿಗೆಯ ಮೇಲೆ ಒರಗಿ ಮಲಗಿಕೊಂಡು ಓದಲು ಪುಸ್ತಕವನ್ನು ತೆಗೆದುಕೊಂಡಳು.

ದೀಪವಿದ್ದರೂ ಪುಸ್ತಕದಲ್ಲಿ ಅವಳಿಗೆ ಅಕ್ಷರಗಳು ಕಂಡು ಬರಲಿಲ್ಲ. ಯಾವು ಯಾವುದೋ ಚಿತ್ರಗಳನ್ನು ನೋಡುತ್ತಿರುವಂತೆ ಕಾಣುತ್ತಿದ್ದಿತು. ತಾನು ಹೋರಾಟದಲ್ಲಿ ಸೋತು ಸೆರೆ ಸಿಕ್ಕಿದ ಬಂದಿಯಂತೆ ಅವಳಿಗೆ ಭಾಸವಾಯಿತು. ತನಗೆ ಇನ್ನು ಮುಂದೆ ಜೀವನದಲ್ಲಿ ಸುಖವಿಲ್ಲ, ತಾನಿನ್ನೂ ದೀರ್ಘವಾದ ಆನಂದ ರಹಿತವಾದ ತ್ಯಾಗಮಯ ಜೀವನ ಪಥದಲ್ಲಿ ನಡೆಯಬೇಕು. ಶಂಕರ ವಾಸು, ಶೀಲಾ ವರದೆ, ಅತ್ತೆ ಇವರುಗಳಿಗೆ ಸಹಾಯಕವಾಗಿ ಈ ವೆಂಕಟರಾಯನಿಗೆ ಹೆಂಡತಿಯಾಗಿ ಬಾಳಬೇಕು. ತಾನು ಊಟ ಮಾಡಬಹುದು, ನಿದ್ದೆ ಮಾಡಬಹುದು, ಮಾತನಾಡಬಹುದು. ಆದರೆ ಅದಾವುದರಿಂದಲೂ ಸುಖವಿಲ್ಲ.

ಶೀತಲ ಹಿಮಾಚಲದ ನೆನಪು ಬಂದಾಗ ಅವಳ ಬೇಯುವ ಹೃದಯವು ತಂಪಾದಂತೆ ಆಗುತ್ತದೆ. ಯೋಗಿಯಂತೆಯೋ, ಭೋಗಿಯಂತೆಯೋ ಅಲ್ಲಿ ಸಂಚರಿಸುತ್ತಿರುವವನು ಆಡಿದ ಕಡೆಯ ಮಾತುಗಳು ಅವಳ ಕಿವಿಯಲ್ಲಿ ಗುರುಗುಟ್ಟುತ್ತಿದೆ.

ವಿಮಲೆ ಹಾಗೆಯೇ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಮಲಗಿದ್ದಳು.

ಸುಮಾರು ಎಂಟೂವರೆ ಒಂಬತ್ತು ಗಂಟೆಗೆ ತಂಗಿಯರು ಊಟಕ್ಕೆ ಕರೆದಾಗ ಅವಳಿಗೆ ಚೆನ್ನಾಗಿ ನಿದ್ದೆ ಬಂದಿತ್ತು.

# ೧೮

ದಿನಗಳ ಮೇಲೆ ದಿನಗಳು ಉರುಳುತ್ತಿದ್ದವು. ಆದರೆ ಚಳಿಯ ದಿನಗಳು ಪೂರ್ಣವಾಗಿ ಹೊರಟು ಹೋಗಿರಲಿಲ್ಲ. ಬೇಗನೆ ಸಂಜೆಯಾಗುತ್ತಿತ್ತು. ನಿಧಾನವಾಗಿ ಬೆಳಗಾಗುತ್ತಿದ್ದಿತು. ವಿಮಲೆಯ ಉದ್ವೇಶವು ಸ್ವಲ್ಪ ಮಟ್ಟಿಗೆ ಕಡಿಮೆಯಾಗಿದ್ದಿತೇ ವಿನಾ ಹೆಚ್ಚಿನ ವಿಶೇಷಗಳೇನೂ ನಡೆಯಲಿಲ್ಲ. ಶಂಕರನು ಕಷ್ಟಪಟ್ಟು ಕೆಲಸ ಮಾಡುತ್ತಿದ್ದನು. ವಾಸುವು ಸ್ಕೂಲಿಗೆ ಹೋಗುತ್ತಿದ್ದನು. ಬೆಂಗಳೂರಿನ ಶಿಶು ವಿಹಾರವೊಂದರಲ್ಲಿ ವರಳಿಗೆ ಕೆಲಸವಾಗಿತ್ತು. ಅವಳಿಗೆ ತಿಂಗಳಿಗೆ ಐವತ್ತು ರೂಪಾಯಿ ಸಂಬಳವು ಬರುತ್ತಿದ್ದಿತು. ವಾಸುವಿನ ಸ್ಕೂಲಿನ ಉಪಾಧ್ಯಾಯರುಗಳಲ್ಲಿ ಗಮಕಿಗಳೊಬ್ಬರಿದ್ದರು. ಶೀಲೆಯು ಅವರಲ್ಲಿಗೆ ಹೋಗಿ ಗದುಗಿನ ಭಾರತವನ್ನು ರಾಗವಾಗಿ ಓದಲು ಕಲಿಯುತ್ತಿದ್ದಳು. ಸಾವಿತ್ರಮ್ಮನವರದು ಸ್ವಲ್ಪ ಕಷ್ಟವಾಗಿದ್ದಿತು. ಅವರು ದಿನದಿನಕ್ಕೆ ಅಸ್ವಸ್ಥರಾಗುತ್ತಿದ್ದರು. ಅವರ ರೀತಿಯೇ ವಿಚಿತ್ರವಾಗ ತೊಡಗಿತು. ಬೆಳಗಾದ ಮೇಲೆ ಆರಂಭವಾದ ಅವರ ಜೀವನವು ರಾತ್ರಿ ಹತ್ತು ಗಂಟಿಗೆ ಮುಕ್ತಾಯವಾಗುತ್ತಿತ್ತು. ಹತ್ತು ಗಂಟೆಗೆ ದೀಪವಾರಿಸಿದಾಗ ಮೂಡುತ್ತಿದ್ದ ನಿಶ್ಯಬ್ದತೆಯಲ್ಲಿ, ನಿದ್ದೆಯಲ್ಲಿ ವಿಮಲೆಯೂ ಮನೆಯಲ್ಲಿದ್ದ ಇತರರೂ ತಾತ್ಕಾಲಿಕವಾಗಿ ತಮ್ಮ ಕಷ್ಟಗಳನ್ನು ಮರೆಯುತ್ತಿದ್ದರು.

ಈ ನಡುವೆ ಒಂದೆರಡು ಬಾರಿ ವೆಂಕಟರಾಯನು ಬಂದಿದ್ದನು, ಅವನು ಬಂದಾಗಲೆಲ್ಲಾ ತನ್ನ ವಿಷಯವನ್ನೇ ಹೇಳುತ್ತಿದ್ದನು. ಆ ದಿನ

ಗಳಲ್ಲಿ ಷೇರುಗಳ ಬೆಲೆಯು ಸ್ವಲ್ಪ ಇಳಿಮುಖವಾಗಿದ್ದಿತು. ಆ ಕಷ್ಟವ ನ್ನೆಲ್ಲಾ ವಿಮಲೆಯೊಂದಿಗೆ ಹೇಳುತ್ತಿದ್ದನು. ಈ ಸಮಯದಲ್ಲಿ ಕಳೆದು ಉಳಿದವರೇ ಷೇರು ಮಾರ್ಕೆಟ್ಟಿನ ಆಧಾರ ಸ್ತಂಭಗಳಾಗುತ್ತಾರೆಂದು ಅಭಿ ಪ್ರಾಯ ಪಡುತ್ತಿದ್ದನು. ತಾನು ತನ್ನ ಚಾಕುಚಕ್ಯತೆಯಿಂದ ದಡ ಹಾಯು ವುದಾಗಿ ಹೇಳುತ್ತಿದ್ದನು.

ವೆಂಕಟರಾಯನಿಗೆ ಯಾವುದರಲ್ಲಿಯೂ ಆಸಕ್ತಿಯಿಲ್ಲ. ಅವನು ದಿನ ದಿನಕ್ಕೆ ಅಶಾಂತನಾಗುತ್ತಿದ್ದನು. ಷೇರು ಮಾರ್ಕೆಟ್ಟು ಉಳಿಯಲಿ, ಅಳಿ ಯಲಿ ಅದೊಂದೂ ಅವನಿಗೆ ಮುಖ್ಯವಲ್ಲ. ಅವನಿಗೆ ಬೇಕಾದ್ದು ತನ್ನ ಹೆಂಡತಿ–ತನ್ನ ಮನೆ–ತನ್ನ ಸುಖ. ಅದನ್ನು ಸಾಧಿಸುವುದೇ ಅವನ ಪರ ಮಾರ್ಥ.

ಅವನು ವಿಮಲೆಯೊಡನೆ ಮಾತ್ರವಲ್ಲ. ವಿಮಲೆಯ ಮನೆಯವರೊಂ ದಿಗೂ ವಿಶ್ವಾಸದಿಂದ ನಡೆದುಕೊಳ್ಳುತ್ತಾನೆ. ಎಷ್ಟೋ ಬಾರಿ ಅವನೂ ಶಂಕರನೂ ಕುಳಿತು ರಾಜಕೀಯದ ವಿಷಯದಲ್ಲಿ ತೀವ್ರವಾಗಿ ಚರ್ಚೆಮಾಡು ತ್ತಾರೆ. ಕ್ರಿಕೆಟ್‌ನ ವಿಷಯವನ್ನೂ ಫಿಲಿಂಗಳ ವಿಷಯವನ್ನೂ ಮಾತ ನಾಡುತ್ತಾರೆ.

ಹಾಗೆ ಮಾತನಾಡುತ್ತಾ ಕುಳಿತಿರುವ ವೆಂಕಟರಾಯನನ್ನು ನೋಡಿ ವಿಮಲೆಯು "ಇವನೆಲ್ಲಿ, ನಾನೆಲ್ಲಿ, ನಮಗೆಲ್ಲಿಯ ಸಂಬಂಧವು ಗಂಟು ಬಿದ್ದಿತು ?" ಎಂದು ಯೋಚನೆ ಮಾಡುತ್ತಾಳೆ. ಅವನ ಮುಖವನ್ನು ನೋಡಿದಾಗ ಒಮ್ಮೊಮ್ಮೆ ಅವನು ಚೆನ್ನಾಗಿದ್ದಾನೆ–ಎನ್ನಿಸುತ್ತದೆ. ಅವನ ಕಣ್ಣುಗಳಲ್ಲಿ ಬುದ್ಧಿವಂತಿಕೆಯು ಕಂಡು ಬರುತ್ತದೆ. ಗೋಗರೆಯುವ ವೇಳೆ ಯಲ್ಲಿ ವಿನಾ ಮಿಕ್ಕ ಸಮಯದಲ್ಲಿ ನಗುನಗುತ್ತಾ ಇರುತ್ತಾನೆ.

ವೆಂಕಟರಾಯನು ಮನೆಯನ್ನು ನೋಡಲು ಬರಬೇಕೆಂದು ವಿಮಲೆ ಯನ್ನು ಬಲಾತ್ಕಾರ ಮಾಡಿದನು. ಅವಳು ಅದನ್ನು ಒಪ್ಪಿಕೊಳ್ಳಬೇಕಾಗಿ ಬಂದಿತು. ಒಂದು ದಿನ ವೆಂಕಟರಾಯನೊಂದಿಗೆ ಸಿನಿಮಾಗೆ ಹೋಗುವು ದಾಗಿ ಹೇಳಿ ಹೋದಳು.

ಅವರು ಮನೆಯನ್ನು ತಲುಪುವ ವೇಳೆ ಮುಸ್ಸಂಜೆಯಾಗಿದ್ದಿತು. ವಾಸ್ತವವಾಗಿ ಅವನು ಒಳ್ಳೆಯ ಮನೆಯನ್ನು ಆರಿಸಿದ್ದನು. ನೆಹರೂ ನಗ

ರವೇ ಚೊಕ್ಕಟವಾದ ಉಪನಗರ. ಅವರ ಮನೆಯು ಅಲ್ಲಿ ಎತ್ತರವಾದ ಪ್ರದೇಶದಲ್ಲಿ ಪ್ರತ್ಯೇಕವಾಗಿದ್ದಿತು. ಅದರ ಸುತ್ತಲೂ ಸಣ್ಣ ಕಾಂಪೌಂಡು. ಕಾಂಪೌಂಡಿನಲ್ಲಿ ಹೂಗಿಡಗಳನ್ನೂ ಜಾಜಿಯ ಬಳ್ಳಿಗಳನ್ನೂ ಬೆಳೆಸಿದ್ದಾರೆ.

ಮುಂದುಗಡೆ ವರ್ತುಲಾಕಾರವಾದ ಸಣ್ಣ ಅಂಗಳ. ಅದರ ಬಲಗಡೆ ಕೋಣೆ. ಅಂಗಳವನ್ನು ದಾಟಿ ಒಳಗೆ ಹೋದರೆ ಹಜಾರ. ಅದರ ಮಗ್ಗುಲಲ್ಲಿ ದೊಡ್ಡ ಶಯ್ಯಾಗೃಹ ಒಳಗೆ ನಡುವೆ. ಅಡಿಗೆ ಮನೆ ಬಚ್ಚಲು ಮನೆಗಳು ಒಂದುಗಡೆ ಹಿತ್ತಲು.

ಬೀದಿಯ ಕೋಣೆಯನ್ನು ಮೇಜು ಕುರ್ಚಿಗಳನ್ನು ಹಾಕಿ ಅಚ್ಚುಕಟ್ಟಾದ ಆಫೀಸ್ ರೂಂ ಆಗಿ ಸುಸಜ್ಜಿತಗೊಳಿಸಲಾಗಿದ್ದಿತು. ಹಜಾರದಲ್ಲಿ ದೊಡ್ಡ ರತ್ನಗಂಬಳಿಯನ್ನು ಹಾಕಿ ಅದರ ಬಣ್ಣಕ್ಕೆ ಸರಿಹೊಂದುವ ಸೋಫಾಗಳನ್ನು ಇಡಲಾಗಿತ್ತು. ನಡುವೆ ಮೇಲೆ ಹಾಕಿದ ಗಾಜಿನಿಂದ ತಳತಳಿಸುವ ಎತ್ತರವಿಲ್ಲದ ಸಣ್ಣ ಬಾದಾಮಿ ಆಕಾರದ ಮೇಜು. ಅದರ ಎದುರಿಗೆ ಗೋಡೆಯ ಮಗ್ಗುಲಲ್ಲಿ ಉತ್ತಮವಾದ ರೇಡಿಯೋ.

ಮನೆಗೆ ಹೋಗುತ್ತಲೇ ವೆಂಕಟರಾಯನು ದೀಪಗಳನ್ನು ಹಾಕಿ, ರೇಡಿಯೋ ಓಪನ್ ಮಾಡಿದನು. ವಿಮಲೆಯನ್ನು ಶಯ್ಯಾ ಗೃಹಕ್ಕೆ ಕರೆದುಕೊಂಡು ಹೋದನು ಅಲ್ಲಿ ಮೃದುವಾದ ಜಮಖಾನ. ಎರಡು ಮಂಚಗಳಷ್ಟು ಅಗಲವಿರುವಂತಹ ವಿಶಾಲವಾದ ಮಂಚ. ಸ್ಪ್ರಿಂಗ್ ಮ್ಯಾಟ್ರೆಸ್ ಅದರ ಮೇಲೆ ಉತ್ತಮವಾದ ಬೆಡ್‌ಷೀಟು. ದಪ್ಪವಾದ ನಯವಾದ ಉಲ್ಲನ್ ರಗ್ಗು. ಒಂದು ಕಡೆಯಲ್ಲಿ ದುಂಡಾದ ದೊಡ್ಡ ಕನ್ನಡಿ. ಅದರ ಕೆಳಗೆ ಸಣ್ಣ ಮೇಜದ ಮೇಲೆ ಟಾಯಿಲೆಟ್ ಸಾಮಾನುಗಳು. ಮಂಚದ ಬಳಿ ಸಣ್ಣದೆರಡು ಟೀಪಾಯಿಗಳು.

ಅನಂತರ ಅವನು ಗೃಹಣಿಗೆ ಅಡಿಗೆಯ ಮನೆ, ಬಚ್ಚಲು ಮನೆಗಳನ್ನು ತೋರಿಸಿದನು. ಅವುಗಳನ್ನು ವಿದ್ಯುಚ್ಛಕ್ತಿಯಿಂದ ಅಳವಡಿಸಲಾಗಿದೆ ಎಂದೂ ವಿಮಲೆಯು ಊದಿ ಹೊಗೆಯಿಂದ ಅವಸ್ಥೆ ಪಡಬೇಕಾಗಿಲ್ಲವೆಂದೂ ಹೇಳಿದನು. ವಿಮಲೆಯ ದೊಡ್ಡ ಮನೆಯು ಐಶ್ವರ್ಯದಿಂದ ತುಳುಕಾಡುತ್ತಿದ್ದರೂ ಅಲ್ಲಿ ಅಡಿಗೆ ಮನೆ, ಬಚ್ಚಲು ಮನೆಗಳಲ್ಲಿ ವಿದ್ಯುತ್ ಸೌಕರ್ಯವಿರಲಿಲ್ಲ.

ಮನೆಯನ್ನೆಲ್ಲಾ ತೋರಿಸಿಕೊಂಡು ಬಂದು ವೆಂಕಟರಾಯನು ವಿಮಲೆಯನ್ನು ಹಜಾರದ ಸೋಫಾದ ಮೇಲೆ ಕುಳ್ಳಿರಿಸಿ ತಾನೂ ಕುಳಿತುಕೊಂಡನು.

ಅವನು ಅವಳ ಕಡೆಗೆ ನೋಡಿದನು. ಅವನ ಮುಖ ಭಾವವು " ಈ ಮನೆಯು ಹೇಗಿದೆ ? ನಿನಗೆ ಒಪ್ಪಿತು, ತಾನೇ ?" ಎಂದು ಕೇಳುವಂತೆ ಇದ್ದಿತು.

ವಿಮಲೆಯು ಗಂಭೀರವಾಗಿ " ಚೆನ್ನಾಗಿದೆ " ಎಂದಳು.

ವೆಂಕಟರಾಯನು ಸಂಕೋಚದಿಂದ " ವಿಮ್ಮು. ನಿನ್ನನ್ನು ನೋಡಿದರೆ ಅಸುಖಿಯಾಗಿರುವಂತೆ ಕಂಡು ಬರುತ್ತಾ ಇದೆ " ಎಂದನು.

ಅವಳು ಮೇಲೆದ್ದು ಹಜಾರದಲ್ಲಿ ಹಾಕಿದ್ದ ವರ್ಣ ಚಿತ್ರದ ಕಡೆಗೆ ನೋಡುತ್ತಿದ್ದಳು. ಚಿತ್ರಕಾರನು ಸೂರ್ಯೋದಯವನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದನು. ಆದರೂ ಅದರಲ್ಲಿ ಜೀವವಿಲ್ಲದಂತೆ ಇದ್ದಿತು. ಅದೇಕೆ ಹೀಗಾಗಿದೆ ಎಂದುಕೊಳ್ಳುತ್ತಿದ್ದಳು. ಆ ಸಮಯದಲ್ಲಿಯೇ ವೆಂಕಟರಾಯನು ಪ್ರಶ್ನೆ ಕೇಳಿದ್ದನು.

ಅವಳು ಅವನ ಕಡೆಗೆ ನೋಡದೇ ಎಲ್ಲಿಯೋ ನೋಡುತ್ತಾ " ಅದೇನಿಲ್ಲ. ಅಸುಖವೇನೂ ಇಲ್ಲ. ಯಾವಾಗಲಾದರೂ ಒಂದೊಂದು ಬಾರಿ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ಹಳೆಯ ಜ್ಞಾಪಕಗಳು ಬರುತ್ತಿರುತ್ತವೆ " ಎಂದಳು.

ವೆಂಕಟರಾಯನು ಎದ್ದು ಅವಳ ಭುಜದ ಮೇಲೆ ಕೈ ಹಾಕಿ, ಅಪ್ರತ್ಯಕ್ಷವಾಗಿ ಅವಳನ್ನು ಆಲಂಗಿಸುತ್ತಾ " ಅದನ್ನೆಲ್ಲಾ ಮನಸ್ಸಿಗ ಹಚ್ಚಿಕೊಳ್ಳಬಾರದು, ಚಿನ್ನಾ. ಬುದ್ಧಿವಂತರಾದವರು ನಡೆದು ಹೋದುದಕ್ಕಾಗಿ ಚಿಂತಿಸಬಾರದಂತೆ "ಎಂದು ಹೇಳಿದನು.

ಅವರು ರಾತ್ರಿ ಕೆಂಗೇರಿಯ ಮನೆಗೆ ಬರುವ ವೇಳೆಗೆ ಹತ್ತೂವರೆ ಗಂಟೆಯಾಗಿತ್ತು. ಸಿನಿಮಾಗೆ ಹೋಗಿದ್ದರೆ ವಾಪ್ಸು ಬರಲು ಎಷ್ಟು ಹೊತ್ತಾಗ ಬೇಕಾಗಿದ್ದಿತೋ ಅದಕ್ಕಿಂತ ಸ್ವಲ್ಪ ಹೆಚ್ಚು ಹೊತ್ತಾಗಿದ್ದಿತು.

ವಿಮಲೆಯು ಯಾವಾಗಲೂ ಮಂಕಾಗಿಯೇ ಇರುವುದಿಲ್ಲ. ಕೆಲವು ಬಾರಿ ಅವಳು ತಾನು ಅತ್ಯಂತ ಸಣ್ಣವಳೆಂದು ಭಾವನೆ ಮಾಡುತ್ತಾಳೆ. ತನ್ನಲ್ಲಿ ಏನೋ ವಿಚಿತ್ರವಾಗಿದೆ ಎಂದು ಭಾವಿಸುತ್ತಾಳೆ. ತನ್ನ ತಾಯಿ ಇದ್ದಿದ್ದರೆ ಚೆನ್ನಾಗಿದ್ದಿತೆಂದೂ ಆಕೆಯು ತನಗೆ ಬುದ್ಧಿ ಹೇಳಿ ಸರಿಯಾಗಿ ನಡೆಯುವಂತೆ ಮಾಡುತ್ತಿದ್ದಳೆಂಬುದಾಗಿ ಕಂಡುಬರುತ್ತದೆ. ಮತ್ತೆ ಕೆಲವು ಸಮಯಗಳಲ್ಲಿ ಉತ್ಸಾಹವಾಗಿರುತ್ತಾಳೆ. ಆಗ ವೆಂಕಟರಾಯನ ಮೇಲೆ ಸ್ವಲ್ಪ ವಿಶ್ವಾಸವುಂಟಾಗುತ್ತದೆ. ಅವನು ಯಾವಾಗಲೂ "ನನ್ನದೇನು ತಪ್ಪು?" ಎಂದು ಕೇಳುತ್ತಾನೆ. "ಅದು ಸರಿ. ಅವನದೇನೂ ತಪ್ಪಿಲ್ಲ" ವೆಂದೆನಿಸುತ್ತದೆ. ಅವನು ಪ್ರಖರವಾದ ಬುದ್ಧಿಶಾಲಿಯಲ್ಲದಿರಬಹುದು. ವಿದ್ವಾಂಸನಲ್ಲದಿರಬಹುದು. ಆ ದ ರೆ ಒಳ್ಳೆಯವನು. ಸಾಧಾರಣವಾಗಿ ಕಂಡುಬರುವ ಜನರಿಗಿಂತಲೂ ಒಳ್ಳೆಯವನು. ತನ್ನ ಹೆಂಡತಿ, ತನ್ನ ಮನೆ, ತನ್ನ ಬದುಕುಗಳೇ ಅವನಿಗೆ ಎಲ್ಲದಕ್ಕಿಂತಲೂ ದೊಡ್ಡದು. ಅವೇಕೆ ಇರಬಾರದು? ಇದರ ಮೇಲೆ ಅವನಿಗೂ ತನಗೂ ಒಂದು ಬಗೆಯಾಗಿ ಬಾಂಧವ್ಯವು ಏರ್ಪಟ್ಟಿದೆ.

ಅನೇಕ ಬಾರಿ ಅವಳು ತನ್ನ ಕರ್ತವ್ಯವೇನೆಂದು ಆಲೋಚನೆ ಮಾಡುತ್ತಾಳೆ. ಅವನ ಸಹವಾಸ ಮಾಡಬಾರದಾಗಿದ್ದಿತು-ಅವನಿಗೆ ಆತ್ಮಾರ್ಪಣೆ ಮಾಡಬಾರದಾಗಿದ್ದಿತು-ಎಂದು ಇಂದು ಯೋಚಿಸಿ ಫಲವೇನೆಂದು ಅವಳಿಗೆ ತೋರುತ್ತದೆ. ಹಿಂದೆ ಮಾಡಿದುದು ತಪ್ಪೋ, ಸರಿಯೋ? ವೆಂಕಟರಾಯನನ್ನು ಮದುವೆ ಮಾಡಿಕೊಂಡು ಅವನೊಡನೆ ಬಾಳುವುದೊಂದೇ ತನಗಿರುವ ಮಾರ್ಗವೆಂದು ಕಂಡುಬರುತ್ತದೆ. ಅವಳೊಂದು ಹೆಜ್ಜೆ ಮುಂದಿಟ್ಟಿದ್ದಾಳೆ. ಈಗ ಅದನ್ನು ಹಿಂದಿಡುವುದು ಅಸಾಧ್ಯ.

ಆ ಹೊತ್ತು ಶನಿವಾರ. ಸಾವಿತ್ರಮ್ಮನವರಿಗೂ ವಾಸು, ಶೀಲೆಯರಿಗೂ ಬಡಿಸಿ ವಿಮಲೆಯು ಪರದೆಯನ್ನು ಕಾಯುತ್ತಾ ಹೊರಗಡೆ ಜಗು

ಲಿಯ ಮೇಲೆ ಕುಳಿತಿದ್ದಳು. ವರದೆ ಶಿಶುವಿಹಾರದಿಂದ ಬಂದ ನಂತರ ತಂಗಿಯೊಡನೆ ಕುಳಿತು ಊಟ ಮಾಡುವುದೆಂದು ಇದ್ದಳು.

ಹನ್ನೆರಡರ ಹೊತ್ತಿಗೆ ವರದೆಯು ಬಂದಳು. ಅವಳ ಮುಖವೆಲ್ಲಾ ಕೆಂಪಗಿದ್ದಿತು. ಅವಳಿಗೆ ಬಹಳ ದುಃಖವಾದಂತಿದ್ದಿತು. ಅಕ್ಕನನ್ನು ನೋಡಿದ ಕೂಡಲೇ ತಂಗಿಗೆ ದುಃಖವು ಮೇಲಿಂದ ಮೇಲೆ ಉಕ್ಕಿ ಬಂದಿತು. ಅವಳು ಅಳತೊಡಗಿದಳು.

ವಿಮಲೆಯು ತಂಗಿಯನ್ನು ಪಕ್ಕದಲ್ಲಿ ಕೂರಿಸಿಕೊಂಡು ತಲೆ ಸವರುತ್ತಾ ವಿಶ್ವಾಸದಿಂದ " ಏನಾಯಿತು, ವರದಾ. ಯಾಕೆ ಅಳುತ್ತೀಯೇ ?" ಎಂದು ಕೇಳಿದಳು.

" ಇಲ್ಲಕ್ಕ. ಏನೋ ಅಳು ಬಂದಿತು " ಎಂದು ತಂಗಿಯು ಅಳುತ್ತಲೇ ಹೇಳಿದಳು.

ಸ್ವಲ್ಪ ಹೊತ್ತು ಸುದಾರಿಸಿಕೊಂಡ ನಂತರ ವರದೆಯು " ಈ ದಿನ ನಮ್ಮ ಶಿಶುವಿಹಾರದ ಹೆಡ್‌ಮಿಸ್ಟ್ರೆಸ್ ಕರೆದು " ವರದಾ. ನಿನ್ನನ್ನು ಟ್ರೈನಿಂಗ್‌ಗೆ ಕಳಿಸಬೇಕೆಂದಿದ್ದೇವೆ. ನೀನು ಮೈಸೂರಿಗೆ ಹೋಗಬೇಕಾಗಿ ಬರಬಹುದು " ಎಂದು ಹೇಳಿದರು " ಎಂಬುದಾಗಿ ಹೇಳಿದಳು.

" ಅದರಲ್ಲಿ ಅಳುವಂತಹ ವಿಷಯವೇನಿದೆ ?"

" ಮೂರು ತಿಂಗಳು ಮೈಸೂರಿನಲ್ಲಿದ್ದು ಟ್ರೈನಿಂಗ್ ತೆಗೆದುಕೊಳ್ಳಬೇಕಂತೆ "

" ಖರ್ಚುಗಳನ್ನು ಯಾರು ಕೊಡುತ್ತಾರೆ, ವರದಾ "

" ಅವೆಲ್ಲವನ್ನೂ ಅವರೇ ಕೊಡುತ್ತಾರೆ. ಸರ್ಕಾರದವರು ಕಿಂಡರ್ ಗಾರ್ಟನ್ ಪದ್ಧತಿಯಲ್ಲಿ ಇಪ್ಪತ್ತೈದು ಮಂದಿ ಉಪಾಧ್ಯಾಯನಿಯರನ್ನು ತಯಾರು ಮಾಡುತ್ತಾರಂತೆ. ಅದಕ್ಕೆ ನಮ್ಮ ಶಿಶುವಿಹಾರದವರೂ ಒಬ್ಬಳನ್ನು ಕಳಿಸಬೇಕು. ಸರ್ಕಾರದವರು ಅರ್ಧ ಖರ್ಚು ಕೊಡುತ್ತಾರೆ ಶಿಶುವಿಹಾರದವರು ಅರ್ಧ ಖರ್ಚು ಕೊಡುತ್ತಾರೆ "

" ಇತರರು ನೀನು ಹೋಗಲು ಒಪ್ಪಿದರೇ ? "

" ನನ್ನ ಜೊತೆಯ ಉಪಾಧ್ಯಾಯನಿಯರು ಹೋಗಬೇಕೆಂದು

ಹಾತೊರೆಯುತ್ತಿದ್ದಾರೆ. ಆದರೆ ಹೆಡ್ ಮಿಸ್ಟ್ರೆಸ್ ಮಾತ್ರ ನಾನೇ ಹೋಗಬೇಕೆಂದು ಹಠ ಹಿಡಿದಿದ್ದಾರೆ "

" ಅದಕ್ಕೇನಂತೆ, ಹೋಗಿ ಬಾ. ಮೈಸೂರು ಸೊಗಸಾದ ಊರು. ಯಾರಾದರೂ ನನ್ನನ್ನು ಹೋಗಿ ಬಾ ಎಂದರೆ ಈಗಲೇ ಹೊರಟೇನು. ಅದಕ್ಕೇಕೆ ಅಳಬೇಕು, ವರದಾ "

" ನೀವೆಲ್ಲಾ ಹೀಗೆ ಹೇಳುತ್ತೀರೆಂದು ನನಗೆ ಗೊತ್ತಿತ್ತು. ನೀನೂ ಹೋಗಬೇಕೆನ್ನುತ್ತೀ. ಶಂಕರನೂ ಹೋಗಬೇಕೆನ್ನುತ್ತಾನೆ. ಆದರೆ ನನಗಿಷ್ಟವಿಲ್ಲ "

" ಅದೇನು ಸ್ವಲ್ಪ ವಿವರವಾಗಿ ಹೇಳು " ಎಂದು ಅಕ್ಕನು ತಂಗಿಯನ್ನು ಕೇಳಿದಳು.

" ನನಗೆ ಮನೆಯನ್ನು ಬಿಟ್ಟು ಹೋಗುವುದು ಇಷ್ಟವಿಲ್ಲ. ಅದರ ಮೇಲೆ ನಾನು ಇಲ್ಲಿದ್ದು ಸಂಬಳಬಂದರೆ ಪ್ರಯೋಜನವೇ ಹೊರತು ಎಲ್ಲಿಯೋ ಮೈಸೂರಿನಲ್ಲಿ ಮದರಾಸಿನಲ್ಲಿ ಸಂಬಳವು ಬಂದರೆ ಪ್ರಯೋಜನವೇನು ?"

" ಇಂತಹ ಅವಕಾಶವನ್ನು ಕಳೆದುಕೊಳ್ಳಬಾರದು, ವರದಾ "

ವರದೆಯು ಉದ್ರೇಕದಿಂದ " ಅದೆಲ್ಲಾ ಇರಬಹುದು. ಆದರೆ ಅಮ್ಮನು ಸಾಯುವ ಮೊದಲು ಏನು ಹೇಳಿದ್ದಳು. ನಾವೆಲ್ಲರೂ ಒಟ್ಟಿಗಿರಬೇಕೆಂದು ಹೇಳಿರಲಿಲ್ಲವೆ ? ಈಗ ನೋಡು, ನೀನೂ ವೆಂಕಟರಾಯರೂ ಪ್ರೀತಿಸುತ್ತಿದ್ದೀರಿ. ಬಹಳ ದಿನಗಳಿಂದಲೂ ಈ ವಿಷಯವು ನನಗೂ ಶಂಕರನಿಗೂ ಗೊತ್ತು. ನಿಮ್ಮನ್ನು ನೋಡಿದ ಯಾರಿಗೆ ತಾನೇ ಆ ವಿಷಯವು ಗೊತ್ತಾಗುವುದಿಲ್ಲ. ಆದರೆ ನೀನೇಕೆ ಮದುವೆ ಮಾಡಿಕೊಂಡು ಅವರೊಡನೆ ಹೊರಟು ಹೋಗಲಿಲ್ಲ. ನಮ್ಮನ್ನೆಲ್ಲಾ ಬಿಟ್ಟು ಹೋಗಬಾರದು ಎಂದಲ್ಲವೇ ?'' ಎಂದು ಹೇಳಿ ಮುಂದಿನ ಮಾತನ್ನು ನಯವಾಗಿ " ಅಕ್ಕಾ, ವರದಾ ಹೋಗುವುದು ಬೇಡನೆಂದು ನೀನೂ ಶಂಕರನ ಬಳಿ ಹಠ ಹಿಡಿ " ಎಂದು ಹೇಳಿದಳು.

ವಿಮಲೆಯು ತಂಗಿಯ ಕಡೆಯ ಮಾತನ್ನು ಲಕ್ಷ್ಯ ಮಾಡದೇ ಅವಳನ್ನೇ ನೋಡುತ್ತಾ "ನಾನೂ ವೆಂಕಟರಾಯರೂ ಪ್ರೀತಿಸುತ್ತಿದ್ದೇವೆಂದು ನೀನೂ ಶಂಕರನೂ ಹೇಳುತ್ತೀರೋ ?" ಎಂದಳು.

" ಆತನನ್ನು ನೋಡಿದರೆ ನಿನ್ನನ್ನು ಪ್ರೀತಿಸುವಂತೆ ಕಂಡು ಬರುತ್ತದೆ "

" ನನ್ನನ್ನು ನೋಡಿದರೆ ಹೇಗೆ ಕಂಡು ಬರುತ್ತದೆ ?

ವರದೆಯು ಪ್ರೈ ಕೊಡವಿ " ನನಗೆ ಅದೆಲ್ಲಾ ಗೊತ್ತಿಲ್ಲ, ಅಕ್ಕ. ನಮಗೆಲ್ಲಾ ಒಂದು ಮಾರ್ಗವಾಗುವವರೆವಿಗೆ ನಮ್ಮನ್ನು ಬಿಟ್ಟು ಹೋಗಬೇಡ. ಅಷ್ಟೇ ನಾನು ಹೇಳುವುದು " ಎಂದಳು.

ವಿಮಲೆಯು ಮಾತನಾಡಲಿಲ್ಲ.

ವರದೆಯು " ನಾನು ಮೈಸೂರಿಗೆ ಹೋಗುವುದಿಲ್ಲ, ಅಕ್ಕ" ಎಂದಳು.

" ನನ್ನಂತಹ ಹುಡುಗಿಯರು ಅಂತಹ ಅವಕಾಶವು ಸಿಕ್ಕಿದರೆ ಬಿಡುವುದಿಲ್ಲ "

" ಸೋಮವಾರ ಹೆಡ್ ಮಿಸ್ಟ್ರೆಸ್ಸನ್ನು ನೋಡಿ ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ಅವರು ಕೆಲಸಕ್ಕೆ ಇಟ್ಟುಕೊಳ್ಳುವುದಾದರೆ ಇಟ್ಟುಕೊಳ್ಳಲಿ. ಇಲ್ಲವಾದರೆ ಬಿಟ್ಟುಬಿಡಲಿ. ನಾನಂತೂ ಮೈಸೂರಿಗೆ ಹೋಗುವುದಿಲ್ಲ "

ಅಕ್ಕನು ತಂಗಿಯ ಹೆಗಲ ಮೇಲೆ ಕೈ ಹಾಕಿ ಕರೆದುಕೊಂಡು ಹೋದಳು.

ಇದಾದ ಒಂದೆರಡು ದಿನಗಳ ನಂತರ ಸಂಜೆ ವೆಂಕಟರಾಯನು " ವಿಷಯವನ್ನು ತಿಳಿಸಿ ಬಿಡೋಣ. ಅಲ್ಲಿಂದ ಬಂದ ಕೂಡಲೇ ನಮ್ಮ ಹೊಸ ಮನೆಗೆ ಹೊರಟು ಹೋಗೋಣ " ಎಂದು ಉತ್ಸಾಹದಿಂದ ಹೇಳಿದನು.

ವಿಮಲೆಯು " ಅಬ್ಬಾ. ಅದಾಗುವುದಿಲ್ಲ. ನಾನು ಇಷ್ಟು ಬೇಗ ನಮ್ಮ ಮನೆಯನ್ನು ಬಿಟ್ಟು ಬರಲಾಗುವುದಿಲ್ಲ " ಎಂದು ಹೇಳಿದಳು.

" ಯಾರಿಲ್ಲದೇ ಯಾವುದೂ ನಿಂತುಹೋಗುವುದಿಲ್ಲ. ನಾವಿಲ್ಲದೇ ನಡೆಯುವುದಿಲ್ಲವೆಂದುಕೊಳ್ಳುವುದು ಭ್ರಾಂತಿ. ಕೆಲವು ದಿನಗಳು ಹೆಚ್ಚು ಕಡಮೆಯಾಗಬಹುದು. ಆದರೆ ಸರಿಹೋಗುತ್ತದೆ "

" ನೀವು ಹೇಳುವುದೆಲ್ಲವೂ ಭಾವನಾ ಪ್ರಪಂಚ. ನಿಜವಾಗಿ ಹಾಗಾಗುವುದಿಲ್ಲ "

"ಇದು ಸರಿಯಲ್ಲ, ವಿಮ್ಮಿ. ಎಂದಾದರೊಂದು ದಿನವಾದರೂ ನಾವು ಹೀಗೆ ಮಾಡಲೇ ಬೇಕಲ್ಲ"

ಅವರು ಕಾರಿನಲ್ಲಿ ಬರುತ್ತಿದ್ದರು. ಸಿನಿಮಾ ನೋಡಿಕೊಂಡು ಬೆಂಗಳೂರಿನಿಂದ ವಾಪ್ಸು ಬರುತ್ತಿದ್ದರು. ವೆಂಕಟರಾಯನು ಅವರ ತೋಟದ ಮುಂದೆ ಕತ್ತಲಿನಲ್ಲಿ ಕಾರು ನಿಲ್ಲಿಸಿ, ಅವಳ ಭುಜದ ಮೇಲೆ ತನ್ನ ಎಡಗೈಯನ್ನು ಹಾಕಿ, ಅವಳನ್ನು ಹತ್ತಿರಕ್ಕೆ ಎಳೆದುಕೊಂಡು "ನೀನು ನನ್ನನ್ನು ಪ್ರೇಮ ಮಾಡುತ್ತಿದ್ದೀ, ವಿಮಲಾ. ಪ್ರೇಮದಿಂದ ಕೂಡಿದ ಹೆಂಡತಿಯು ಗಂಡನಿಗಾಗಿ ಏನು ಬೇಕಾದರೂ ತ್ಯಾಗ ಮಾಡಲು ಸಿದ್ಧವಾಗುತ್ತಾಳೆ" ಎಂದನು.

ಅವಳು ನಿದಾನವಾಗಿ "ಹೆಂಡತಿ....ಎಂದಾದರೊಂದು ದಿನ ಹೆಂಡತಿಯಾಗುತ್ತೇನೆ, ನಿಜ. ನಾವೊಂದು ಮನೆ ಮಾಡಿಕೊಂಡು ನೀವು ಹೇಳಿದಂತೆ ಪ್ರತ್ಯೇಕವಾಗಿ ಸಂಸಾರ ಮಾಡುತ್ತೇವೆ. ಆದರೆ ಈಗಲೇ ನಮ್ಮವರನ್ನು ಬಿಟ್ಟು ಬಂದುಬಿಡಲಾರೆ" ಎಂದಳು.

"ನಿಮ್ಮ ಮನೆಯಲ್ಲಿ ನೀನೇನು ಮಾಡುತ್ತೀ. ಸ್ವಲ್ಪ ಕೆಲಸ ಮಾಡುತ್ತೀ. ಯಾರನ್ನಾದರೂ ಕೆಲಸಕ್ಕೆ ಇಟ್ಟರೆ ಆಯಿತು"

"ಯಾರಾದರೂ ಇದ್ದರೆ ನಾನು ಇದ್ದ ಹಾಗಾಯಿತೇ? ಆದರೂ ಯಾರನ್ನಾದರೂ ಇಟ್ಟುಕೊಂಡರೆ ಸಂಬಳವನ್ನು ಕೊಡಬೇಡವೇ?"

"ನಾನು ನಿಮ್ಮ ಮನೆಯವರೆಲ್ಲರನ್ನೂ ವಿಶ್ವಾಸ ಮಾಡುತ್ತೇನೆ. ಆದರೆ ನಿಮ್ಮ ಮನೆಯ ಜವಾಬ್ದಾರಿ ಎಲ್ಲವನ್ನೂ ನಾನು ವಹಿಸಿಕೊಳ್ಳಲಾಗುವುದೇ? ಶೀಲಾ ವರದೆಯರೇ ನೀನು ಮಾಡುತ್ತಿರುವ ಕೆಲಸವನ್ನು ಮಾಡಬಹುದು"

ವೆಂಕಟರಾಯನು ಹೇಳಿದ ಆ ಮಾತನ್ನು ಕೇಳಿ ವಿಮಲೆಗೆ ಕೋಪವು ಬಂದಿತು.

ಅವಳು "ನಮ್ಮ ಮನೆಯ ಜವಾಬ್ದಾರಿ ಎಲ್ಲವನ್ನೂ ನೀವು ಹೊತ್ತುಕೊಳ್ಳಿರೆಂದು ನಾನು ಕೇಳಲಿಲ್ಲ" ಎಂದಳು.

"ಆದರೆ ಅದನ್ನೇ ಒಂದು ಅಡ್ಡಿಯಾಗಿ ಹೇಳುತ್ತೀಯಲ್ಲ. ಪ್ರೇಮಿಗಳಾದ ನಾವು ಎಷ್ಟು ದಿನ ಈ ರೀತಿಯಾಗಿ ಪಾಡು ಪಡುವುದು?"

ಒಂದು ಗಳಿಗೆ ಸುಮ್ಮನಿದ್ದು ವಿಮಲೆಯು “ ನಾವು ಪ್ರೇಮ ಮಾಡ ದಿದ್ದರೇ ಚೆನ್ನಾಗಿದ್ದಿತು ” ಎಂದಳು.

ವೆಂಕಟರಾಯನು ಗಾಬರಿಯಿಂದ “ ಏನು ಹೇಳಿದೆ, ವಿಮಲಾ ” ಎಂದನು.

“ ನಾವು ಪ್ರೇಮ ಮಾಡದೇ ಇದ್ದಿದ್ದರೆ ಚೆನ್ನಾಗಿದ್ದಿತೆಂದು ಹೇಳಿದೆ ”

ಯಾರೂ ಮಾತನಾಡಲಿಲ್ಲ. ಆದರೆ ವಿಮಲೆಯು ಜೋರಾಗಿ ಉಸಿರಾಡುತ್ತಿದ್ದ ಶಬ್ದವು ಅವನಿಗೆ ಕೇಳಿಬರುತ್ತಿತ್ತು.

“ ವಿಮಲಾ. ನಾನು ಹೇಳುವುದನ್ನು ನೀನು ಸರಿಯಾಗಿ ಅರ್ಥ ಮಾಡಿಕೊಳ್ಳುವುದಿಲ್ಲ. ನಿಮ್ಮ ಮನೆಯಲ್ಲಿ ನೀನು ಹೇಳುವಷ್ಟು ನಿನ್ನ ಅವಶ್ಯಕತೆಯಿಲ್ಲ. ನೀನೇ ಒಂದು ದಿನ ಹೇಳಿದ್ದೆ. ಇಂದಿನ ವಿಷಯ ಇಂದು ಗಮನಿಸಬೇಕು. ಮುಂದೇನು ನಡೆಯುವುದೆಂದು ಯೋಚಿಸುತ್ತಾ ಕುಳಿತಿರಬಾರದೆಂದು ಹೇಳಿದ್ದೆ ”

“ ನನ್ನನ್ನು ಅಪಹಾಸ್ಯ ಮಾಡಿರೆಂದು ನಾನು ಆ ಮಾತು ಹೇಳಲಿಲ್ಲ”

“ ನಾನು ನಿನ್ನನ್ನು ಅಪಹಾಸ್ಯ ಮಾಡುತ್ತಿಲ್ಲ, ಚಿನ್ನ. ಕೋಪ ಮಾಡಬೇಡ. ಸಮಾಧಾನದಿಂದ ನಾನು ಹೇಳುವುದನ್ನು ಕೇಳು. ಒಂದು ವಾರ ಮದರಾಸಿಗೆ ಹೋಗಿ ಬರೋಣ. ವಾಪ್ಸು ಬಂದ ನಂತರ ಮಿಕ್ಕ ವಿಷಯಗಳನ್ನು ಆಲೋಚನೆ ಮಾಡೋಣ ”

“ ನಾನು ಅವರಿಗೆ ಏನೆಂದು ಹೇಳಲಿ ? ಒಂದು ವಾರ ನಾನು ಎಲ್ಲಿಯೋ ಹೊರಟುಹೋದರೆ ಅವರು ಏನೆಂದುಕೊಳ್ಳುತ್ತಾರೆ. ಅಂದರೆ ನಾನು ಅವರಿಗೆಲ್ಲವನ್ನೂ ಹೇಳಿಬಿಡಬೇಕು. ಹಾಗೆ ಹೇಳಿ ಹೊರಟು ಹೋಗಿ ಪುನಃ ಮನೆಗೆ ಹೋಗುವುದು ಹೇಗೆ ?”

ವೆಂಕಟರಾಯನು ಅವಳ ಪಕ್ಕದಲ್ಲಿ ಕುಳಿತಿದ್ದನು. ಬಲವಾಗಿ ಕೈ ಹಾಕಿ ಅವಳನ್ನು ಹಿಡಿದುಕೊಂಡಿದ್ದನು. ಮೆಲ್ಲನೆ, ಮೃದುವಾಗಿ, ಅವಳ ಬಲಗೆನ್ನೆಯನ್ನು ಒಂದು ಬಾರಿ ಚುಂಬಿಸಿದನು. ನಗುತ್ತಾ ನಯವಾದ ಧ್ವನಿಯಿಂದ “ ಈಗ ಬಂದಿರುವ ತೊಂದರೆ ಎಂದರೆ, ನೀನು ಎಷ್ಟು ಹಠ ಮಾಡುತ್ತೀಯೋ ನಾನು ನಿನ್ನನ್ನು ಅಷ್ಟೂ ಪ್ರೇಮ ಮಾಡುತ್ತೇನೆ” ಎಂದು ಹೇಳಿದನು.

ಅವಳು " ನನ್ನನ್ನು ತೊಂದರೆ ಮಾಡಬೇಡಿ. ನಾನು ಕೇಳುವುದು ಅಷ್ಟೇ " ಎಂದಳು.

" ನಾನು ನಿನಗೆ ತೊಂದರೆ ಮಾಡುತ್ತಿಲ್ಲ, ವಿಮ್ಮು. ನೀನು ನನಗೆ ತೊಂದರೆ ಮಾಡುತ್ತಿದ್ದೀಯೆ. ಯೋಚನೆ ಮಾಡು. ಎಂದಾದರೂ ನೀನು ಅವರನ್ನು ಬಿಟ್ಟು ಬರಲೇ ಬೇಕಷ್ಟೇ. ವಿಮ್ಮು, ಇದು ನಮಗಿಬ್ಬರಿಗೂ ಕಷ್ಟಕರವಾಗಿದೆ. ನಾವು ಈಗ ಗಂಡಹೆಂಡಿರೂ ಹೌದು. ಗಂಡ ಹೆಂಡಿರಾಗಿಯೂ ಇಲ್ಲ. ಇದು ಇಬ್ಬರಿಗೂ ತೊಂದರೆಯಲ್ಲವೇ ? ಇಬ್ಬರಿಗೂ ಮುಜುಗರವಲ್ಲವೇ ? ನಾವಿಬ್ಬರೂ ಒಂದು. ಒಂದು ಕಡೆ ಸಂಸಾರ ಮಾಡಬೇಕು. ನನ್ನ ಮಾತು ಕೇಳು, ವಿಮ್ಮು, ಒಂದು ಬಾರಿ ನನ್ನ ಮಾತು ಕೇಳು. ಅದರಿಂದ ನಿನಗೆ ಸುಖವಾಗುತ್ತದೆ. ನೀನು ಹೇಳುವಂತೆಯೇ ಆಗುವುದಾದರೆ ನಾವು ಸಂಸಾರವನ್ನು ಹೂಡುವ ವೇಳೆಗೆ ಮುದುಕರಾಗಿ ಹೋಗುತ್ತೇವೆ "

ಆ ಮಾತಿಗೆ ಅವಳೇನೂ ಹೇಳಲಿಲ್ಲ. ವಿಮಲೆಯು ಹೇಳುವ ಆತಂಕಕ್ಕೆ ನಿಜವಾದ ಕಾರಣವನ್ನು ತಿಳಿದುಕೊಳ್ಳಲು ನಟರಾಜನ ಮನಸ್ಸು ಹಾತೊರೆಯುತ್ತಿತ್ತು. ಇಂತಹ ಸಮಯದಲ್ಲಿ ಅಂತಹ ಪ್ರಶ್ನೆಯನ್ನು ಕೇಳಬಾರದೆಂದು ಅವನೆಷ್ಟು ಬಾರಿ ಎಂದುಕೊಂಡರೂ ಮನಸ್ಸು ಕೇಳಲಿಲ್ಲ; ಕೇಳಬಾರದ ಪ್ರಶ್ನೆಯನ್ನು ಕೇಳಿದನು.

" ವಿಮ್ಮು, ನಿನಗಿನ್ನೂ ನಟರಾಜನ ಜ್ಞಾಪಕವಿದೆಯೆ ?"

ನಿದಾನವಾಗಿ " ಹೌದು. ಆಗಾಗ ಅವರ ಜ್ಞಾಪಕ ಬರುತ್ತದೆ " ಎಂದು ಹೇಳಿದಳು.

" ಈಗಲೂ ಅವನನ್ನು ಪ್ರೀತಿಸುತ್ತೀಯಾ ?"

" ನನಗೆ ಗೊತ್ತಿಲ್ಲ. ಹೆಂಗಸರು–ನಾನೂ ಅಷ್ಟೆ–ಒಬ್ಬೊಬ್ಬರನ್ನು ಒಂದೊಂದು ವಿಧವಾಗಿ ಪ್ರೇಮ ಮಾಡುತ್ತಾರೆ. ಈಗ ನಾನೂ ನೀವೂ ಪ್ರೇಮ ಮಾಡುವ ವಿಧಾನವೇ ಬೇರೆ. ನಟರಾಜ್‌ರನ್ನು ನಾನು ಪ್ರೇಮ ಮಾಡುವ ವಿಧಾನವು ಬೇರೆ. ಆದರೆ ಅವರ ಹಾಗೆ ನನ್ನ ಮೇಲೆ ಯಾರೂ ಪ್ರಭಾವವನ್ನು ಉಂಟು ಮಾಡಲಿಲ್ಲ. ಅವರನ್ನು ನೋಡಿದರೆ, ಅವರ

ಧ್ವನಿಯನ್ನು ಕೇಳಿದರೆ, ನೆನೆಸಿಕೊಂಡರೆ ಸತ್ತಹಾಗಾಗುತ್ತದೆ. ಆ ಮೃತ ಜೀವನದಲ್ಲಿಯೂ ಅಮೃತತ್ವವಿರುತ್ತದೆ.

"ಈ ಮಾತು ನಿಮ್ಮೊಂದಿಗೆ ಆಡುವುದು ಅಷ್ಟು ಸರಿಯಲ್ಲ. ಆದರೆ ಇವೆಲ್ಲವೂ ನಿಮಗೆ ತಿಳಿದಿದೆ. ಅದು ಸುಪ್ತವಾಗಿಯೋ ಚೇತನವಾಗಿಯೋ ನಿಮ್ಮಲ್ಲಿ ಇರುತ್ತದೆ. ಅದರಿಂದ ಹೇಳುವುದೇ ಒಳ್ಳೆಯದು. ನಾನು ಅವರ ಪ್ರಭಾವಕ್ಕೆ ಒಳಗಾದೆನೆಂದು ನಿಮಗೆ ಹೇಳಿದೆನಲ್ಲಾ. ಅದರಿಂದ ನಾವಿಬ್ಬರೂ ಪರಸ್ಪರ ಮರೆತು ಬಿಡುವುದು ಒಳ್ಳೆಯದೆಂದು ಹೇಳಿದೆ. ಅದು ನಿಮಗೆ ಒಪ್ಪಿಗೆಯಾಗಲಿಲ್ಲ. ಸರಿ ಎಂದುಕೊಂಡೆ. ಅವರ ವಿಷಯವೇಕೆ ? ಪುನಃ ಈ ಜೀವನದಲ್ಲಿ ಅವರನ್ನು ನೋಡುತ್ತೇನೆಯೋ ಇಲ್ಲವೋ ?" ಎಂದಳು.

ವೆಂಕಟರಾಯನು ಆ ವಿಷಯವಾಗಿ ಮುಂದೆ ಮಾತನಾಡಲಿಲ್ಲ. ಅವನ ವಿಷಯವು ಅವನಿಗೆ ಮುಖ್ಯ.

" ವಿಮ್ಮಿ, ನಾವು ಆಚೇನಾಡಿದ್ದು ಮದರಾಸಿಗೆ ಹೊರಟು ಹೋಗಬೇಕು. ನಾನು ನಾಳೆಯೇ ಸೀಟುಗಳನ್ನು ರಿಜರ್ವ್ ಮಾಡಿಬಿಡುತ್ತೇನೆ. ನೀನು ಮನೆಯವರಿಗೆ ಹೇಳಿಬಿಡು. ಏನಾದರೂ ಹೇಳು, ಅಂತೂ ಹೊರಡುವುದಕ್ಕೆ ಸಿದ್ಧವಾಗಿರು "

ಆ ಮಾತಿನಿಂದ ವಿಮಲೆಗೆ ಕೋಪವು ಬರಲಿಲ್ಲ, ಆಯಾಸವಾದಂತಾಯಿತು. ಅವನ ಚೇತನವು ಉಡುಗಿದ ಹಾಗಾಯಿತು. ಅವಳು ಸರಿ, ಎಂದು ಹೇಳಿ ಕಾರಿನಿಂದ ಇಳಿದು ಆ ಕತ್ತಲೆಯಲ್ಲಿ ಮನೆಗೆ ಹೊರಟು ಹೋದಳು.

ಅವಳಿಗೆ ಊಟವು ಬೇಕಾಗಿರಲಿಲ್ಲ. ಆದರೂ ಸಣ್ಣದೊಂದು ದೀಪವನ್ನು ಹಚ್ಚಿಕೊಂಡು ಊಟದ ಶಾಸ್ತ್ರವನ್ನು ಮುಗಿಸಿದಳು. ಹಜಾರಕ್ಕೆ ಬಂದಳು.

ಅಲ್ಲಿ ಅತ್ತೆ, ಶೀಲಾ ವರದೆಯರು, ವಾಸು ಎಲ್ಲರೂ ಮಲಗಿದ್ದರು. ವಿಮಲೆಯು ಎಲ್ಲರಿಗೂ ನಿದ್ದೆ ಬಂದಿದೆ ಎಂದುಕೊಂಡಳು.

ಹೋಗಿ ಪಕ್ಕದಲ್ಲಿ ಮಲಗಿಕೊಂಡಾಗ ವರದೆಯು ಎದ್ದಿರುವುದು ವಿಮಲೆಗೆ ಗೊತ್ತಾಗಲಿಲ್ಲ.

ಇತರರಿಗೆ ಎಚ್ಚರವಾಗದಂತೆ ವರದೆಯು "ಸಿನಿಮಾ ಚೆನ್ನಾಗಿದ್ದಿತೇ, ಅಕ್ಕಾ" ಎಂದು ಕೇಳಿದಳು.

"ಬಹಳ ಚೆನ್ನಾಗಿದ್ದಿತು"

"ಏರ್‌ಕ್ರಾಫ್ಟ್‌ನಲ್ಲಿ ರಿಟ್ರೆಂಚ್‌ಮೆಂಟ್ ಮಾಡುತ್ತಾರಂತೆ. ಶಂಕರ ತನಗೆ ಕೆಲಸ ಹೋಗಬಹುದೆಂದು ಹೇಳಿದ"

"ಯಾವಾಗ ಹೇಳಿದ ?"

"ಬೆಳಿಗ್ಗೆಯೇ ನನ್ನೊಡನೆ ಹೇಳಿದ"

"ಅವನೆಲ್ಲಿ, ಫ್ಯಾಕ್ಟರಿಗೆ ಹೋಗಿದ್ದಾನೆಯಲ್ಲವೇ ?"

"ಹೌದು. ಈದಿನ ನೈಟ್ ಷಿಫ್ಟ್"

"ಹಾಗಾದರೆ ನಮಗೆ ಕಷ್ಟವು ಬಂದಂತೆ ಆಯಿತು"

"ಹೌದು ಅಕ್ಕ. ಆದರೆ ನೀನು ಇದ್ದುಬಿಟ್ಟರೆ ನಮಗೆಲಾ ಧೈರ್ಯ"

ಅಕ್ಕತಂಗಿಯರಿಗೆ ನಿದ್ದೆ ಬರುತ್ತಿದ್ದಿತೋ ಇಲ್ಲವೋ ಅಂತೂ ಅವರು ಮಲಗಿಕೊಂಡರು.

## ೧೯

ವಿಮಲೆಯೂ ವೆಂಕಟರಾಯನೂ ಮದರಾಸಿನಲ್ಲಿ ಒಂದು ವಾರದ ಕಾಲ ಇದ್ದರು. ಅನಂತರ ಬೆಂಗಳೂರಿಗೆ ಬಂದವರು ನೆಹರು ನಗರದ ಹೊಸ ಮನೆಯಲ್ಲಿ ಇಳಿದರು. ಆ ದಿನವೆಲ್ಲಾ ಅಲ್ಲಿದ್ದುಕೊಂಡು ಮಾರನೆಯ ದಿನ ಕೆಂಗೇರಿ ಮನೆಗೆ ಹೋಗುವುದೆಂದು ವೆಂಕಟರಾಯನು ಹೇಳಿದ್ದನು.

ಟ್ಯಾಕ್ಸಿಯಲ್ಲಿ ಹೋಗಿ ಮನೆಯ ಮುಂದೆ ಇಳಿಯುತ್ತಲೇ ಬಾಗಿಲು ತೆಗೆದಿರುವುದನ್ನು ನೋಡಿ ವಿಮಲೆಗೆ ಆಶ್ಚರ್ಯವಾಯಿತು. ಇಬ್ಬರೂ ಇಳಿದು ಮನೆಯನ್ನು ಪ್ರವೇಶ ಮಾಡಿದರು. ಡ್ರೈವರು ಹಾಸಿಗೆ ಸಾಮಾನುಗಳನ್ನು ತಂದು ಒಳಗಿಟ್ಟನು.

ಇವರುಗಳು ಒಳಗೆ ಹೋಗುತ್ತಲೇ ಹದಿನೈದು ಹದಿನಾರು ವರ್ಷದ ಹುಡುಗನೊಬ್ಬನು ಬಂದು ನಿಂತುಕೊಂಡನು.

ವೆಂಕಟರಾಯನು ಅವನನ್ನು ನೋಡಿ “ ಕೃಷ್ಣಾ. ಕಾಫೀ ತೆಗೆದುಕೊಂಡು ಬಾ ” ಎಂದು ಹೇಳಿ ಡ್ರೈವರನಿಗೆ ಬಾಡಿಗೆಯನ್ನು ಕೊಟ್ಟು ಕಳುಹಿಸಿ, ಹಜಾರದಲ್ಲಿದ್ದ ಸೋಫಾದ ಮೇಲೆ ಕುಳಿತುಕೊಂಡನು. ವಿಮಲೆಯು ಒಂದು ಗಳಿಗೆ ಸುತ್ತಲೂ ನೋಡುತ್ತಿದ್ದು ತಾನೂ ಕುಳಿತುಕೊಂಡಳು.

ಎರಡು ನಿಮಿಷಗಳೊಳಗಾಗಿ ಕೃಷ್ಣನು ದೊಡ್ಡ ಲೋಟಾಗಳಲ್ಲಿ ಕಾಫಿಯನ್ನು ತಂದು ಕೊಟ್ಟನು.

ವೆಂಕಟರಾಯನು ಕಾಫಿ ಕುಡಿಯುತ್ತಾ “ ವಿಮಲಾ ಈ ಹುಡುಗ ನಿನ್ನ ಸಹಾಯಕ್ಕೆ. ಇವನೊಳ್ಳೆಯ ಚಾಲೋಕಿ ” ಎಂದು ಹೇಳಿದನು.

ಬಚ್ಚಲು ಮನೆಯಲ್ಲಿ ನೀರು ಕಾದು ಸಿದ್ಧವಾಗಿದ್ದಿತು. ಕಾಫಿಯಾದ ನಂತರ ಇಬ್ಬರೂ ಸ್ನಾನ ಮಾಡಿದರು. ಆ ವೇಳೆಗೆ ಕೃಷ್ಣನು ಬಿಸಿಬಿಸಿಯಾದ ಇಡ್ಲಿಗಳಿಗೆ ತುಪ್ಪ ಹಾಕಿ ಚಟ್ನಿಯೊಡನೆ ತಂದಿಟ್ಟನು.

ಇಡ್ಲಿಯನ್ನು ಬಾಯಲ್ಲಿಟ್ಟುಕೊಳ್ಳುತ್ತಾ ವಿಮಲೆಯು "ಹುಡುಗ ಇಡ್ಲಿಯನ್ನು ಬಹಳ ಚೆನ್ನಾಗಿ ಮಾಡಿದ್ದಾನೆ" ಎಂದಳು.

"ನೀನು ಒಪ್ಪುತ್ತೀಯೋ ಇಲ್ಲವೋ, ಎಂದಿದ್ದೆ. ಇನ್ನೇನು ನಮ್ಮ ಕೃಷ್ಣನಿಗೆ ವಾನಾದಂತೆಯೇ ಆಯಿತು"

ತಿಂದು ಮುಗಿಯುವ ವೇಳೆಗೆ ಕೃಷ್ಣನು ಅರ್ಧರ್ಧ ಲೋಟಾ ಕಾಫೀ ತಂದು ಕೊಟ್ಟನು. ಅದನ್ನು ಕುಡಿದು ವೆಂಕಟರಾಯನು ಹೊರಗೆ ಹೊರಡುವ ಬಟ್ಟೆಬರೆಗಳನ್ನು ಹಾಕಿಕೊಳ್ಳಲಾರಂಭಿಸಿದನು.

ವಿಮಲೆಯು ಅಡಿಗೆಯ ಮನೆಗೆ ಹೋಗಿ ನೋಡಿದಳು. ತರಕಾರಿ ಹೆಚ್ಚಿಡಲಾಗಿತ್ತು. ಹುಡುಗನು ಅಡಿಗೆಯ ಏರ್ಪಾಟುಗಳಲ್ಲಿದ್ದನು.

"ಏನು ಅಡಿಗೆ ಮಾಡುತ್ತೀ, ಕೃಷ್ಣಾ"

"ನೀವೇನು ಹೇಳಿದರೂ ಮಾಡುತ್ತೇನಮ್ಮಾ"

ವಿಮಲೆಯು ನಕ್ಕು "ನಾನೇನು ಹೇಳಿದರೂ ಅದನ್ನು ಮಾಡುತ್ತೀಯಾ? ಆಗಲೇ ಅಡಿಗೆಗೆ ಸಿದ್ಧ ಮಾಡಿದ್ದೀಯೆ. ಏನು ಮಾಡುತ್ತೀ ಹೇಳು" ಎಂದಳು.

"ಬದನೇಕಾಯಿ ಎಳೆಯದಾಗಿದೆ. ಅದರ ಖಾರದಪಲ್ಯ, ಸಾರು ಮಾಡುತ್ತೇನೆ. ನಂಚಿಕೊಳ್ಳುವುದಕ್ಕೆ ಟೊಮೋಟೋ ಈರುಳ್ಳಿ ಬಜ್ಜಿ ಮಾಡುತ್ತೇನೆ. ಅದೇ ಕೇಳಬೇಕು ಎಂದಿದ್ದೆ. ನಿಮಗೆ ಈರುಳ್ಳಿ ಆಗುತ್ತದೆಯೇನಮ್ಮಾ"

"ಆಗುತ್ತದೆ. ನೀನೊಳ್ಳೆಯ ಬುದ್ಧಿವಂತ" ಎಂದು ಹೇಳಿ ಹೊರಗೆ ಬಂದಳು.

ವೆಂಕಟರಾಯನು ಹೊರಗೆ ಹೊರಡಲು ಸಿದ್ಧವಾಗಿದ್ದನು.

"ಏನು, ಈ ದಿನ ಎಲ್ಲಿಯೂ ಹೊರಗೆ ಹೋಗುವುದಿಲ್ಲವೆಂದಿದ್ದಿರಿ?"

"ಇಲ್ಲ, ವಿಮ್ಮು. ಸ್ವಲ್ಪ ಕೆಲಸವಿದೆ. ಹೊರಗೆ ಹೋಗಿ ಅದಷ್ಟು ಬೇಗ ಬಂದು ಬಿಡುತ್ತೇನೆ" ಎಂದು ಹೇಳಿ ಅವನು ಹೊರಟು ಹೋದನು

ಒಬ್ಬಳೇ ಕುಳಿತಿರುವಾಗ ವಿಮಲೆಗೆ ಮದರಾಸಿನಲ್ಲಿ ನಡೆದ ಘಟನೆಯು ನೆನಪಿಗೆ ಬಂದಿತು. ವೆಂಕಟರಾಯನು ತಾನು ಕೆಲವು ಷೇರುಗಳನ್ನು ಮಾರ ಬೇಕಾಗಿದೆ ಎಂದೂ ಅದಕ್ಕಾಗಿ ಮದರಾಸಿಗೆ ಹೋಗಬೇಕೆಂದೂ ಹೇಳಿದ್ದನು. ಅವಳೂ ಅಲ್ಲಿಗೆ ಬಂದರೆ ನಾಲ್ಕು ದಿನ ಖುಷಿಯಾಗಿದ್ದುಕೊಂಡು ಬರಬಹು ದೆಂದು ಪ್ರಚೋದನೆ ಮಾಡಿದ್ದನು. ಆದರೆ ನಿಜವಾದ ಕಾರಣವು ಅದಲ್ಲ. ವಿಮಲೆಯನ್ನು ಮದುವೆ ಮಾಡಿಕೊಳ್ಳುವುದಕ್ಕಾಗಿ ಅವನು ಮದರಾಸಿಗೆ ಅವಳನ್ನು ಕರೆದುಕೊಂಡು ಹೋದನು.

ಮದುವೆಯ ದಿನವೂ ಅದೇ ರೀತಿಯಾಗಿ ಅಗಿತ್ತು. ಅವಳಿಗೆ ವಿಷ ಯವೊಂದೂ ಗೊತ್ತಿರಲಿಲ್ಲ ಅವರುಗಳು ಉಡ್‌ಲ್ಯಾಂಡ್‌ನಲ್ಲಿ ಇಳಿದಿದ್ದರು. ಬೆಳಿಗ್ಗೆ ಕಾಫೀ ತಿಂಡೀ ಮಾಡಿಕೊಂಡು ವೆಂಕಟರಾಯನು "ಹೊರಗೆ ಹೋಗಿ ಬರೋಣ ಬಾ" ಎಂದು ಅವಳನ್ನು ಕರೆದುಕೊಂಡು ಹೋದನು. ಟ್ಯಾಕ್ಸಿಯಲ್ಲಿ ಹೋಗುತ್ತಾ ಮದುವೆಯ ವಿಷಯವನ್ನು ಹೇಳಿದನು. ಆರ್ಯ ಸಮಾಜದಲ್ಲಿ ಎಲ್ಲವನ್ನೂ ಗೊತ್ತು ಮಾಡಲಾಗಿದೆ ಎಂದೂ ತಮ್ಮ ಆಗಮನಕ್ಕಾಗಿಯೇ ಅಲ್ಲಿನವರು ಕಾಯುತ್ತಿದ್ದಾರೆ ಎಂದೂ ಈಗ ಹೋಗುತ್ತಿ ರುವುದು ಅಲ್ಲಿಗೆಂದೂ ಹೇಳಿದನು.

ಅದಕ್ಕೆ ವಿಮಲೆಯು ಪ್ರತಿರೋಧ ಮಾಡಲಿಲ್ಲ. ಮಾಡಿ ಪ್ರಯೋಜ ನವೂ ಇರಲಿಲ್ಲ. ಬಹಳ ಹೊತ್ತು ಆಲೋಚನೆ ಮಾಡಿದಳು. ಈ ಮದು ವೆಯಿಂದ ಈಗಿರುವುದಕ್ಕಿಂತಲೂ ಹೆಚ್ಚೇನು ಬದಲಾವಣೆಯಾಗುವುದಿಲ್ಲ. ಇಬ್ಬರೂ ಗಂಡಹೆಂಡಿರೆಂದು ನಾಲ್ಕು ಜನರ ಎದುರಿಗೆ ಒಪ್ಪಿದಂತಾಯಿತು. ಆ ನಾಲ್ಕು ಜನರೂ ಅಪರಿಚಿತ ವ್ಯಕ್ತಿಗಳು. ಈ ಮದುವೆಯಿಂದ ಪ್ರಯೋ ಜನವಾದರೆ ಆಗಬಹುದೇ ವಿನಾ ಅದರಿಂದ ತೊಂದರೆ ಏನೂ ಇಲ್ಲವೆಂದು ಅವಳಿಗೆ ತೋರಿತು.

ಆರ್ಯ ಸಮಾಜದಲ್ಲಿ ಇಬ್ಬರು ಪುರೋಹಿತರು ಕುಳಿತಿದ್ದರು. ಇವರು ಹೋದ ಕೂಡಲೇ ವಿವಾಹ ಕಾರ್ಯಗಳು ಆರಂಭವಾದವು. ಮದು ಮಗನನ್ನೂ ಮದುವಣಗಿತ್ತಿಯನ್ನೂ ಕೇಳಿ ಒಪ್ಪಿಗೆಯನ್ನು ಪಡೆದರು. ಸಭಾ ಸದರ ಒಪ್ಪಿಗೆಯನ್ನು ಕೇಳಿದರು. ವೆಂಕಟರಾಯ ವಿಮಲೆಯರಿಂದ ವಿವಾ

ಹದ ಒಪ್ಪಿಗೆಯ ಪತ್ರಕ್ಕೆ ರುಜು ಹಾಕಿಸಿ ತೆಗೆದುಕೊಂಡು ನಾಲ್ಕಾರು ಮಂದಿ ಸಭಾಸದರಿಂದ ಸಾಕ್ಷಿಯನ್ನು ಹಾಕಿಸಿದರು.

ಅನಂತರ ಹೋಮವಾಯಿತು. ಕೆಲವು ಮಂತ್ರಗಳನ್ನು ಹೇಳಿ ಪುರೋಹಿತರು ಅವುಗಳಿಗೆ ಅರ್ಥವನ್ನು ಹೇಳಿದರು. ಅದರಲ್ಲಿ ಹೊಸದೇನೂ ಇರಲಿಲ್ಲ. ವಿಮಲೆಯು ಇದುವರೆವಿಗಾಗಲೇ ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದವುಗಳನ್ನೇ ಪುನರಾವರ್ತಿ ಮಾಡಿ ಹೇಳಿದಂತಾಯಿತು.

ಇದಿಷ್ಟೂ ಆದ ನಂತರ ವಿಮಲೆಯು ಈ ದಿನ ಪ್ರಾತಃಕಾಲ ಇಲ್ಲಿ ಬಂದು ಇಳಿದಳು. ಇಲ್ಲಿಯೇ ಬಂದಿಳಿಯುದು ಬಹಳ ಒಳ್ಳೆಯದಾಗಿತ್ತು. ಈ ಮದುವೆಯ ವಿಷಯವನ್ನು ತನ್ನ ಮನೆಯವರಿಗೆ ಹೇಳುವುದೇ ಬೇಡವೇ? ಹೇಳುವುದಾದರೆ ಯಾವ ರೀತಿಯಾಗಿ ಹೇಳಬೇಕು ? ಈ ಮದುವೆಯ ಪರಿಣಾಮವೇನು ? ಮುಂತಾದ ವಿಷಯಗಳನ್ನು ಅವಳು ನಿರ್ಧರ ಮಾಡಬೇಕಾಗಿದ್ದಿತು. ಆ ವಿಷಯಗಳನ್ನು ಮದರಾಸಿನಲ್ಲಿರುವಾಗಲೇ ಯೋಚಿಸುತ್ತಿದ್ದಳು. ಬಗೆ ಹರಿಯದಿದ್ದುದನ್ನು ಆದಷ್ಟು ಬೇಗ ಬಗೆ ಹರಿಸಬೇಕು.

ನಾಳೆಯ ದಿನ ಪ್ರಾತಃಕಾಲ ಅವಳು ಕೆಂಗೇರಿಯ ಮನೆಗೆ ಹೋಗಬೇಕೆಂದುಕೊಂಡಿದ್ದಳು. ಅಷ್ಟರ ಒಳಗಾಗಿ ಈ ಸಮಸ್ಯೆಯು ಪರಿಹಾರವಾಗಬೇಕು. ಅವಳ ಮನಸ್ಸು ಅದರಲ್ಲಿಯೇ ತೊಳಲುತ್ತಿದ್ದಿತು.

ಮಧ್ಯಾಹ್ನ ಒಂದು ಗಂಟೆಯ ವೇಳೆಗೆ ವೆಂಕಟರಾಯನು ಬಂದನು. ಕೃಷ್ಣನು ಬಡಿಸಿದನು. ಇಬ್ಬರೂ ಕುಳಿತು ಊಟ ಮಾಡಿದರು.

ಅನಂತರ ಹಜಾರದಲ್ಲಿ ಕುಳಿತು ಇಬ್ಬರೂ ಎಲೆ ಅಡಿಕೆ ಹಾಕಿಕೊಳ್ಳುವಾಗ ವೆಂಕಟರಾಯನು “ ಈ ದಿನ ನಿಮ್ಮ ಮನೆಗೆ ಹೋಗಿ ಮದುವೆಯ ವಿಷಯವೆಲ್ಲವನ್ನೂ ಹೇಳಿಬಿಟ್ಟೆ ” ಎಂದು ಹೇಳಿದನು.

ಆ ವಿಷಯವನ್ನು ಕೇಳಬೇಕೆಂದು ಮನಸ್ಸಿದ್ದರೂ ಅವನಾಡಿದ ಮಾತಿನಿಂದ ವಿಮಲೆಯು ಅವಾಕ್ಕಾಗಿ ಬೆಚ್ಚಿಬಿದ್ದು ನೋಡಲಾರಂಭಿಸಿದಳು.

“ ನಾನು ಮದುವೆಯ ವಿಷಯವನ್ನು ಹೇಳಿದ ಕೂಡಲೇ ಅವರೆಲ್ಲರಿಗೂ ಆಶ್ಚರ್ಯವಾಯಿತು. ವರದೆಯಂತೂ ಅಳಲು ಮೊದಲು ಮಾಡಿದಳು. ಅನಂತರ ಕೂಡಲೆ ಸಮಾಧಾನವನ್ನು ಹೊಂದಿದಳು. ಶೀಲೆಯು ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಶಂಕರ, ವಾಸು ಇವರುಗಳು

ಸ್ವಲ್ಪ ಮಂಕಾದಂತೆ ಆದರು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಸರಿಹೋದರು. ನೋದರತ್ತೆ ಸಾವಿತ್ರಮ್ಮನವರು ಯಾವ ವ್ಯತ್ಯಾಸವೂ ಆಗದೇ ಇದ್ದರೆ ಹೇಗಿರಬೇಕೋ ಹಾಗಿದ್ದರು" ಎಂಬುದಾಗಿ ವೆಂಕಟರಾಯನು ಬೆಳಗಾಗ ತಾನು ಕೆಂಗೇರಿ ಮನೆಗೆ ಹೋಗಿದ್ದಾಗ ನಡೆದ ವಿಷಯವನ್ನು ಹೇಳಿದ್ದನು.

ಅದನ್ನು ವಿಮಲೆಯು ಮೌನವಾಗಿ ಕೇಳಿದಳೇ ವಿನಾ ಅದಕ್ಕೆ ಏನೂ ಹೇಳಲಿಲ್ಲ. ವೆಂಕಟರಾಯನು ಸ್ವಲ್ಪ ಹೊತ್ತು ಮಲಗಿಕೊಳ್ಳಲು ಹೋದನು. ವಿಮಲೆಯು ಕುಳಿತಲ್ಲಿಯೇ ಕುಳಿತು ಯೋಚಿಸುತ್ತಿದ್ದಳು.

ಆ ದಿನ ಮತ್ತೇನು ವಿಶೇಷವೂ ನಡೆಯಲಿಲ್ಲ. ಸಂಜೆ ಕಾಫಿಯಾಯಿತು. ಅದಾದ ಮೇಲೆ ಇಬ್ಬರೂ ಕಾರಿನಲ್ಲಿ ಕಬ್ಬನ್ ಪಾರ್ಕಿಗೆ ಹೋಗಿಬಂದರು. ಮನೆಗೆ ಬಂದು ಊಟ ಮಾಡಿ, ರೇಡಿಯೋವನ್ನು ಟ್ಯೂನ್ ಮಾಡಿ ಮನೆಯ ಹೊರಗೆ ಕಾಂಪೌಂಡಿನಲ್ಲಿ ಕುಳಿತು ಕೊಂಡರು. ಹತ್ತು ಗಂಟೆಯ ಹೊತ್ತಿಗೆ ಮಲಗಿಕೊಂಡರು.

ಅವನಿಗೆ ಬಲು ಬೇಗ ನಿದ್ದೆಯು ಬಂದುಬಿಟ್ಟಿತು. ಆದರೆ ವಿಮಲೆಯು ಎಚ್ಚರವಾಗಿಯೇ ಇದ್ದಳು. ಅವಳ ಮನಸ್ಸಿನಲ್ಲಿ ಬಗೆ ಬಗೆಯ ಆಲೋಚನೆಗಳು ಬರುತ್ತಿದ್ದವು ಅವಳ ಹೃದಯವು ಶಿಲೆಯಂತೆ ಭಾರವಾಗಿದ್ದಿತು. ಇದು ಅವಳ ಮನೆ, ವಿದ್ಯುತ್ ಸುಸಜ್ಜಿತವಾದ ಅಡಿಗೆ ಮನೆ. ಬಚ್ಚಲು ಮನೆಗಳು, ಹಜಾರ, ಅಂಗಳ, ಶಯ್ಯಾನ ಗೃಹ ಎಲ್ಲವೂ ಅವಳದು. ವೆಂಕಟರಾಯನು ಎಷ್ಟೋ ಖರ್ಚು ಮಾಡಿ ಸುಂದರವಾಗಿ ಶೃಂಗರಿಸಿದ್ದಾನೆ. ಇವೆಲ್ಲವರಿಂದ ಅವಳ ಹೃದಯವು ಸಂತಪ್ತವಾಗುವ ಹಾಗಿದ್ದರೆ——?

ಇದೊಂದೂ ಪ್ರಯೋಜನವಿಲ್ಲ. ಅವಳ ಮನಸ್ಸು ತನ್ನವರಿಗಾಗಿ ಹಾತೊರೆಯುತ್ತಿದೆ. ಆ ಕತ್ತಲೆಯಲ್ಲಿ ವೆಂಕಟರಾಯನು ತನ್ನ ಮನೆಯವರಿಗೆ ಮದುವೆಯಾದ ವೃತ್ತಾಂತವನ್ನು ಹೇಳುತ್ತಿರುವಂತೆ ಕಂಡುಬಂದಿತು. ಆ ವಿಷಯವನ್ನು ಕೇಳಿದ ಕೂಡಲೇ ತನ್ನವರ ಮುಖಗಳು ಪೆಚ್ಚಾದಂತೆ ಅವಳಿಗೆ ಕಂಡಿತು ವಿಮಲೆಯು ಕಿಟಕಿಯಲ್ಲಿ ಹೊರಗಡೆ ನೋಡಿದಳು. ಒಳ್ಳೆಯ ಬೆಳದಿಂಗಳು ಪ್ರಕಾಶಿಸುತ್ತಿತ್ತು. ಆ ಬೆಳದಿಂಗಳಲ್ಲಿ ತಮ್ಮ ತೋಟ, ಅಲ್ಲಿರುವ ಹಳೆಯ ಮುರುಕಲು ಮನೆ, ಅದರ ಪಕ್ಕದಲ್ಲಿ ಬೆಳೆದಿರುವ ದೊಡ್ಡ ಮರ, ಮನೆಯ ಮೇಲೆಲ್ಲಾ ಹರಡಿಕೊಂಡಿರುವ ಆ ಮರದ ದಪ್ಪ

ವಾದ ಕೊಂಬೆಗಳು ಇವೆಲ್ಲವೂ ಹೇಗಿರುತ್ತವೆಂದು ಮನಸ್ಸಿನಲ್ಲಿಯೇ ಚಿತ್ರಿಸಿಕೊಂಡಳು.

ತನ್ನ ಮನೆಯವರನ್ನು ಹೀಗೆ ಬಲು ದಿನಗಳು ಬಿಟ್ಟಿದ್ದರೆ ತನಗೆ ಹುಚ್ಚು ಹಿಡಿಯುತ್ತದೆಂದು ತೋರಿತು.

ಈ ಮಾತು ಕೇಳಿದಾಗ ಶಂಕರ ವಾಸುಗಳು ಮಂಕಾಗಿ ಕಂಡಿರಬಹುದು. ವರದೆಯು ಅತ್ತಿರಬಹುದು. ಶೀಲೆಯು ತೋರ್ಪಡಿಸಿಕೊಳ್ಳದೇ ಇದ್ದರೂ ಮನಸ್ಸಿನಲ್ಲಿಯೇ ಕೊರಗುತ್ತಿರಬಹುದು. ತಾನು ಒಂದು ದಿನ–ಒಂದು ರಾತ್ರಿ ಮನೆಯಲ್ಲಿಲ್ಲದಿದ್ದರೂ ಅವರೆಲ್ಲರೂ ಕಳವಳ ಪಡುತ್ತಿದ್ದರು. ಈಗ ತಾನಿನ್ನು ಆ ಮನೆಗೆ ಕಾಲಿಡುವುದಿಲ್ಲವೆಂದು ಅವರಿಗೆ ಗೊತ್ತಾದಾಗ–ಅದೂ ವೆಂಕಟರಾಯನಿಂದ ವಿಷಯವು ತಿಳಿದಾಗ ಆ ಪರ ಕೋಮಲವಾದ ಹೃದಯಗಳು ಎಷ್ಟು ಪತರಗುಟ್ಟಿರಬಹುದು.

ವರದೆಯು ಅತ್ತಳೆಂಬುದು ನೆನಪಿಗೆ ಬಂದ ಕೂಡಲೇ ವಿಮಲೆಯ ಕತ್ತು ಕಟ್ಟಿಕೊಂಡು ಬಂದಿತು. ಅವಳು ಮತ್ತು ಶೀಲೆಯರು ಮನೆಗೆಲಸಗಳನ್ನು ಹೇಗೆ ನಿಭಾಯಿಸುತ್ತಾರೆ. ಕಾಫಿ ಮಾಡುವುದು, ಅಡಿಗೆ ಮಾಡಿ ಬಡಿಸುವುದು, ಬಟ್ಟೆಗಳನ್ನು ಒಗೆಯುವುದು, ಒಲೆಗಾಗಿ ತೋಟದಲ್ಲಿ ಪುಳ್ಳೆಗಳನ್ನು ಆರಿಸಿಕೊಂಡು ಬರುವುದು, ಮನೆ ಗುಡಿಸಿ ಸಾರಿಸುವುದು, ಅಬ್ಬಾ, ಈ ಇಷ್ಟೊಂದು ಕೆಲಸಗಳನ್ನು ಆ ಮಕ್ಕಳು ಹೇಗೆ ಮಾಡುತ್ತಾರೆ.

ಪಕ್ಕದಲ್ಲಿ ಮಲಗಿರುವ ವೆಂಕಟರಾಯನು ತನ್ನನ್ನು ಎಷ್ಟೋ ಪ್ರೇಮ ಮಾಡುತ್ತಾನೆ. ತನಗಾಗಿ ಎಷ್ಟೋ ಖರ್ಚು ಮಾಡುತ್ತಾನೆ. ಆದರೇನು ? ಪಂಜರದಲ್ಲಿ ಹಿಡಿದಿಟ್ಟ ಗಿಣಿಯಂತಾಗಿದೆ. ಅಲ್ಲಿಂದ ಬಿಡಿಸಿಕೊಂಡು ಹೋಗಬೇಕೆಂದು ಅವಳ ಶರೀರದ ಕಣಕಣವೂ ಪ್ರಯತ್ನ ಮಾಡುತ್ತಿದ್ದಿತು.

ಮಧ್ಯ ರಾತ್ರಿಯ ಸಮಯದಲ್ಲಿ ವಿಮಲೆಯು ಬೆಳಗಾಗುತ್ತಲೇ ಕೆಂಗೇರಿಯ ಮನೆಗೆ ಹೋಗಿ, ತನ್ನವರೆಲ್ಲರನ್ನೂ ನೋಡಬೇಕೆಂದುಕೊಂಡಳು. ಅದರಿಂದ ತನ್ನ ಮನಸ್ಸು ಸಮಾಧಾನವಾಗುತ್ತದೆಂದು ತೋರಿತು. ಬೆಳಗಾಗ ಹೋದರೆ ಮಧ್ಯಾಹ್ನದ ಊಟಕ್ಕೆ ವಾಪ್ಸು ಬರಬೇಕಾಗುತ್ತದೆ. ವೆಂಕಟರಾಯನು ಹಟಮಾಡುತ್ತೀನೆ. ಬೇಗ ಊಟವನ್ನು ಮುಗಿಸಿಗೊಂಡು ಹೋದರೆ ಅಲ್ಲಿ ಬೇಕಾದಷ್ಟು ಹೊತ್ತು ಇರಬಹುದು. ನಿಧಾನವಾಗಿ ಅವ

ರೊಡನೆ ಮಾತನಾಡಬಹುದು, ಅಳಬಹುದು, ನಗಬಹುದು, ತನ್ನ ಪರಿಸ್ಥಿತಿ ಯನ್ನೆಲ್ಲಾ ಸಾವಧಾನವಾಗಿ ವಿವರಿಸ ಬಹುದು. ವರದೆಯನ್ನು ಆಲಂಗಿಸಿ ಅವಳಿಗೆ ಸಮಾಧಾನ ಹೇಳಬಹುದು. ಓಡುತ್ತಾ ಬರುವ ವಾಸುವನ್ನು ಎತ್ತಿಕೊಂಡು ಮುತ್ತಿಡಬಹುದು. ಹೊರಗಡೆ ಆಡುತ್ತಿದ್ದು ಅಕ್ಕನನ್ನು ನೋಡಿದೊಡನೆಯೇ ಓಡಿಬರುವ ದಣಿದ ವಾಸುವಿನ ಮೈ ವಾಸನೆಯು ಎಷ್ಟು ಹಿತವಾಗಿರುತ್ತದೆ. ತಾನು ಹೋಗುವಾಗ ಬೇಕಾದಷ್ಟು ಹಣ್ಣು ಹಂಪಲು ಗಳನ್ನೂ ಮಿಠಾಯಿಯನ್ನೂ ತೆಗೆದುಕೊಂಡು ಪೋಗಬೇಕೆಂದುಕೊಂಡಳು.

ಆ ಸುಖ ಸ್ವಪ್ನಗಳಲ್ಲಿಯೇ ಅವಳಿಗೆ ನಿದ್ದೆಯು ಬಂದಿತು.

ಮಾರನೆಯ ದಿನ ಬೆಳಗಾಗ ವಿಮಲೆಯೇ ಅಡಿಗೆಯ ಮನೆಗೆ ಹೋಗಿ ಕೃಷ್ಣನು ಮಾಡಿಟ್ಟಿದ್ದ ಕಾಫಿಯನ್ನು ತಂದು ಗಂಡನಿಗೆ ಕೊಟ್ಟಳು.

ಕಾಫಿಯನ್ನು ಕುಡಿಯುತ್ತಾ ವೆಂಕಟರಾಯನು " ನಾವಿಷ್ಟು ಸುಲಭ ವಾಗಿ ಸಂಸಾರ ಹೂಡುವುದಕ್ಕಾಗುವುದೆಂದು ನೆನಸಿರಲಿಲ್ಲ, ವಿಮ್ಮು. ಅಂತೂ ಇದೊಂದು ಸುಖಸ್ವಪ್ನದಂತೆ ನನಗೆ ಕಂಡು ಬರುತ್ತಿದೆ" ಎಂದನು.

" ಸ್ವಪ್ನದಲ್ಲಿ ಕಾಫೀ ಲೋಟವನ್ನು ಕೆಳಗೆ ಹಾಕಿಬಿಡಬೇಡಿ " ಎಂದು ಹೇಳುತ್ತಾ ವಿಮಲೆಯು ಕಾಫಿ ಕುಡಿಯ ತೊಡಗಿದಳು.

" ವಿಮಲಾ. ನಿಮ್ಮ ಮನೆಯವರು ಏನೆನ್ನುತ್ತಾರೆಯೋ ಎಂದು ನನಗೂ ಭಯವಾಗಿತ್ತು. ಆದರೆ ಅದು ಸ್ವಲ್ಪವೂ ತೊಂದರೆಯಾಗಲಿಲ್ಲ "

ಆ ಮಾತು ವಿಮಲೆಯ ದುಃಖವನ್ನು ಎತ್ತಿ ಹಾಕಿತು.

ಆದರೂ ಅವಳದನ್ನು ಮುಚ್ಚಿಕೊಂಡು " ನಿಮ್ಮ ಸೋದರ ಮಾವನು ಏನು ಹೇಳಿದರು ?" ಎಂದಳು.

" ಏನೋ ಹೇಳಿದರು, ಬಿಡು. ಅದನ್ನೆಲ್ಲಾ ದೊಡ್ಡದು ಮಾಡಿ ಕೊಂಡು ಯೋಚಿಸ ತೊಡಗಿದರೆ ನಾವು ಸಂಸಾರ ಮಾಡುವುದೇ ಸಾಧ್ಯವಿಲ್ಲ "

ವೆಂಕಟರಾಯನು ಮನೆಯಿಂದ ಹೊರಗೆ ಹೋಗಲು ಸನ್ನದ್ಧವಾಗಿ " ಚಿನ್ನಾ, ಬೇಗ ಬಂದು ಬಿಡುತ್ತೇನೆ " ಎಂದನು.

" ಹೊತ್ತು ಮಾಡಬೇಡಿ, ನಾನು ಈ ದಿನ ಕೆಂಗೇರಿಗೆ ಹೋಗಬೇಕೆಂ ದಿದ್ದೇನೆ "

" ಈ ದಿನವೇ ಹೋಗಬೇಕೆ ?"

" ಅಯ್ಯೋ ! ಹೋಗದಿದ್ದರೆ ಏನೆಂದುಕೊಳ್ಳುತ್ತಾರೆ ? ಹೋಗ ಲೇಬೇಕು "

" ಸರಿ. ಹಾಗಾದರೆ ಬೇಗಲೇ ಬರುತ್ತೇನೆ. ನಾವಿಬ್ಬರೂ ಹೋಗಿ ಅವರನ್ನೆಲ್ಲಾ ನೋಡಿಕೊಂಡು ಬರೋಣ "

ಅವನಿಲ್ಲದೆ ತಾನೇ ಮನೆಗೆ ಹೋಗಿ ಬರಬೇಕೆಂದು ಮನಸ್ಸು ಬಯ ಸುತ್ತಿತ್ತು. ಆದರಾ ಮಾತನ್ನವಳು ಹೇಳಲಿಲ್ಲ.

ವಿಮಲೆಯು ಗಂಡನನ್ನು ಕಳಿಸಿ ಮನೆಯೊಳಗೆ ಬಂದಳು.

ಗಂಡನೂ-ಈ ಮನೆಯೂ ಅವಳ ಮೇಲೆ ಒಂದು ಪರಿಣಾಮವನ್ನು ಉಂಟು ಮಾಡಿದ್ದವು. ಅವಳ ತಾಯಿಯು ಬದುಕಿದ್ದಾಗ ಒಂದೊಂದು ಬಾರಿ " ವಿಮಲಾ. ನನ್ನ ಕಾಯಿಲೆಯಿಂದ ನಿನ್ನಲ್ಲಿ ಬಹಳ ಬದಲಾವಣೆ ಯಾಗಿದೆ. ಇನ್ನೂ ಹುಡುಗರೊಡನೆ ಆಡಿಕೊಂಡಿರಬೇಕಾದ ನೀನು ಜವಾ ಬ್ದಾರಿ ಹೊತ್ತ ಹೆಂಗಸಿನಂತೆ ನನಗೆ ಕಾಣುತ್ತೀಯೆ, ಎಂದು ಹೇಳುತ್ತಿದ್ದರು. ಅವರು ಬದುಕಿದ್ದಾಗ ಅವಳು ಜವಾಬ್ದಾರಿ ಹೊತ್ತ ಹೆಂಗಸಾಗಿದ್ದಳೋ ಇಲ್ಲವೋ, ಆಮೇಲೆಯಂತೂ ಆಗಿದ್ದಳು. ಆಗ ಕೆಲವು ಬಾರಿ ತಾನು ತಾಯಿ ಯಾಗುತ್ತೇನೆಂಬ ವಿಷಯವು ನೆನಪಿಗೆ ಬರುತ್ತಿದ್ದಿತು. ಆಗವಳಿಗೆ ಅದು ಹೊಸದಾಗಿ ಕಂಡು ಬರುತ್ತಿರಲಿಲ್ಲ. ಮನೆಯವರೆಲ್ಲರೂ ಅವಳಿಗೆ ಮಕ್ಕ ಳಂತೆ ಕಂಡು ಬರುತ್ತಿದ್ದರು. ಇನ್ನೊಂದು ಹೊಸ ಮಗುವು ಸಂಸಾರಕ್ಕೆ ಸೇರುತ್ತದೆ ಎಂದು ಭಾವನೆ ಮಾಡುತ್ತಿದ್ದಳು. ಆದರೆ ಅವಿವಾಹಿತೆಯ ಮಗುವು ಸಂಸಾರದಲ್ಲಿ ಸೇರುವುದೆಂಬುದು ಈ ಸಮಾಜದಲ್ಲಿ ಎಷ್ಟು ಕಷ್ಟವೆಂ ಬುದು ಅವಳ ಸರಳವಾದ ಮನಸ್ಸಿಗೆ ಅರ್ಥವಾಗುತ್ತಿರಲಿಲ್ಲ.

ಆದರೆ ಈ ಮನೆಗೆ ಬಂದ ಒಂದು ದಿನದಲ್ಲಿಯೇ ಅಪಾರವಾದ ಬದ ಲಾವಣೆಯಾಗಿದ್ದಿತು. ಅವಳಿಗೆ ಯಾವ ಜವಾಬ್ದಾರಿಯೂ ಇಲ್ಲ. ಇಂತಹ ಕೆಲಸವನ್ನು ಮಾಡಲೇ ಬೇಕೆಂಬ ಪ್ರತ್ಯಕ್ಷವಾದ ಅಥವಾ ಪ್ರತ್ಯಕ್ಷವಾದ ಒತ್ತಾಯವಿಲ್ಲ. ವೆಂಕಟರಾಯನು ಅವಳನ್ನು ಮಗುವನ್ನು ಇಟ್ಟಂತೆ ಇಟ್ಟಿದ್ದನು. ಮಗುವನ್ನು ನೋಡಿಕೊಳ್ಳುವಂತೆ ನೋಡಿಕೊಳ್ಳುತ್ತಿದ್ದನು.

ಆದರೆ ಅವಳಿಗೆ ವಯಸ್ಸಾಗಿದ್ದುದರಿಂದ ಅವಳು ಮಗುವಿನಂತೆ ಅಲ್ಲದೇ ಹುಡುಗಿಯಂತೆ ಭಾವನೆ ಮಾಡುತ್ತಿದ್ದಳು.

ಈ ಒಂದು ದಿನದಲ್ಲಿ ಅವಳಿಗೆ ತಾಯಾಗುವ ನೆನಪೂ ಬಂದಿತ್ತು. ಆದರೆ ಅದು ಬಂದ ರೀತಿಯು ಹಿಂದಿನದಲ್ಲ. ತಾನೂ ವೆಂಕಟರಾಯನೂ ಹುಡುಗರಂತೆ ಅವಳಿಗೆ ಭಾಸವಾಗುತ್ತಿದ್ದಿತು. ಹುಡುಗರಿಗೆ ಬೊಂಬೆಯು ಸಿಕ್ಕಿದಂತೆ ತನಗೊಂದು ಮಗುವು ಸಿಗುವುದೆಂದು ತೋರುತ್ತಿದ್ದಿತು.

ಮನಸ್ಸು ಯಾಕೋ ಖುಷಿಯಾಗಿದ್ದಿತು. "ಇದೇನು ನನ್ನ ಮನಸ್ಸು ಈ ದಿನ ಇಷ್ಟೊಂದು ಆನಂದವಾಗಿದೆ" ಎಂದು ಆಗಾಗ ಯೋಚಿಸುತ್ತಿದ್ದಳು. ಅಷ್ಟು ಹೊತ್ತಿಗೆ ಮನೆಯ ಕೆಲಸದವಳೂ ಕೃಷ್ಣನೂ ಕೆಲಸ ಕಾರ್ಯಗಳೆಲ್ಲವನ್ನೂ ಮುಗಿಸಿದ್ದರು. ಆದರೂ ಮಲಗುವ ಮನೆಗೆ ಹೋಗಿ ಹಾಸಿಗೆಯನ್ನು ಸರಿ ಮಾಡಿದಳು. ಒಗೆಯಲು ಬಟ್ಟೆಗಳೆಲ್ಲವನ್ನೂ ತೆಗೆದು ಹಾಕಿದಳು. ರೇಡಿಯೋವನ್ನೂ ಫರ್ನೀಚರುಗಳನ್ನೂ ಮತ್ತೊಂದು ಬಾರಿ ಒರಸಿದಳು.

ಬೇಗ ಬರಬೇಕೆಂದು ಹೇಳಿದ್ದರೂ ವೆಂಕಟರಾಯನು ಬರುವುದು ಮಧ್ಯಾಹ್ನ ಒಂದೂವರೆ ಗಂಟೆಯಾಗಿದ್ದಿತು.

"ಏನು ಇಷ್ಟು ಹೊತ್ತು ಮಾಡಿದಿರಿ ?" ಎಂದಳು.

ವೆಂಕಟರಾಯನು "ಬ್ಯಾಂಕಿನಲ್ಲಿ ಹೊತ್ತಾಗಿಹೋಯಿತು" ಎಂದು ಹೇಳಿ ಬಟ್ಟೆಗಳನ್ನು ಬಿಚ್ಚಲು ಹೋದನು.

ವಿಮಲೆಗೆ "ಹೋಗೋಣ, ಈಗಲೇ ಹೋಗೋಣ" ಎಂದು ಕಿರುಚುತ್ತಾ ಕುಣಿದಾಡಬೇಕೆಂದು ತೋರಿತು.

ಮನೆಯಲ್ಲಿ ಗಂಡನೂ ಕೃಷ್ಣನೂ ಇಲ್ಲದಿದ್ದರೆ ಹೇಗೆಯೋ ಮಾಡಿಬಿಡುತ್ತಿದ್ದಳೋ, ಏನೋ ?

ಕೆಂಗೇರಿಯ ಮನೆಗೆ ಹೋದುದು ಹಿಂದಿನ ರಾತ್ರಿ ವಿಮಲೆಯು ನೆನಸಿದಂತೆ ಸುಖಕರವಾಗಲಿಲ್ಲ. ಅವರು ಅಲ್ಲಿಗೆ ಹೋಗುವ ವೇಳೆಗೆ ನಾಲ್ಕು ಗಂಟೆಯಾಗಿದ್ದಿತು. ಬೇಸಿಗೆಯ ಉರಿಬಿಸಿಲು ಬೇಯುತ್ತಿತ್ತು. ಅಡಿಗೆ

ಮನೆಯ ಹೊಗೆಯು ಹಜಾರದಲ್ಲಿ ಸ್ವಲ್ಪ ಸ್ವಲ್ಪ ಸುಳಿದಿತ್ತು. ಆಗ ತಾನೇ ಟೀಗೆ ನೀರು ಸುರಿದು ಹಾಲನ್ನು ಒಲೆಯ ಮೇಲಿಟ್ಟು ಹೊರಗೆ ಬಂದಿದ್ದ ವರದೆಯ ಕಣ್ಣುಗಳು ಕೆಂಪಗಾಗಿದ್ದುವು. ಅವಳು ಅಕ್ಕನಿಗಾಗಿ ಅತ್ತು ಹಾಗಾಗಿದ್ದಿತೋ, ಹೊಗೆಯಿಂದ ಕೆಂಪಗಾಗಿದ್ದಿತೋ, ಹೇಳುವಂತೆ ಇರಲಿಲ್ಲ. ಅತ್ತೆಯು ಬೆರಗಾಗಿ ಬೆಚ್ಚಗಣ್ಣುಗಳಿಂದ ನೋಡುತ್ತಾ ಮೂಲೆಯಲ್ಲಿ ಕುಳಿತಿದ್ದರು.

ಹಜಾರದಲ್ಲಿ ಚಾಪೆಯ ಮೇಲೆ ವರದೆಯು ಕುಳಿತಿದ್ದಳು. ಪಕ್ಕದಲ್ಲಿ ಕುಳಿತಿದ್ದ ವರದೆಯ ಮೇಲೆ ಕೈ ಹಾಕಿಕೊಂಡಿದ್ದಳು. ಶೀಲೆಯು ಅಕ್ಕನ ತೊಡೆಯ ಮೇಲೆ ಕುಳಿತಂತೆಯೇ ಕುಳಿತಿದ್ದಳು. ಎದುರಿಗೆ ಶಂಕರನೂ ವೆಂಕಟರಾಯನೂ ಕುಳಿತಿದ್ದರು. ಓಡಿ ಬಂದ ವಾಸುವು ಅವಳ ಮೇಲೆ ಬಿದ್ದು ತಬ್ಬಿಕೊಂಡನು. ಎಲ್ಲರೂ ಅತ್ತರು. ವೆಂಕಟರಾಯನ ಹೊರತಾ ಉಳಿದವರೆಲ್ಲರೂ ಅತ್ತರು.

ವರದೆಯು "ನಿನ್ನೆಯಿಂದ ಯಾರೂ ಸರಿಯಾಗಿ ಊಟವನ್ನೇ ಮಾಡಲಿಲ್ಲ, ಅಕ್ಕ. ನಾನು ಮಾಡಿದ ಅಡಿಗೆಯು ಯಾರಿಗೂ ಸರಿಬೀಳ ಲಿಲ್ಲ" ಎಂದಳು.

ಶಂಕರನು ಏನೋ ಮಾತನಾಡಲು ಹೋಗಿ ಸುಮ್ಮನಾದನು.

ಶೀಲೆಯು "ಹಾಗಲ್ಲ, ವರದೆ ಮಾಡಿದ ಅಡಿಗೆಯು ಚೆನ್ನಾಗಿತ್ತು. ಅಕ್ಕನಿಲ್ಲದಿರುವುದರಿಂದ ಊಟದಲ್ಲಿ ರುಚಿಯೇ ಇಲ್ಲ" ಎಂದಳು.

ಶೀಲಾ ವರದೆಯರು ಟೀ ತರಲು ಒಳಗೆ ಹೋದಾಗ ವಿಮಲೆಯು ಸಾವಿತ್ರಮ್ಮನವರ ಬಳಿ ಹೋಗಿ ಕುಳಿತು ಮಾತನಾಡಿದಳು.

ವಿಮಲೆಯು ಆಡಿದ ಅನೇಕ ಮಾತುಗಳಿಗೆ ಉತ್ತರವಾಗಿ ಅವರು "ನಾನು ಬೆಂಗಳೂರಿಗೆ ಒಂದು ಬಾರಿ ಬರಬೇಕೆಂದಿದ್ದೇನೆ" ಎಂದು ಹೇಳಿದರು.

ಶಂಕರನು "ವಿಮಲಾ. ಅತ್ತೆ ಮೋಟಾರಿನಲ್ಲಿಯಾದರೂ ಕುಳಿತು ನಿನ್ನ ಮನೆಗೆ ಬಂದು ನೋಡಿಕೊಂಡು ಬರಬೇಕೆಂದಿದ್ದಾರೆ" ಎಂದನು.

ಚೆನ್ನಾಗಿ ಕತ್ತಲಾಗುವವರೆವಿಗೆ ಅಲ್ಲಿಯೇ ಇದ್ದು ವಿಮಲೆಯು ವೆಂಕಟರಾಯನೊಂದಿಗೆ ವಾಪ್ಸು ಹೋದಳು. ಈ ದಿನ ಬಂದು ಹೋದುದು ಅವಳ

ಮನಸ್ಸಿಗೆ ದಣಿವಾಗಲಿಲ್ಲ. ಆಗಾಗ ಬಂದು ಹೆಚ್ಚು ಹೊತ್ತು ಇಲ್ಲಿಯೇ ಇರಬೇಕೆಂದುಕೊಂಡಳು.

ಕಾರು ಬೆಂಗಳೂರಿಗೆ ಹೋಗುತ್ತಿದ್ದರೂ ವಿಮಲೆಯ ಮನಸ್ಸು ಕೆಂಗೇರಿಯಲ್ಲಿಯೇ ಇದ್ದಿತು.

## ೨೦

ವಾರವು ಉರುಳುವುದರೊಳಗಾಗಿ ವಿಮಲೆಗೆ ಅತ್ಯಂತ ಪ್ರಿಯವಾದ ಸನ್ನಿವೇಶವು ಪ್ರಾಪ್ತವಾಯಿತು. ವೆಂಕಟರಾಯನು ವಾಸ್ತವವಾಗಿ ಷೇರು ವ್ಯಾಪಾರಕ್ಕಾಗಿ ಮೂರು ನಾಲ್ಕು ದಿನಗಳು ಮದರಾಸಿಗೆ ಹೋಗಬೇಕಾಗಿ ಬಂದಿತು. ಆಗ ವಿಮಲೆಯು ಕೆಂಗೇರಿಗೆ ಬಂದಿದ್ದಳು. ಬಂದ ಒಂದೇ ಒಂದು ಗಂಟೆಯ ಒಳಗಾಗಿ ಅವಳು ಮೊದಲಿನ ವಿಮಲೆಯಾಗಿದ್ದಳು. ವರದೆ ಶೀಲಿಯರು ಎಷ್ಟೇ ತಡೆದರೂ ಬಿಡದೆ ಮೊದಲಿನಂತೆ ಮನೆಗೆಲಸಗಳೆಲ್ಲವನ್ನೂ ತಾನೇ ಮಾಡುತ್ತಿದ್ದಳು. ಒಂದೊಂದು ಬಾರಿ ಹೊಸ ಸಂಸಾರವು ಸುಖಕರವೋ, ಈ ಹಳೆಯ ಸಂಸಾರವು ಸುಖಕರವೋ ಎಂಬುದಾಗಿ ತನ್ನಲ್ಲಿ ತಾನೇ ತಾಳೆ ಹಾಕಿ ನೋಡುತ್ತಿದ್ದಳು. ಹಳೆಯ ಸಂಸಾರವೇ ಸುಖಕರವೆಂದು ಅವಳಿಗೆ ತೋರುತ್ತಿತ್ತು.

ಒಂದು ಬಾರಿ ಅವಳು ಶಂಕರನೊಂದಿಗೆ ಏಕಾಂತವಾಗಿ ಮಾತನಾಡುತ್ತಿದ್ದಾಗ “ ನೀನು ಏನೇ ಹೇಳು, ನಾನು ಮಾಡಿದುದು ತಪ್ಪೆಂದು ನನಗೆ ಕಂಡುಬರುತ್ತಿದೆ ” ಎಂದು ಹೇಳಿದಳು.

“ ಎಂತಹ ತಪ್ಪು, ವಿ ಮ ಲಾ. ನಮ್ಮಮ್ಮ ಸತ್ತ ದಿನದಿಂದಲೂ ನೀನು ನಮಗಾಗಿ ದುಡಿಯುತ್ತಿದ್ದೀ. ನಿನಗೆ ವಯಸ್ಸಾಗಲಿಲ್ಲವೇ ? ನೀನೂ ನಾಲ್ಕು ಮಂದಿಯಂತೆ ಸಂಸಾರ ಮಾಡಿಕೊಂಡು ಬದುಕಬೇಡವೇ ? ವೆಂಕಟರಾಯನು ಸಹ ಬಹಳ ಒಳ್ಳೆಯವನು. ನೀನು ಮದುವೆಯಾಗದೇ ಇದ್ದಿದ್ದರೆ ತಪ್ಪು. ಮದುವೆಯಾದುದರಲ್ಲಿ ಸ್ವಲ್ಪವೂ ತಪ್ಪಿಲ್ಲ ”

" ಅಲ್ಲಣ್ಣ. ಮನೆಯಲ್ಲಿ ಯಾರಾದರೂ ಕಾಯಿಲೆ ಬಿದ್ದರೇನು ಗತಿ. ವರದಾ ಶೀಲೆಯರಿಗೆಷ್ಟು ಕಷ್ಟ "

" ಅದೊಂದೂ ಇಲ್ಲ, ಯಾರೂ ಕಾಯಿಲೆ ಬೀಳುವುದಿಲ್ಲ, ಯಾರಿಗೂ ಕಷ್ಟವಾಗುವುದಿಲ್ಲ "

ವಿಮಲೆಯು " ನಿನಗೂ ಏರ್‌ಕ್ರಾಫ್ಟಿನಲ್ಲಿ ಕೆಲಸ ಹೋಯಿತಲ್ಲಾ " ಎಂದಳು.

" ಆದರೇನಂತೆ. ಈಗ ವರದಾಗೆ ಐವತ್ತು ರೂಪಾಯಿ ಸಂಬಳ ಬರುತ್ತಿದೆ. ನನಗೆ ಈಗ ಕೆಲಸವಿಲ್ಲ. ಇನ್ನು ಮುಂದೆಯೂ ಹಾಗೆಯೇ ಇರುತ್ತದೆಯೆ ?" ಎಂದು ಹೇಳಿದನು.

ಹಾಗೆ ಹೇಳಿ ಮೆಲ್ಲನೆ " ಒಂದು ಕೆಲಸವಾಯಿತು, ವಿಮಲಾ. ನೀವು ಮದರಾಸಿನಿಂದ ಬಂದಿರಲ್ಲಾ. ಆ ದಿನ ಹತ್ತು ಗಂಟೆಯ ಸುಮಾರಿಗೆ ವೆಂಕಟರಾಯನು ಇಲ್ಲಿಗೆ ಬಂದ. ಮದುವೆಯ ವಿಷಯವನ್ನು ಹೇಳಿದ ನಂತರ ನನ್ನನ್ನು ಹೊರಗಡೆ ಕರೆದುಕೊಂಡು ಹೋದ. ನನಗೆ ಸಾವಿರ ರೂಪಾಯಿ ಕೊಡುವುದಕ್ಕೆ ಬಂದ. ನಾನು ಬೇಡವೆಂದು ಹೇಳಿದೆ. " ಅದು ವಿಮಲೆಯ ಹಣ. ನೀನು ತೆಗೆದುಕೊಳ್ಳಲೇಬೇಕು " ಎಂದು ಬಲಾತ್ಕಾರ ಮಾಡಿದ. ಕಡೆಗೆ ನನ್ನ ಹೆಸರಿನಲ್ಲಿ ಆ ಹಣ ಬ್ಯಾಂಕ್‌ನಲ್ಲಿಇಟ್ಟು ಚೆಕ್ ಪುಸ್ತಕವನ್ನು ಕೊಟ್ಟ. ಸಾಧ್ಯವಾದ ಮಟ್ಟಿಗೆ ನಾನು ಅದರಲ್ಲಿ ಒಂದು ಕಾಸನ್ನೂ ತೆಗೆದುಕೊಳ್ಳುವುದಿಲ್ಲವೆಂದಿದ್ದೆ. ಆದರೂ ಸಹ ಆ ಹಣವಿದೆ. ನಮಗೆ ಈಗಲೇ ಹಣದ ಕಷ್ಟವಿಲ್ಲ " ಎಂದು ಹೇಳಿದ.

ವೆಂಕಟರಾಯನು ಊರಿನಲ್ಲಿಲ್ಲದ ಆ ಕೆಲವು ದಿನಗಳು ವಿಮಲೆಯು ಅಲ್ಲಿಯೇ ಇದ್ದಳು. ಆಗ ಶಂಕರನಿಗೆ ಕೆಲಸವಿಲ್ಲ. ಅವನು ಬಲು ಹೊತ್ತು ಮನೆಯಲ್ಲಿಯೇ ಇರುತ್ತಿದ್ದನು. ಬೆಳಗಾಗಿನಿಂದ ರಾತ್ರಿಯವರೆವಿಗೆ ಮಾಮೂಲಾಗಿಯೇ ಕಳೆಯುತ್ತಿದ್ದವು. ರಾತ್ರಿ ಶಂಕರ, ವಿಮಲೆ ಮತ್ತು ವರದೆಯರು ಮಾತನಾಡುತ್ತಾ ಕುಳಿತರೆಂದರೆ ಅವರೆಷ್ಟು ಹೊತ್ತಿಗೆ ಮಾತು ಮುಗಿಸುತ್ತಿದ್ದರೋ ಎಷ್ಟು ಹೊತ್ತಿಗೆ ಮಲಗುತ್ತಿದ್ದರೋ ಅವರಿಗೇ ತಿಳಿಯುತ್ತಿರಲಿಲ್ಲ.

ಮುಂದಿನ ದಿನಗಳು ವಿಮಲೆಗೆ ಬಹಳ ಸಂತೃಪ್ತಿಕರವಾಗಿದ್ದುವು. ವೆಂಕಟರಾಯನು ಇಷ್ಟು ಒಳ್ಳೆಯವನೆಂದು ತಿಳಿದಿದ್ದರೆ ಅವಳು ವರ್ಷದ

ಹಿಂದೆ ಅವರು ಪರಸ್ಪರ ಪ್ರೇಮ ಮಾಡಿದಾಗಲೇ ಮದುವೆಗೆ ಒಪ್ಪಿಕೊಳ್ಳುತ್ತಿದ್ದ ಳೆಂದು ತೋರುತ್ತಿತ್ತು. ಕೆಂಗೇರಿಯ ಮನೆಯೂ ವಿಮಲೆಯ ಮನೆಯೂ ಪರಸ್ಪರ ದೂರವೆಂಬುದೊಂದನ್ನು ಬಿಟ್ಟರೆ ಹೆಚ್ಚು ಕಡಿಮೆಯಾಗಿ ಒಂದೇ ಮನೆಯ ಎರಡು ಭಾಗಗಳಂತೆ ಇದ್ದವು. ವಿಮಲೆಯು ತೋರಿದಾಗ ಬಸ್ ನಲ್ಲಿಯೋ ಕಾರಿನಲ್ಲಿಯೋ ಕೆಂಗೇರಿಯ ಮನೆಗೆ ಹೊರಟು ಹೋಗುತ್ತಿದ್ದಳು. ಅವರೂ ಅಷ್ಟೆ. ಇಷ್ಟ ಬಂದಾಗ ಇತ್ತ ಕಡೆ ಬಂದು ಇರುತ್ತಿದ್ದರು. ಏನಾದರೂ ಹಬ್ಬ ಹರಿದಿನಗಳು ಬಂದರೆ ಎರಡು ಮನೆಯವರೂ ಇಲ್ಲಿಯೋ, ಅಲ್ಲಿಯೋ ಸೇರಿ ಅಡಿಗೆ ಮಾಡಿ ಊಟ ಮಾಡುತ್ತಿದ್ದರು ವಿಮಲೆಗೆ ಈ ಹೊಸ ಸಂಸಾರವು ಎಲ್ಲಿಯೋ ಒಂದೆರಡು ದಿನ ಖುಷಿಯಾಗಿ ಹೋಗಿ ಇದ್ದ ಹಾಗಿದ್ದಿತೇ ವಿನಾ ತಾನು ಗಂಡನೊಡನೆ ಬೇರೆಯಾಗಿ ಬದುಕುತ್ತಿರುವಂತೆ ಭಾಸವಾಗಲೇ ಇಲ್ಲ.

ವೆಂಕಟರಾಯನು ಹೆಂಡತಿಗೆ ಪ್ರಿಯವಾಗಲೆಂದು ಅವಳ ಬಲಾತ್ಕಾರಕ್ಕೆ ಇವೆಲ್ಲವನ್ನೂ ಮಾಡುವಂತೆ ಇರಲಿಲ್ಲ. ಅವನಿಗೇ ಬೇಕಾಗಿ ಮಾಡುವಂತೆ ಇದ್ದಿತು.

ಈ ನಡುವೆ ಮೈಸೂರು ನಗರದಲ್ಲಿ ಲೇಡೀಸ್ ಕ್ಲಬ್ ಆರಂಭವಾಯಿತು. ವೆಂಕಟರಾಯನು ಅದಕ್ಕೆ ಸ್ವಲ್ಪ ಹೆಚ್ಚಾಗಿಯೇ ಚಂದಾ ಕೊಟ್ಟಿದ್ದನು. ಅವರು ಕ್ಲಬ್‌ಗೆ ವಿಮಲೆಯನ್ನು ಕಾರ್ಯದರ್ಶಿನಿಯನ್ನಾಗಿ ಮಾಡಿದರು.

ತನ್ನ ಮನೆ ಸಂಸಾರ, ಕೆಂಗೇರಿಗೆ ಹೋಗಿ ಬರುವುದು, ಲೇಡೀಸ್ ಕ್ಲಬ್ಬಿನ ಕಾರ್ಯದರ್ಶಿತ್ವ ಈ ಗಲಾಟೆಗಳಲ್ಲಿ ವಿಮಲೆಗೆ ಸ್ವಲ್ಪವೂ ಬಿಡುವು ಇರುತ್ತಿರಲಿಲ್ಲ.

ಒಂದು ಭಾನುವಾರ ಮಧ್ಯಾಹ್ನ ಊಟ ಮಾಡಿ ವೆಂಕಟರಾಯನು ಮಲಗಿಕೊಂಡಿದ್ದನು. ವಿಮಲೆಯು ಅದೇ ಕೋಣೆಯಲ್ಲಿ ಚಾಪೆಯ ಮೇಲೆ ಕುಳಿತುಕೊಂಡು ಟೀ ಪಾಯಿಗಳ ಮೇಲಿನ ಪುಟ್ಟ ಚೌಕಗಳಿಗೆ ಹೂ ಹಾಕುತ್ತಿದ್ದಳು.

ಆ ಸಮಯದಲ್ಲಿ ಏನೋ ತೋರಿ ಮೆಲುದನಿಯಲ್ಲಿ "ತೊಟ್ಟಿಲೊಳ್ಳಲಿವ

ನೆವವಿಲ್ಲದೆ ನಗುವ ಬಾಯ್ಗೆ ಬೆಟ್ಟಕ್ಕಿ ಪೀರ್ವ ಪಸಿದೊಡೆ ಚೀರ್ವ ಮೊಲೆ ಯುಂಬ"–ಎಂದು ಹಾಡತೊಡಗಿದಳು.

ವೆಂಕಟರಾಯನಿಗೆ ನಿದ್ದೆಯು ಬಂದಿರಲಿಲ್ಲ. ಅವನು ಕಣ್ಣು ಬಿಟ್ಟು ಕೊಂಡು ಹೆಂಡತಿಯ ಕಡೆಗೆ ನೋಡಿ " ಅದೇನು ಚಿನ್ನ. ಏನೋ ವಿಚಿತ್ರ ವಾದ ಹಾಡಿರುವಂತಿದೆ. ಪೂರಾ ಹೇಳು ಕೇಳೋಣ " ಎಂದು ಕೇಳಿದನು.

ಅವಳು—

" ತೊಟ್ಟಿಲೊಳ್ನಲಿವ ನೆವವಿಲ್ಲದೆ ನಗುವ ಬಾಯ್ಗೆ
ಬೆಟ್ಟಕ್ಕಿ ಪೀರ್ವ ಪಸಿದೊಡೆ ಚೀರ್ವ ಮೊಲೆಯುಂಬ
ಪಟ್ಟಿರಿಸೆ ಪೊರಳ್ವಂಬೆಗಾಲಿಡುವ ಮೊಳೆವಲ್ಲ ಜೊಲ್ಲೊಗೆ
ತೊದಳಿಸಿ ನುಡಿವ।
ದಟ್ಟಡಿಯಿಡುವ ನಿಲ್ವ ತೊಳ್ವರ್ವ ಬೇಡುವ ಪರಿವ
ಬಟ್ಟೆಯೊಳಿರಗುವ ಕಾಡುವ ಕುಣಿವ ಲೀಲೆಯಂ
ನೆಟ್ಟನೆ ಕುಮಾರಕತೋರ್ವಿದರ್ಜಾನಕಿಗೆ
ವಾಲ್ಮೀಕಿ ಮುನಿವರಂಗೆ "

—ಎಂದು ಹಾಡಿದಳು.

ವೆಂಕಟರಾಯನಿಗೆ ಪದ್ಯ ಸಾಹಿತ್ಯಗಳು ತಿಳಿಯದು. ಅವುಗಳು ಅವನಿಗೆ ರುಚಿಸುತ್ತಲೂ ಇರಲಿಲ್ಲ. ಗದ್ಯವನ್ನು ಸಹ ಓದಿ ಅವನಿಗೆ ಅಭ್ಯಾಸವಿಲ್ಲ. ಹೆಂಡತಿಯು ಹೇಳಿದ ಪದ್ಯವು ಅವನಿಗೆ ಅರ್ಥವಾಗಲಿಲ್ಲ.

ಅವನು " ಅಂದರೆ—" ಎಂದನು.

" ಅಂದರೆ ವಾಲ್ಮೀಕಿ ಆಶ್ರಮದಲ್ಲಿ ಲವಕುಶರು ಜನಿಸಿದರು. ಮಕ್ಕಳಾಗಿದ್ದ ಅವರು ತೊಟ್ಟಿಲಲ್ಲಿ ನಲಿಯುತ್ತಿದ್ದರು. ಹಸಿವಾದಾಗ ಚೀರಿ——"

ಈಗ ಅವನಿಗೆ ಅರ್ಥವಾಯಿತು. ಅವನು ಹೆಂಡತಿಯ ಕಡೆಗೆ ನೆಟ್ಟ ನೋಟದಿಂದ ನೋಡುತ್ತಾ " ನಮ್ಮ ಮನೆಯಲ್ಲಿ ಮುಂದಾಗುವುವನ್ನು ಸೂಚನೆ ಕೊಡುತ್ತಿರುವಂತಿದೆ, ವಿಮ್ಮು " ಎಂದು ಹೇಳಿದನು.

ವಿಮಲೆಯು ನಾಚಿಕೆಯಿಂದ ತಲೆ ತಗ್ಗಿಸಿಕೊಂಡಳು.

" ಯಾಕೆ ಮಾತನಾಡುವುದಿಲ್ಲ, ವಿಮಲಾ "

" ಸುಮ್ಮನಿರಿ, ಬರುಬರುತ್ತಾ ಹುಡುಗರಾಗುತ್ತಿದ್ದೀರಿ "

" ಇಲ್ಲಿ ಬಾ, ಒಂದು ಮಾತು "

" ತಡೆಯಿರಿ, ಕಾಫಿ ತೆಗೆದುಕೊಂಡು ಬರುತ್ತೇನೆ " ಎಂದು ಹೇಳಿ ಎದ್ದು ಹೊರಗೋಡಿ ಹೋದಳು.

ವಿಮಲೆಯು ಸ್ವಲ್ಪ ಹೊತ್ತಿನಲ್ಲಿ ಕಾಫಿಯನ್ನು ತೆಗೆದುಕೊಂಡು ಪುನಃ ಒಳಗೆ ಹೋದಳು. ಅವಳು ಹೋದ ಕೂಡಲೇ ಅವನು ಮೊದಲು ಆರಂಭಿಸಿದ್ದ ಮಾತನ್ನು ಮುಂದುವರಿಸಲಿಲ್ಲ. ಅನ್ಯಾಸಕ್ತನಾಗಿದ್ದಾನೆಂದು ಸಂಕೋಚವಿಲ್ಲದೇ ಕುಳಿತುಕೊಂಡಳು.

ಇಬ್ಬರೂ ಕಾಫಿಯನ್ನು ಕುಡಿದ ನಂತರ ವೆಂಕಟರಾಯನು ವಿಮಲೆಯ ಕೈ ಹಿಡಿದುಕೊಂಡು " ಈಗ ಕೈಗೆ ಸಿಕ್ಕಿದೆಯಲ್ಲ. ಹೇಳು " ಎಂದು ನಗುತ್ತಾ ಕೇಳಿದನು.

ಅವಳು ಮಾತನಾಡಲಿಲ್ಲ.

" ನನಗೆ ಮೊದಲೇ ಹೇಳಬೇಡವೇ, ವಿಮ್ಮು. ಲೇಡೀ ಡಾಕ್ಟರಿಗೆ ತೋರಿಸುತ್ತಾ ಇರಬೇಕು. ನೀನು ಈಗಿನಂತೆ ಓಡಾಡಬಾರದು. ಸ್ವಲ್ಪ ಹುಷಾರಾಗಿರಬೇಕು "

" ಇಲ್ಲ, ಅದೇನೂ ಹತ್ತಿರದಲ್ಲಿಲ್ಲ "

ಗಂಡನು ಹೆಂಡತಿಯ ಮಾತಿನಿಂದಲೇ ತೃಪ್ತನಾಗಲಿಲ್ಲ. ಮಾರನೆಯ ದಿನ ಪ್ರಾತಃಕಾಲವೇ ಲೇಡೀ ಡಾಕ್ಟರಿಗೆ ವಿಮಲೆಯನ್ನು ಕರೆದುಕೊಂಡು ಹೋಗಿ ತೋರಿಸಿದನು. ಅವರು ವಿಮಲೆಯು ಆರೋಗ್ಯವಾಗಿದ್ದಾಳೆಂದೂ ಪ್ರಸವವಾಗಲು ಇನ್ನೂ ಕೆಲವು ವಾರಗಳಾಗಬಹುದೆಂದೂ ಅವಳು ವಿಶ್ರಾಂತಿಯನ್ನು ಪಡೆಯಬೇಕೆಂದೂ ಹೇಳಿದರು. ಕಡೆಯ ದಿನಗಳಲ್ಲಿ ಒಬ್ಬ ನರ್ಸನ್ನು ಕಳಿಸುವುದಾಗಿಯೂ ಪ್ರಸವ ಕಾಲದಲ್ಲಿ ವಿಮಲೆಯನ್ನು ತಮ್ಮ ನರ್ಸಿಂಗ್ ಹೋಂನಲ್ಲಿಯೇ ಇಟ್ಟುಕೊಂಡು ನೋಡಿಕೊಳ್ಳುವುದಾಗಿಯೂ ತಿಳಿಸಿದರು. ವಿಮಲೆಯ ಬಗ್ಗೆ ಯಾವ ವಿಧವಾದ ಕಳವಳವನ್ನೂ ಇಟ್ಟುಕೊಳ್ಳಬೇಕಾಗಿಲ್ಲವೆಂದು ಭರವಸೆ ಮಾಡಿದರು.

ಎರಡು ವಾರಗಳಲ್ಲಿ ವಿಮಲೆಯ ದೇಹಸ್ಥಿತಿಯು ಸೂಕ್ಷ್ಮವಾಯಿತು.

ಅವಳ ಮನಸ್ಸಿನಲ್ಲಿ ವಿಚಿತ್ರವಾದ ಭಾವನೆಗಳು ಬರುತ್ತಿದ್ದವು. ಅವಳು ಹೆಂಗಸರು ಮಾತ್ರ ಅನುಭವ ಮಾಡಲು ಸಾಧ್ಯವಾದಂತಹ ಅರ್ಧ ಎಚ್ಚರ ಅರ್ಧ ಸುಪ್ತವಾದ ಸ್ಥಿತಿಯಲ್ಲಿ ದಿನದ ಬಹಳ ಹೊತ್ತನ್ನು ಕಳೆಯುತ್ತಿದ್ದಳು. ಮಗುವಿಗಾಗಿ ಅವಳೂ ಅವಳ ತಂಗಿಯರೂ ಸಿದ್ಧಪಡಿಸಿದ್ದ ಬಟ್ಟೆಬರೆಗಳನ್ನು ನೋಡಿ ಅವಳಿಗೆ ಅಸದೃಶವಾದ ಆನಂದ ಉಂಟಾಗುತ್ತಿದ್ದಿತು.

ಮನೆಯಲ್ಲಿ ವಿಮಲೆಯು ಹೆಚ್ಚು ಓಡಿಯಾಡಲು ವೆಂಕಟರಾಯನು ಬಿಡಲಿಲ್ಲ. ಅವಳು ಲೇಡೀಸ್ ಕ್ಲಬ್‌ಗೆ ಹೋಗುವುದಂತೂ ನಿಂತೇ ಹೋಯಿತು. ಆದರೆ ಕೆಂಗೇರಿಯ ಪ್ರವಾಸವು ನಿಲ್ಲಲಿಲ್ಲ. ಹೆಂಡತಿಗೆ ಬಹಳ ಅಸಮಾಧಾನವಾಗುವುದೆಂದು ಗಂಡನು ಅದಕ್ಕೆ ಪ್ರತಿಬಂಧಕವನ್ನು ಏರ್ಪಡಿಸುತ್ತಿರಲಿಲ್ಲ. ಅಲ್ಲಿಗೆ ಹೋದಾಗ ವಿಮಲೆಯೂ ವರದೆಯೂ ಯಾವಾಗಲೂ ಕುಳಿತು ಮಾತನಾಡುತ್ತಿದ್ದರು. ವಿಮಲೆಯು ಅಡಿಗೆ ಮುಂತಾದ ಏರ್ಪಾಟುಗಳ ಬಗ್ಗೆ ತಂಗಿಯರಿಗೆ ಮೊದಲಿನಂತೆಯೇ ತಾಕೀತು ಕೊಡುತ್ತಿದ್ದಳು. ವಾಸುವನ್ನು ಸಾಧ್ಯವಾದ ಮಟ್ಟಿಗೆ ಹತೋಟಿ ಮಾಡುತ್ತಿದ್ದಳು.

ವಿಮಲೆಗೆ ಮದುವೆಯಾದ ವಿಷಯವನ್ನು ಕೇಳಿ ವರದೆಗೆ ಬಹಳ ಬೇಸರವಾಗಿದ್ದಿತು. ಆದರೆ ಅವಳಿಗೆ ಮಗುವಾಗುತ್ತದೆಂಬ ವಿಷಯವು ಅವಳಿಗೆ ಅತ್ಯಂತ ಪ್ರಿಯವಾಗಿದ್ದಿತು. ಅವಳಾಡುತ್ತಿದ್ದ ಪ್ರತಿ ಮಾತಿನಲ್ಲಿಯೂ ಚಿಕ್ಕಮ್ಮನ ಹೆಮ್ಮೆಯು ಹೊರಸೂಸುತ್ತಿತ್ತು. ವಿಮಲೆಯು ದಿನವೂ ಒಂದು ಒಂದೂವರೆ ಮೈಲಿಯಷ್ಟು ಓಡಿಯಾಡಬೇಕೆಂದು ಲೇಡೀ ಡಾಕ್ಟರು ಹೇಳಿದ್ದರು. ತಂಪು ಹೊತ್ತಾದ ಮೇಲೆ ಅಕ್ಕತಂಗಿಯರಿಬ್ಬರೂ ಮೈಸೂರು ರಸ್ತೆಯಲ್ಲಿ ವಾಕಿಂಗ್ ಹೋಗುತ್ತಿದ್ದರು. ಹೆಂಡತಿಯನ್ನು ಕರೆದುಕೊಂಡು ಹೋಗಲು ಐದೂವರೆ ಆರು ಗಂಟೆಯ ಹೊತ್ತಿಗೆ ವೆಂಕಟರಾಯನು ಬರುತ್ತಿದ್ದನು. ಸಂಜೆ ಅಲ್ಲಿಯೇ ಕಾಫೀ ತಿಂಡಿ ಮುಗಿಸಿ ಕಾದಿದ್ದು ವಾಕಿಂಗ್ ಹೋಗಿ ಬಂದ ಹೆಂಡತಿಯನ್ನು ಮನೆಗೆ ಕರೆದುಕೊಂಡು ಹೋಗುತ್ತಿದ್ದನು.

ಕಡೆಯ ದಿನಗಳಲ್ಲಿ ಲೇಡೀ ಡಾಕ್ಟರು ನರ್ಸನ್ನು ಕಳುಹಿಸಿದರು. ಹೆಚ್ಚು ಕಡಿಮೆ ಅವಳು ಯಾವಾಗಲೂ ವಿಮಲೆಯ ಜೊತೆಯಲ್ಲಿದ್ದು ನೋಡಿ

ಕೊಳ್ಳುತ್ತಿದ್ದಳು. ನರ್ಸ್ ಬಂದು ಇರಲಾರಂಭಿಸಿದ ನಂತರ ವಿಮಲೆಯು ಕೆಂಗೇರಿಯ ಮನೆಗೆ ಹೋಗಿ ಬರುವುದು ನಿಂತುಹೋಯಿತು. ತಂಗಿಯರೂ, ಅಣ್ಣತಮ್ಮಂದಿರೂ ಎರಡು ಬಾರಿ ಬಂದು ವಿಮಲೆಯನ್ನು ನೋಡಿಕೊಂಡು ಹೋದರು. ದಿನಗಳು ಕಳೆದಂತೆ ಅವಳಿಗೆ ತಾಯ್ತನದ ಭಾವನೆಗಳು ಮೇಲಿಂದ ಮೇಲೆ ಬರತೊಡಗಿದವು. ಒಂದೊಂದು ಬಾರಿ ಇದು ತನ್ನ ಮತ್ತು ವೆಂಕಟರಾಯನ ಸಂಬಂಧದಲ್ಲಿ ಹೂ-ಬಿಟ್ಟಂತೆ ಎಂದು ಕಂಡು ಬರುತ್ತದೆ. ಮತ್ತೆ ಕೆಲವು ವೇಳೆಗಳಲ್ಲಿ ಇದು ತನ್ನ ಮತ್ತು ಅವನ ಸಂಬಂಧವನ್ನು ಸುತ್ತುಗಟ್ಟಿ ಬಲಗೊಳಿಸುವ ಬಳ್ಳಿ-ಎಂದೆನಿಸುತ್ತಿತ್ತು. ವೆಂಕಟರಾಯನೂ ಹೆಂಡತಿಯ ವಿಷಯದಲ್ಲಿಯೂ ಮುಂದಿನ ಅಂಕುರದ ವಿಷಯದಲ್ಲಿಯೂ ಅತ್ಯಾಸಕ್ತಿಯನ್ನು ವಹಿಸಿದ್ದನು. ತನ್ನ ಹೆಂಡತಿಗೆ ಆವಶ್ಯಕವಾದ ಪ್ರತಿಯೊಂದು ವಿಷಯದಲ್ಲಿಯೂ ಅತ್ಯಾಸಕ್ತಿಯನ್ನು ತೋರಿಸುತ್ತಿದ್ದನು. ತನ್ನ ಅಗಾಧವಾದ ಕೆಲಸಕಾರ್ಯಗಳ ನಡುವೆ ಸಂಜೆಯ ಹೊತ್ತು ಸ್ವಲ್ಪ ದೂರ ಕರೆದುಕೊಂಡು ಹೋಗಿ ಅವಳನ್ನು ನಡೆಯಿಸಿಕೊಂಡು ಬರುತ್ತಿದ್ದನು.

ಆದರೆ ಎಲ್ಲ ಪರಿಸ್ಥಿತಿಗಳೂ ವಿಮಲೆಗೆ ಸಂತೃಪ್ತಿಕರವಾಗಿಯೇ ಇರಲಿಲ್ಲ. ಷೇರು ಮಾರ್ಕೆಟ್ಟಿನಲ್ಲಿ ಧಾರಣೆಯು ಒಂದೇ ಸಮನಾಗಿ ಇಳಿಯುತ್ತಿದ್ದಿತು. ಅಥವಾ ನಾಲ್ಕು ದಿನ ಯಥಾಸ್ಥಿತಿಯಾಗಿರುತ್ತಿದ್ದಿತು. ಎಲ್ಲಿ ನೋಡಿದರೂ ಷೇರುಗಳನ್ನು ಮಾರುವವರೇ ಕಂಡು ಬರುತ್ತಿದ್ದರು. ಕೊಳ್ಳುವವರು ಹುಡುಕಿದರೂ ಸಿಗುವುದು ಕಷ್ಟವಾಗಿದ್ದಿತು. ಖರ್ಚಾಗುತ್ತಿರಲಿಲ್ಲ. ವೆಂಕಟರಾಯನು ಷೇರು ಮಾರಾಟದಲ್ಲಿ ಸಂಪಾದನೆ ಮಾಡುವುದು ಹಾಗಿರಲಿ, ಬ್ಯಾಂಕಿನಲ್ಲಿಟ್ಟಿರುವ ಷೇರುಗಳಿಗಾಗಿಯೇ ಹಣವನ್ನು ಕೊಡಬೇಕಾಗಿದ್ದಿತು. ಅವನು ದಿನವೂ ಮನೆಗೆ ಬರುವ ವೇಳೆಗೆ ದಣಿದು ನಿರುತ್ಸಾಹಿತನಾಗಿರುತ್ತಿದ್ದನು. ವಿಮಲೆಯು ಅವನನ್ನು ಸಂತೋಷ ಪಡಿಸಲು ಎಷ್ಟೋ ಪ್ರಯತ್ನ ಪಡುತ್ತಿದ್ದಳು. ಆದರೆ ಹಾಗೆ ಅವನಿಗೆ ಸಂತೋಷವಾಗುವುದು ಸಾಧ್ಯವಿರಲಿಲ್ಲ.

ಗಂಡನು ಬಹಳವಾಗಿ ಕಳೆಗುಂದಿದ್ದಾಗ ವಿಮಲೆಯು “ ಎಲ್ಲಾ ಸರಿ

ಹೋಗುತ್ತದೆ. ಯಾಕೆ ಮನಸ್ಸಿಗೆ ಹಚ್ಚಿಕೊಂಡು ಕೊರಗುತ್ತೀರಿ ?" ಎಂದು ಎಲ್ಲವನ್ನೂ ತಿಳಿದವಳಂತೆ ಮಾತನಾಡುತ್ತಿದ್ದಳು.

ಒಂದು ದಿನ ನಟರಾಜನಿಂದ ದೊಡ್ಡ ಕಾಗದವು ಬಂದಿತು. ಷಿಲಾಂಗ್‌ನಿಂದ ಅದನ್ನು ಬರೆದಿದ್ದನು. ಸ್ವಚ್ಛವಾದ ಬಿಳಿಯ ಕಾಗದದಲ್ಲಿ ಸುಂದರವಾದ ಕನ್ನಡ ಅಕ್ಷರಗಳಲ್ಲಿ ಆ ಕಾಗದವು ಬರೆಯಲ್ಪಟ್ಟಿತ್ತು. ಕವರನ್ನು ನೋಡಿದೊಡನೆಯೇ ವಿಮಲೆಗೆ ಅದು ನಟರಾಜನ ಕಾಗದವೆಂದು ಗೊತ್ತಾಯಿತು. ಕವರು ಒಡೆಯುವ ಮೊದಲು ಏನೋ ಸಣ್ಣ ಕಾಗದವೆಂದುಕೊಂಡಳು. ಅನಂತರ ನೋಡಿದರೆ ಹನುಮಂತನ ಬಾಲದಂತಿತ್ತು. ಆರು ಹಾಳೆಗಳಲ್ಲಿ ಎರಡು ಕಡೆಯೂ ಸಣ್ಣದಾಗಿ ಬರೆದಿದ್ದನು. ಖಟಮಂಡುವಿನಿಂದ ಮುಂದೆ ಹೋದವರು ಎಷ್ಟೋ ಕಷ್ಟಪಟ್ಟರಂತೆ. "ಅಲ್ಲಿನ ಜನಗಳು ವಿಚಿತ್ರರಾದವರು. ಅವರಿಗೆ ಅಗಲವಾದ ಹಳದೀ ಬಣ್ಣದ ಸಪ್ಪೆ ಮೊಗಗಳು. ಅವರು ಕುಳ್ಳರು. ಅವರ ಮಾತು, ಅವರ ನಡೆನುಡಿಗಳು ನಮಗಿಂತ ಭಿನ್ನವಾದವು. ಅವರು ತಿನ್ನುವ ಆಹಾರವು ನಮಗೆ ರುಚಿಯಾಗುವುದಿಲ್ಲ, ಆದರೂ ಅದು ಪ್ರಿಯವಾಗಿರುತ್ತದೆ. ಇಲ್ಲಿ ಅತ್ಯಂತ ಸ್ವಾರಸ್ಯವಾದ ವಿಷಯ ಗೊತ್ತಾಯಿತು, ವಿಮಲಾ. ಪರ್ವತಾರೋಹಿಗಳಾದ ನಮಗೆ ಗೌರವ ಕೊಡಲು ನಮ್ಮನ್ನು ರಾಜಾಸ್ಥಾನಕ್ಕೆ ಕರೆದುಕೊಂಡು ಹೋದರು. ರಾಜನು ನಮ್ಮನ್ನು ಸನ್ಮಾನಿಸಿದನು. ಅದು ಸರಿ. ಆದರೆ ರಾಜನು ರಾಜಾಸ್ಥಾನಕ್ಕೆ ಬಂದಾಗ ವಂದಿಮಾಗಧರು ಪರಾಕು ಹೇಳಿದರು. ಅದನ್ನು ಕೇಳಿದ ನನಗೆ ಆ ಪರಾಕು ನಮ್ಮ ತರಹವಾಗಿರುವುದನ್ನು ನೋಡಿ ಆಶ್ಚರ್ಯವಾಯಿತು. ರಾಜಸಭೆಯಾದ ನಂತರ ಆ ಪರಾಕನ್ನು ಹೇಳಿಸಿ ಬರೆದುಕೊಂಡೆ. ಅದನ್ನು ಎಷ್ಟೋ ದಿನಗಳು ಪುನಃ ಪುನಃ ಓದಿದ ನಂತರ ಅದು ಕನ್ನಡದಂತೆ ಕಂಡು ಬಂದಿತು. ವಾಸ್ತವವಾಗಿ ಆ ಸ್ತುತಿ ಗೀತವು ಶತಮಾನಗಳ ಹಿಂದಿನ ನಮ್ಮ ಕನ್ನಡ. ಈಗದು ನೇಪಾಳೀ ಮಾತಿನಿಂದ ಕೂಡಿ ಅಪಭ್ರಂಶವಾಗಿದೆ. ನಾನಿನ್ನೂ ಇದೆಲ್ಲವನ್ನೂ ಪರಿಷ್ಕರಿಸಿ ನೋಡಿಲ್ಲ. ಒಂದು ಕಾಲದಲ್ಲಿ ಕನ್ನಡಿಗರು ಉತ್ತರ ಭಾರತದಲ್ಲಿಯೂ ತಮ್ಮ ರಾಜ್ಯವನ್ನು ವಿಸ್ತರಿಸಿದರು. ಹಿಮಾಲಯದ ತಪ್ಪಲಿನಲ್ಲಿರುವ ನೇಪಾಳವು ಸಹ ಕನ್ನಡಿಗರ ಅಧೀನದಲ್ಲಿದ್ದಿರಬೇಕು. ಕನ್ನಡ ರಾಜ್ಯ ರಮಾರಮಣನನ್ನು ಆಗಿನ ಕಾಲ

ದಲ್ಲಿ ಹೊಗಳುತ್ತಿದ್ದ ಸ್ತುತಿ ಗೀತವನ್ನೇ ಅನಂತರ ನೇಪಾಳದರಸನನ್ನು ಹೊಗಳಲು ಉಪಯೋಗಿಸಿರಬೇಕು. ಇದು ಮನಸ್ಸಿಗೆ ಬಂದೊಡನೆಯೇ ಕನ್ನಡಿಗರಾದ ನಮ್ಮ ಗತವೈಭವವು ಎಷ್ಟೆಂದು ನನಗೆ ಅಚ್ಚರಿಯಾಯಿತು.

"ವಿಮಲಾ. ಪರ್ವತಾರೋಹಣದ ವಿಷಯವನ್ನು ನಿನಗೆ ಬರೆಯುತ್ತಿದ್ದೆ. ಖಟಮಂಡುವಿನಿಂದ ಕೆಲವು ದಿನಗಳು ಪ್ರಯಾಣ ಮಾಡಿದ ನಂತರ ನಾವು ಮಣ್ಣನ್ನು ಕಾಣುವುದೇ ಅಸಂಭವವಾಯಿತು. ಎಲ್ಲಿ ನೋಡಿದರೂ ಮಂಜಿನ ಗಡ್ಡೆಗಳು. ಅವುಗಳ ಮೇಲೆಯೇ ಡೇರಾಗಳನ್ನು ಹೊಡೆದು ವಾಸ ಮಾಡುತ್ತಿದ್ದೆವು. ಮಂಜಿನ ಗಡ್ಡೆಗಳ ಮೇಲೆಯೇ ಓಡಿಯಾಡುತ್ತಿದ್ದೆವು. ಕುಳಿತುಕೊಳ್ಳುತ್ತಿದ್ದೆವು. ಮಲಗಿಕೊಳ್ಳುತ್ತಿದ್ದೆವು.

"ಆ ವಿಷಯವನ್ನೆಲ್ಲಾ ಬರೆಯಲು ಕಾಗದದಲ್ಲಿ ಸಾಧ್ಯವಿಲ್ಲ. ಒಂದು ಪುಸ್ತಕವನ್ನೇ ಬರೆಯುತ್ತಿದ್ದೇನೆ. ಮುದ್ರಣವಾದ ಕೂಡಲೇ ಕಳಿಸುತ್ತೇನೆ. ಒಟ್ಟಿನಲ್ಲಿ ಹೇಳುವುದಾದರೆನಮ್ಮ ಪರ್ವತಾರೋಹಣವು ಯಶಸ್ವಿಯಾಯಿತು.

"ನಮ್ಮ ಗುಂಪಿನಲ್ಲಿದ್ದಾತನೊಬ್ಬನು ಅಸ್ವಾಸ್ಥನವನು ಅವನು ಬಹಳ ಬಲಾತ್ಕಾರ ಮಾಡಿದ ಮೇಲೆ ಈ ಷಿಲಾಂಗ್‌ಗೆ ಬಂದಿದ್ದೇನೆ. ಇನ್ನೂ ಕೆಲವು ದಿನ ಇಲ್ಲಿಯೇ ಇರುತ್ತೇನೆ" ಎಂಬುದಾಗಿ ಬರೆದಿದ್ದನು.

ಕಾಗದದ ಕಡೆಯಲ್ಲಿ "ನಾನು ನೋಡಿದ್ದರಲ್ಲಿ ನೀನು ಧೈರ್ಯಶಾಲಿಯಾದ ಯುವತಿ. ನಿನ್ನ ಸ್ಥಿತಿಗತಿಗಳು ಹೇಗಿವೆಯೋ ಗೊತ್ತಿಲ್ಲ. ನಿನ್ನ ಸಹನೆಯು ಅತೀವವಾಗಿದೆ. ಎಂದೋ ಒಂದು ದಿನ ಒಳ್ಳೆಯ ಕಾಲವು ಬರುತ್ತದೆ. ಆಗ ನೀನು ದೇದೀಪ್ಯಮಾನವಾಗಿ ಪ್ರಕಾಶಿಸುತ್ತೀ" ಎಂದು ಬರೆದಿದ್ದನು.

ವಿಮಲೆಯು ಆ ಕಾಗದವನ್ನು ಎಷ್ಟೋ ಬಾರಿ ಓದಿದಳು. ಎಷ್ಟು ಓದಿದರೂ ಅವಳಿಗೆ ತೃಪ್ತಿಯಿಲ್ಲ. ಆ ಕಾಗದವು ಅವಳನ್ನು ಎಷ್ಟೋ ಕಾಲ ಹಿಮಾಲಯದಲ್ಲಿಯೇ ಇಟ್ಟಿರುತ್ತಿತ್ತು. ಪೂರ್ಣಿಮೆಯಲ್ಲಿ ಪೂರ್ಣಚಂದ್ರನ ಉದಯವಾಗಿರುವಾಗ, ಮಂಜಿನ ಗಡ್ಡೆಗಳ ಮೇಲೆ ಬೆಳದಿಂಗಳು ಪ್ರತಿಬಿಂಬಿಸಿರುವಾಗ, ಆ ಹಿಮಾಲಯದ ಪ್ರಾಂತವು ಎಷ್ಟು ರಮ್ಯವಾಗಿರಬಹುದು. ಆ ದೃಶ್ಯವನ್ನು ನೆನೆಸಿಕೊಂಡಾಗ ವಿಮಲೆಯ ಮೈ ಪುಳಕಿತವಾಗುತ್ತಿತ್ತು.

ವಿಮಲೆಯು ಕಾಗದದ ಕಡೆಯ ಭಾಗವನ್ನು ಅನೇಕ ಬಾರಿ ಓದಿದಳು. ನಟರಾಜನು ಅವಳನ್ನು ಮರೆತಿಲ್ಲ. ಅವಳಿಂದ ಎಷ್ಟೋ ಆಗುತ್ತದೆಂದು ನಿರೀಕ್ಷಿಸುತ್ತಾನೆ. ಆ ಕಾಗದವನ್ನು ಓದುವುದರಿಂದ ಅವಳಿಗೆ ಆನಂದವಾಗುತ್ತದೆ. ಅವಳಲ್ಲಿ ಚೇತನ ಉಂಟಾಗುತ್ತದೆ. ಕಾಗದವನ್ನು ತೆಗೆದಿಡುತ್ತಾಳೆ. ತನಗೆ ಬೇಜಾರಾದಾಗ, ನಟರಾಜನು ತನ್ನನ್ನು ಮರೆತಿದ್ದಾನೇನೋ ಎಂದು ಸಂದೇಹವು ಬಂದಾಗ ಆ ಕಾಗದವನ್ನು ತೆಗೆದು ಓದುತ್ತಾಳೆ.

ಕೆಂಗೇರಿಯ ಮನೆಯ ಪ್ರಕರಣವೂ ಅಷ್ಟು ಪ್ರಿಯವಾಗಿರಲಿಲ್ಲ. ಶೀಲೆಗೆ ಜ್ವರ ಬಂದಿತ್ತು. ವರದೆಯು ಶಿಶು ವಿಹಾರಕ್ಕೆ ಹೋಗಿ ಬರುವುದಲ್ಲದೇ ಮನೆಯ ಕೆಲಸಗಳೆಲ್ಲವನ್ನೂ ಮಾಡಬೇಕಾಗಿದ್ದಿತು. ಸಾವಿತ್ರಮ್ಮನವರು ಹುಚ್ಚು ಹುಚ್ಚಾಗಿ ಹೋಗಿದ್ದರು. ಅವರು ಆಹಾರವನ್ನೇ ತೆಗೆದುಕೊಳ್ಳುತ್ತಾ ಇರಲಿಲ್ಲ. ಅವರನ್ನು ನೋಡಿದರೆ ಸಾವಿನ ದವಡೆಯಲ್ಲಿಯೇ ಇರುವವರಂತೆ ಇದ್ದರು. ಆ ಮನೆಯಲ್ಲಿ ಒಂದೇ ಒಂದು ಆಶಾದಾಯಕವಾದ ಅಂಶವೆಂದರೆ ಶಂಕರನ ಹಳೆಯ ಸ್ನೇಹಿತ ನಾಗುವಾನೀ ವ್ಯಾಪಾರಿಯೊಬ್ಬನು ಅವನಿಗೆ ತನ್ನ ಬಳಿ ಕೆಲಸವನ್ನು ಕೊಟ್ಟಿದ್ದುದು.

ಒಂದು ಬೇಸಿಗೆಯ ಮಧ್ಯಾಹ್ನ ವೆಂಕಟರಾಯನು ದಣಿದು ಮನೆಗೆ ಬಂದಿದ್ದನು. ಊಟ ಮಾಡಿ ಬಂದು ಕುಳಿತುಕೊಂಡು ಹೆಂಡತಿಯೊಡನೆ ಕಷ್ಟಸುಖಗಳನ್ನು ಮಾತನಾಡ ತೊಡಗಿದನು.

" ನಿನಗೊಂದು ದುಃಖದ ವಿಷಯವನ್ನು ಹೇಳಬೇಕಾಗಿದೆ. ಹೇಳಬಾರದೆಂದು ಎಷ್ಟೋ ಮನಸ್ಸನ್ನು ಬಿಗಿ ಹಿಡಿಯುತ್ತೇನೆ. ಈ ಸಂದರ್ಭದಲ್ಲಿ ನಿನಗೆ ಹೇಳಬಾರದು—ಆದರೆ ವಿಧಿಯಿಲ್ಲ " ಎಂದು ಹೇಳಿದನು.

ಅವಳು ಗಾಬರಿಯಿಂದ " ಏನಾದರೂ ಕೆಂಗೇರಿಯ ವಿಷಯವೇನು ?" ಎಂದು ಕೇಳಿದಳು.

" ಅದಲ್ಲಾ, ವಿಮಲಾ. ನನ್ನ ಸ್ವಂತ ವಿಷಯ. ಈಚೆಗೆ ಷೇರು ಮಾರ್ಕೆಟ್ಟು ಕೆಟ್ಟು ಹೋಗಿದೆ "

ವಿಮಲೆಗೆ ಅರ್ಥವಾಗಲಿಲ್ಲ. ಕೆಲವು ದಿನಗಳಿಂದ ಕಷ್ಟಸುಖಗಳನ್ನು ಕೇಳಿ ವ್ಯಾಪಾರವು ಚೆನ್ನಾಗಿಲ್ಲವೆಂದುಕೊಂಡಿದ್ದಳು.

ವೆಂಕಟರಾಯನು " ಕಂಪನಿಯ ಷೇರುಗಳ ಬೆಲೆ ಎಲ್ಲವೂ ಇಳಿದು ಹೋಗುತ್ತಾ ಇದೆ. ಕೊಳ್ಳುವವರೇ ಇಲ್ಲ " ಎಂದನು.

" ಹಾಗಾದರೆ ನಮ್ಮ ತಂದೆಯದು ಬಾಂಡುಗಳಿದ್ದಿದ್ದರೆ ಅವುಗಳಿಗೂ ಬೆಲೆ ಬರುತ್ತಿರಲಿಲ್ಲವೇ ?"

" ನಿಮ್ಮ ತಂದೆಯವರ ಬಳಿ ಇತ್ತು ಎಂದು ಹೇಳುತ್ತಿದ್ದುದು ಸರ್ಕಾರದ ಸಾಲದ ಬಾಂಡುಗಳು. ಅವುಗಳ ಬೆಲೆಯು ಇಳಿಯುವುದಿಲ್ಲ "

"ನೀವು ವ್ಯಾಪಾರದಲ್ಲಿ ಕಮಿಷನ್ ಮಾತ್ರತೆಗೆದುಕೊಳ್ಳುವಾಗ ನಿಮಗೆ ಹೇಗೆ ನಷ್ಟವಾಗುತ್ತದೆ ?"

ಆ ಮಾತಿನಿಂದ ವೆಂಕಟರಾಯನಿಗೆ ಸ್ವಲ್ಪ ಕೋಪವು ಬಂದಿತು. ಆದರೂ ತಿಳಿಯದೇ ಮಾತನಾಡಿದ್ದಾಳೆಂದು ಸಮಾಧಾನವನ್ನು ತಂದುಕೊಂಡು " ಅದು ಒಂದು ಬಗೆ, ವಿಮಲಾ. ಅನೇಕರ ಷೇರುಗಳನ್ನು ಕೊಂಡುಕೊಂಡಿರುತ್ತೇವೆ. ಅವರಿಗೆ ಹಣವು ಪಾವತಿಯಾಗಿರುವುದಿಲ್ಲ. ಅವರುಗಳು ಹಣ ಕೇಳುತ್ತಿದ್ದಾರೆ. ಬ್ಯಾಂಕುಗಳಲ್ಲಿ ಷೇರುಗಳನ್ನಿಟ್ಟು ಹಣ ತೆಗೆದುಕೊಂಡಿರುತ್ತೇವೆ. ಷೇರುಗಳ ಬೆಲೆಯು ಇಳಿಯುತ್ತ ಬಂದಂತೆ ಅವರುಗಳು ಹಣ ಕಟ್ಟಬೇಕೆಂದು ಕೇಳುತ್ತಿದ್ದಾರೆ. ಕೈಯಲ್ಲಿ ಹಣವಿಲ್ಲ. ಮಾಡಬೇಕಾದ ಖರ್ಚುಗಳನ್ನು ಮಾಡಲೇಬೇಕು " ಎಂದು ಹೇಳಿದನು.

ವಿಮಲೆಯು " ನಾವು ಖರ್ಚು ಕಡಿಮೆ ಮಾಡೋಣ. ಸಣ್ಣ ಮನೆಯಲ್ಲಿ ವಾಸ ಮಾಡೋಣ. ಈ ಫರ್ನೀಚರ್‌ಗಳನ್ನೂ ಮತ್ತು ನನ್ನ ಒಡವೆಗಳನ್ನೂ ಮಾರಿಬಿಡೋಣ " ಎಂದಳು.

ವೆಂಕಟರಾಯನು ವಿಕಟವಾಗಿ ನಗುತ್ತಾ " ವಿಮ್ಮೂ, ನೀನು ಏನೂ ಅರಿಯದ ಹುಡುಗಿ. ತಿಳಿಯದೇ ಮಾತನಾಡುತ್ತಿದ್ದೀಯೆ. ನನಗೆ ಬೇಕಾದ ಹಣದಲ್ಲಿ ಈ ಫರ್ನೀಚರು ಈ ಒಡವೆಗಳು ಸಾವಿರದಲ್ಲಿ ಒಂದು ಭಾಗ. ಮರಳುಕಾಡಿನಲ್ಲಿ ಒಂದು ತೊಟ್ಟು ನೀರಿದ್ದ ಹಾಗೆ........"ಎಂದು ಹೇಳುತ್ತಾ ಟೆಲಿಫೋನ್ ಶಬ್ದವನ್ನು ಕೇಳಿ ಮಾತು ನಿಲ್ಲಿಸಿದನು.

ಟೆಲಿಫೋನಿನಲ್ಲಿ ವೆಂಕಟರಾಯನು ಉದ್ರೇಕದಿಂದ ಮಾತನಾಡಿ ಭುಜದ ಮೇಲೆ ಒಂದು ಕೋಟು ತಗುಲಿಸಿಕೊಂಡು " ನಾನು ಹೋಗಿ ಬರುತ್ತೇನೆ " ಎಂದನು.

" ಏನು ? ಸ್ವಲ್ಪ ಹೊತ್ತಾದರೂ ಮಲಗಿಕೊಳ್ಳಬಾರದೆ ? "

" ಹ್ಹ ! ಹ್ಹ! ಮಲಗಿಕೊಳ್ಳುವುದು. ಮಲಗಿಕೊಂಡಂತೆಯೇ ಇಬ್ಬರು ಬ್ಯಾಂಕು ಮ್ಯಾನೇಜರುಗಳು ಬಂದು ಆಫೀಸಿನಲ್ಲಿ ಮುರಾಡ ಹಾಕಿಕೊಂಡು ಕುಳಿತಿದ್ದಾರೆ-ಮಲಗಿಕೊಂಡಂತೆಯೇ........"ಎಂದು ಅರ್ಥವಿಲ್ಲದ ಮಾತುಗಳನ್ನಾಡುತ್ತಾ ಹೊರಟು ಹೋದನು.

ಗಂಡನು ಹೊರಗೆ ಹೋದ ನಂತರ ನಿಶ್ಶಬ್ದವಾದ ಆ ಮನೆಯಲ್ಲಿ ಗಟ್ಟಿಯಾಗಿ " ವಿಮಲಾ ! ನಾನು ನೋಡಿದ್ದರಲ್ಲಿ ನೀನು ಧೈರ್ಯಶಾಲಿ. ನಿನ್ನ........ನಿನ್ನ ಸಹನೆ ಅತೀವ........ಅತೀವ " ಎಂದು ಹೇಳಿದಳು.

## ೨೧

ಮೇ ತಿಂಗಳು. ಬೇಸಿಗೆಯ ದಿನಗಳು ಕಳೆದು ಹೋಗಿ ಚಳಿಯ ದಿನಗಳು ಬರುವ ಮಧ್ಯ ಕಾಲ. ಆ ದಿನ ಬೆಳಗಿನಿಂದಲೂ ಮಳೆಯು ಬರುವ ಸೂಚನೆಗಳು ಕಂಡು ಬರುತ್ತಿದ್ದವು. ಗಾಳಿಯು ಸ್ವಲ್ಪ ಹುಚ್ಚು ಹುಚ್ಚಾಗಿ ಬೀಸುತ್ತಿದ್ದಿತು.

ಕೆಂಗೇರಿಯ ಮನೆಯಲ್ಲಿ ಮೂರು ಮಂದಿ ಹೆಂಗಸರು ಕುಳಿತು ಮಾತನಾಡುತ್ತಿದ್ದರು. ಎರಡು ವರ್ಷಗಳ ಸಣ್ಣ ಮಗುವೊಂದು ಅವರ ನಡುವೆ ಆಡ್ತಾಡುತ್ತಿದ್ದಿತು. ಒಂದೆರಡು ರಬ್ಬರಿನ ಗೊಂಬೆಗಳೂ ಕಾಗದದ ಗಿರುಗಟ್ಟೆ, ಜೋಳದ ಕಡ್ಡಿಯಲ್ಲಿ ಮಾಡಿದ ಪೀಪಿಗಳು ಅಲ್ಲಿ ಬಿದ್ದಿದ್ದವು. ಆಟವಾಡುತ್ತಾ ಮಗುವು ಅಲ್ಲಿದ್ದವರಲ್ಲಿ ಅತಿವೃದ್ಧೆಯಾದ ಹೆಂಗಸಿನ ತೊಡೆಯ ಮೇಲೆ ಬೊಂಬೆಯನ್ನೊ ಅಥವಾ ಗಿರಗಟ್ಟೆಯನ್ನೋ ತೆಗೆದುಕೊಂಡು ಹೋಗಿ ಇಡುವುದು. ವೃದ್ಧೆಯು ಅದನ್ನು ತೆಗೆದುಕೊಳ್ಳುವಳು. ಪುನಃ ಮಗುವು ಬಂದು ಕೇಳುವವರೆವಿಗೆ ಅದನ್ನು ಎಚ್ಚರಿಕೆಯಿಂದ ಇಟ್ಟುಕೊಂಡಿದ್ದು ವಾಪ್ಸು ಕೊಡುವಳು.

ವೃದ್ಧೆಯಾದಾ ಹೆಂಗಸು ಸಾವಿತ್ರಮ್ಮನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ, ಆ ಹೊತ್ತಿಗೆ ಆಕೆಗೆ ಸುಮಾರು ಅರವತ್ತು ವರ್ಷಗಳಷ್ಟು ವಯಸ್ಸಾಗಿದ್ದಿತು. ತಲೆಗೂದಲುಗಳು ನೆರೆತು ಬೆಳ್ಳಗಾಗಿ ಮಿಣುಗುಟ್ಟುತ್ತಿದ್ದವು. ದೇಹವು ಕಂಗೆಟ್ಟು ಬಿಳಿಚಿಕೊಂಡು ಹೋಗಿದ್ದಿತು. ಕಣ್ಣುಗ

ಳಲ್ಲಿ ಪ್ರಕಾಶವಿರಲಿಲ್ಲ. ಮುಖದಲ್ಲಿ ಕಳೆಯಿರಲಿಲ್ಲ. ಈ ಲಕ್ಷಣಗಳು ಆಕೆಯನ್ನು ವಯಸ್ಸಿಗಿಂತಲೂ ವೃದ್ಧೆಯಾಗಿ ಕಾಣುವಂತೆ ಮಾಡಿದ್ದವು.

ಇನ್ನಿಬ್ಬರು ಹೆಂಗಸರಲ್ಲಿ ಒಬ್ಬಳು ವರದೆ. ಮತ್ತೊಬ್ಬಳು ವಿಮಲೆ. ವರದೆಯು ಮಾವಿನಕಾಯಿ ಹೆಚ್ಚಿ ಜಾಡಿಯಲ್ಲಿ ಹಾಕುತ್ತಾ ಅದರ ಮೇಲೆ ಉಪ್ಪು ತುಂಬುತ್ತಿದ್ದಳು. ವಿಮಲೆಯು ಹರಿದುಹೋದ ಬಟ್ಟೆಗಳಿಗೆ ತೇಪೆ ಹಾಕುತ್ತಿದ್ದಳು. ಅಕ್ಕತಂಗಿಯರು ಹೊತ್ತು ಕಳೆಯಲು ಏನೋ ಮಾತ ನಾಡುತ್ತಿದ್ದರು. ವಿಮಲೆಯು ಕಂಗೆಟ್ಟುಹೋಗಿದ್ದಳು. ಅವಳಾ ಜೀವನ ದಲ್ಲಿ ಅವಳು ಅಷ್ಟು ಮಟ್ಟಿಗೆ ಎಂದೂ ಕಂಗೆಟ್ಟು ಹೋಗಿರಲಿಲ್ಲ. ದೇಹ ದಂತೆಯೇ ಮುಖವೂ ಕಂಗೆಟ್ಟಿತ್ತು. ಮುಖದಲ್ಲಿ ಮೂಡಿದ್ದ ಕೆಲವು ಹೊಸ ಗೆರೆಗಳು ಅವಳ ಸ್ಥಿರವಾದ ಮನಸ್ಸಿನ ಪ್ರತೀಕದಂತಿದ್ದಿತು. ಕಷ್ಟ ಸುಖಗಳನ್ನು ಅನುಭವಿಸಿ ಯಾವುದರಲ್ಲಿಯೂ ಆಸಕ್ತಿಯಿಲ್ಲದ ಭಾವವು ಆ ಮುಖದಲ್ಲಿ ಮೂಡಿದ್ದಿತು. ಆದರೆ ಅವಳ ಕಪ್ಪಾದ ಕಣ್ಣುಗಳು ಮಾತ್ರ ಎಂದಿಗಿಂತಲೂ ಪ್ರಕಾಶ ಮಾನವಾಗಿ ನಕ್ಷತ್ರಗಳಂತೆ ಹೊಳೆಯುತ್ತಿದ್ದವು.

ತಂಗಿಯು "ನೋಡಿದೆಯಾ, ಎಷ್ಟೊಂದು ಗಾಳಿ" ಎಂದು ಹೇಳಿದಳು.

ಅಕ್ಕನು "ಸೆಕೆಯಾದ ಮೇಲೆ ಗಾಳಿ ಮಳೆ. ಗಾಳಿ ಮಳೆಗಳಾದ ನಂತರ ಸೆಕೆ. ಬೀಸಿದರೆ ಬೀಸಲಿ, ಬಿಡು. ಎಷ್ಟೋ ಹಾಯಾಗಿದೆ" ಎಂದು ವೇದಾಂತಿನಿಯಂತೆ ಮಾತನಾಡಿದಳು.

ಮಗುವು ತಾಯಿಯ ತೊಡೆಯ ಮೇಲೆ ಹತ್ತಿತು.

"ಏನು ಪುಟ್ಟಾ" ಎಂದು ತಾಯಿಯು ಕೇಳಿದಳು.

ವರದೆಯು "ಮಾತು ಬರದ ಪುಟ್ಟಾ ಏನು ತಾನೇ ಹೇಳುತ್ತಾಳೆ" ಎಂದಳು.

ವಿಮಲೆಯು ಮಗುವನ್ನು ಎತ್ತಿಕೊಂಡು ಮುದ್ದಿಸುತ್ತಾ "ಮಾತ ನಾಡದಿದ್ದರೇನು ? ಎಷ್ಟು ಮುದ್ದಾಗಿದ್ದಾಳೆ, ನೋಡು" ಎಂದು ಹೇಳಿ ಮಗುವನ್ನು ತೊಡೆಯ ಮೇಲೆ ಕೂರಿಸಿಕೊಂಡು, ಅದರ ತಲೆಯನ್ನು ಮೂಸಿ ನೋಡುತ್ತಾ, "ಈ ಬೇಸಿಗೆಯ ಕಾಲದಲ್ಲಿ ಮಗುವು ಬೆಂದು ಬಡಕಲಾ ಗಿದ್ದಿತು. ಈಗ ನೋಡು, ಎಷ್ಟು ಖುಷಿಯಾಗಿದೆ" ಎಂದಳು.

ಸಾವಿತ್ರಮ್ಮನವರು ಇದ್ದಕ್ಕಿದ್ದ ಹಾಗೆಯೇ ನಡುಗಿದರು. ಹೊದ್ದಿದ್ದ ಹರಕಲು ಶಾಲುವನ್ನು ಸರಿಮಾಡಿಕೊಳ್ಳುತ್ತಾ " ಏನು ಗಾಳಿಯೆ, ಏನು ಗಾಳಿಯೆ ?" ಎಂದರು.

ವಿಮಲೆಯು " ಹೌದತ್ತೆ. ಈದಿನ ಬಹಳ ಗಾಳಿಯು ಬೀಸುತ್ತಿದೆ " ಎಂದಳು.

" ಬಹಳ ಕೆಟ್ಟ ಕಾಲ ಬಂದಿತಮ್ಮ. ಈ ಚಳಿಯನ್ನು ತಡೆಯಲಾರೆ. ಈ ಹಾಳು ಜೀವ ಹೋಗುವುದಿಲ್ಲ. ಎಷ್ಟು ಪಾಪ ಮಾಡಿದ್ದೇನೆಯೋ. ಅನುಭವಿಸಬೇಕಲ್ಲಾ " ಎಂದು ಹೇಳುತ್ತಾ ಅಳತೊಡಗಿದರು.

ವಿಮಲೆಯು ಸಮಾಧಾನ ಪಡಿಸುತ್ತಾ " ಹಾಸಿಗೆ ಹಾಸಿ ಕೊಡುತ್ತೇನೆ. ಮಲಗಿಕೊಳ್ಳುತ್ತೀರಾ ?" ಎಂದು ಕೇಳಿದಳು.

ಸಾವಿತ್ರಮ್ಮನವರು ಮಲಗಿಕೊಳ್ಳಲು ಒಪ್ಪಲಿಲ್ಲ " ಸಾಯಲಿಲ್ಲವಲ್ಲ-ಸಾಯಲಿಲ್ಲವಲ್ಲ " ಎಂದು ಚಡಪಡಿಸ ತೊಡಗಿದರು.

ವರದೆಯು ಹೋಗಿ ಸ್ವಲ್ಪ ಬೆಚ್ಚಗಿದ್ದ ಕಂಬಳಿಯನ್ನು ತಂದು ಎರಡು ಮಡಿಕೆಯಲ್ಲಿ ಮಡಿಸಿ ಅತ್ತೆಗೆ ಹೊದ್ದಿಸಿದಳು.

ಸಾವಿತ್ರಮ್ಮನವರು ಸ್ವಲ್ಪ ಸಮಾಧಾನವನ್ನು ಹೊಂದಿದರು. ಮಗುವು ತಾಯಿಯ ತೊಡೆಯಿಂದ ಇಳಿದು ಬೊಂಬೆಯೊಂದನ್ನು ತೊಡೆಯ ಮೇಲೆ ಮಲಗಿಸಿ, ಬಟ್ಟೆಯನ್ನು ಹೊದ್ದಿಸಿ, ಏನೇನೋ ಅರ್ಧಾಕ್ಷರಗಳನ್ನು ಹೇಳುತ್ತಾ ಮುದ್ದಾಡತೊಡಗಿತು.

ವಿಮಲೆಯು ಹೊಲಿಯುವ ಬೇರೊಂದು ಬಟ್ಟೆಯನ್ನು ಕೈಗೆ ತೆಗೆದು ಕೊಂಡಳು.

ವರದೆಯು " ಅದನ್ನು ಹೊಲಿದು ಪ್ರಯೋಜನವಿಲ್ಲಕ್ಕ " ಎಂದು ಹೇಳಿದಳು.

ವಿಮಲೆಯು ಚರ್ಚೆ ಮಾಡಲಿಲ್ಲ. ಬಟ್ಟೆಯನ್ನು ತೆಗೆದು ಕೆಳಗೆ ಹಾಕಿ ಮಾವಿನ ಕಾಯಿ ಹೆಚ್ಚುತ್ತಿದ್ದ ತಂಗಿಯನ್ನು ನೋಡುತ್ತಾ ಕುಳಿತು ಕೊಂಡಳು.

ವರದೆಯೇ " ಅಕ್ಕಾ. ಈದಿನ ನೀನೇನೋ ಒಂದು ತರಹವಾಗಿ

ದ್ದೀಯೆ. ನೋಡಿದರೆ ನಿನ್ನ ಮನಸ್ಸಿಗೇನೋ ದುಃಖವಾಗಿರುವಂತೆ ಕಂಡು ಬರುತ್ತದೆ " ಎಂದಳು.

" ಏನು, ದುಃಖವೇ ?"

ತಂಗಿಯು ಉತ್ತರ ಕೊಡಲಿಲ್ಲ.

" ದುಃಖ ಪಡಬೇಕಾದರೆ ಬೇಕಾದಷ್ಟಿದೆ, ವರದಾ. ಅವರೆಲ್ಲಿದ್ದಾರೆಯೋ ಗೊತ್ತಿಲ್ಲ. ಮತ್ತೊಂದು ಮಗುವು ನಮ್ಮ ಬಡ ಸಂಸಾರಕ್ಕೆ ಬರುವುದರಲ್ಲಿದೆ. ಆದರೆ ನಾನು ದುಃಖ ಪಡುವುದಿಲ್ಲ. ದುಃಖ ಪಡುವುದನ್ನು ಬಿಟ್ಟುಬಿಟ್ಟದ್ದೇನೆ "

" ಅವರು ಹೋದುದು ಅಷ್ಟು ಸರಿಯಲ್ಲ, ಅಕ್ಕ "

" ಹೌದು, ಆದರೆ ಗಂಡಸರು ವಿಚಿತ್ರರಾದವರು———" ಮುಂದೇನೋ ಹೇಳಲು ಹೋಗಿ ವಿಮಲೆಯು ಸುಮ್ಮನಾಗಿ, ಮಂಕಾಗಿ ತಂಗಿಯ ಕಡೆ ನೋಡಿದಳು.

ಆ ಮನೆಯು ನಿಶ್ಶಬ್ದವಾಗಿದ್ದಿತು. ಒಲೆಯು ಉರಿಯುವಾಗ ಕಟಕಟನೆ ಧ್ವನಿಯಾಗುತ್ತಿತ್ತು. ಮನೆಯ ಬಾಗಿಲುಗಳೂ ಅಡಿಗೆಯ ಮನೆಯ ಕಿಟಕಿಯೂ ಹೊಡೆದುಕೊಳ್ಳುತ್ತಿದ್ದವು. ಹೊರಗಡೆ ಮರಗಳು ಗಾಳಿಯ ಹೊಡೆತಕ್ಕೆ ಶಬ್ದ ಮಾಡುತ್ತಿದ್ದವು.

ವರದೆಯು ದಿಟ್ಟತನದಿಂದ "ಈ ಗಂಡಸರನ್ನು ಕಂಡರೆ ನನಗೆ ಆಗುವುದಿಲ್ಲ. ನಾನು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲ " ಎಂದಳು.

ತಂಗಿಯಾಡಿದ ಮಾತು ಅನುಭವರಹಿತವಾದುದೆಂಬಂತೆ ಅಕ್ಕನು ನಕ್ಕು " ನಿನಗೆ ಹಾಗೆನ್ನಿಸುವುದರಲ್ಲಿ ಆಶ್ಚರ್ಯವಿಲ್ಲ. ಈ ಬಡತನದ ನಡುವೆ ನನ್ನ ಗತಿಯನ್ನು ನೋಡಿದ ನಿನಗೆ ಹಾಗೆನ್ನಿಸದೇ ಇನ್ನೇನು ತಾನೇ ಎನ್ನಿಸುತ್ತದೆ " ಎಂದಳು.

" ಬಡತನ ! ನೀನು ಜೊತೆಯಲ್ಲಿದ್ದರೆ ಬಡತನವೂ ಕಷ್ಟವಾಗುವುದಿಲ್ಲ. ಆದರೆ ಮಾತಿಗೆ ಹೇಳುತ್ತೇನೆ. ಯಾರಿಗೆ ತಾನೇ ನಮಗೆ ಬಂದಂತೆ ಬಡತನವು ಬರುತ್ತದೆ. ಇಂದು ಅತುಲವಾದ ಐಶ್ವರ್ಯ–ನಾಳೆ ಬೆಳಗಾದ ನಂತರ ಬಿಕ್ಷಾಟನ–ಹೀಗೆ "

" ಬರಬಾರದು. ಆದರೆ ಬಡತನವು ಬರುವುದಾದರೆ ಹುಡುಗ ತನ ದಲ್ಲಿ ಬರುವುದೇ ಒಳ್ಳೆಯದು "

" ಹಾಗಾದರೆ ಪ್ರತಿಯೊಬ್ಬರಿಗೂ ಕಷ್ಟವು ಬರುವುದು ವಿಧಿನಿಯಾ ಮಕವೆನ್ನುತ್ತೀಯೇನು ?"

" ಒಂದು ಬಗೆಯಾಗಿ ಹಾಗೆಯೇ "

ಪ್ರಸ್ತುತ ತಮಗಿರುವ ಬಡತನವನ್ನು ನೆನೆಸಿಕೊಳ್ಳುತ್ತಾ ವರದೆಯು " ಅಮ್ಮನು ಸತ್ತು ಮೂರು—ಯಾಕೆ ನಾಲ್ಕು ವರ್ಷಗಳಾದವು. ಕಡಿಮೆ ಯಾಗುವ ಬದಲು ದಿನ ದಿನಕ್ಕೆ ಕಷ್ಟವು ಹೆಚ್ಚುತ್ತಿದೆ " ಎಂದಳು.

ವಿಮಲೆಯು ನಿರಾಶೆಯಲ್ಲಿ ಆಶೆಯನ್ನು ತಂದುಕೊಂಡು " ವರದಾ. ಕಷ್ಟದ ಮೇಲೆ ಕಷ್ಟಗಳು ಬರುತ್ತಿರುವುದರಿಂದ ನನಗೆ ಜೀವನದಲ್ಲಿ ಆಸೆ ಯುಂಟಾಗುತ್ತಿದೆ. ದೇವರು ಇನ್ನೆಷ್ಟು ಕಷ್ಟವನ್ನು ತಾನೇ ಕೊಟ್ಟಾನು. ಎಂದಾದರೂ ಅವನಿಗೆ ಬೇಜಾರಾಗಬೇಕಷ್ಟೆ " ಎಂದಳು.

" ಶಕುಂತಲೆಯು ಯಾರೋ ಒಬ್ಬ ಚಿತ್ರಕಾರನನ್ನು ಮದುವೆ ಮಾಡಿ ಕೊಂಡಳಂತೆ, ಗೊತ್ತೇನಕ್ಕಾ "

" ಹಾಗೇನು " ಎಂದು ಹೇಳಿ ತನ್ನ ತೊಡೆಯ ಮೇಲೆ ಮಲಗಿದ್ದ ಮಗುವನ್ನು ಎಬ್ಬಿಸುತ್ತಾ " ಏಳಮ್ಮಾ. ಈಗ ನಿದ್ದೆ ಮಾಡಿದರೆ ರಾತ್ರಿ ನಿದ್ದೆಯು ಬರುವುದಿಲ್ಲ " ಎಂದು ವಿಮಲೆಯು ಹೇಳಿದಳು.

ಅನಂತರ ತಂಗಿಯ ಕಡೆಗೆ ನೋಡುತ್ತಾ ವಿಮಲೆಯು " ವರದಾ. ನಾನು ಬಡತನಕ್ಕೆ ಹೆದರುವುದಿಲ್ಲ. ಬಡತನದಿಂದ ಮನುಷ್ಯರ ಧೈರ್ಯವು ಕುಂದುತ್ತದೆ. ಅದಕ್ಕಾಗಿ ನಾನು ಚಿಂತಿಸುತ್ತೇನೆ. ನೋಡು, ಅಷ್ಟು ದಾರುಣವಾದ ಬಡತನವು ಬರದೇ ಇದ್ದಿದ್ದರೆ ಅವರು ಹಾಗೆ ಹೆದರಿಕೊಂಡು ಓಡಿಹೋಗುತ್ತಿದ್ದರೆ ?"

ವರದೆಯು ಯಾತಕ್ಕಾಗಿಯೋ ಎದ್ದಿದ್ದವಳು ಕಿಟಕಿಯಲ್ಲಿ ನೋಡುತ್ತಾ " ಯಾರೋ ಬರುತ್ತಿರುವಂತಿದೆ, ಅಕ್ಕಾ " ಎಂದಳು.

" ಅಂಗಡಿಯವನು ಹಣಕ್ಕಾಗಿ ಬಂದಿರಬಹುದು. ಶಂಕರನು ಹತ್ತು ರೂಪಾಯಿ ಕೊಟ್ಟಿದ್ದಾನೆ ಅದನ್ನು ಕಾಫೀಪುಡಿ ಡಬ್ಬದ ಕೆಳಗೆ ಇಟ್ಟೆ

ದ್ದೇನೆ. ತೆಗೆದು ಕೊಟ್ಟು ನಮ್ಮ ಅಣ್ಣ ಬಂದು ನೋಡುತ್ತಾರಂತೆ-ಎಂದು ಹೇಳಿಬಿಡು——"

ಗಾಳಿಗೆ ಬಡಿದುಕೊಳ್ಳುತ್ತಿದ್ದ ಬೀದಿಯ ಬಾಗಿಲು ಪೂರ್ಣವಾಗಿ ತೆಗೆಯಲ್ಪಟ್ಟಿತು. ಭವ್ಯಾಕಾರನಾದ ಪುರುಷನೊಬ್ಬನು ಬಂದು ನಿಂತುಕೊಂಡು ನಗುಮುಖದಿಂದ ಅವರ ಕಡೆಗೆ ನೋಡತೊಡಗಿದನು. ಅವನು ಬಹಳ ದೂರ ದೇಶದಲ್ಲಿದ್ದಾನೆಂದುಕೊಂಡಿದ್ದಳು. ನೋಡಿದ ಕ್ಷಣ ಅವನನ್ನು ಗುರುತು ಹಿಡಿಯಲು ವಿಮಲೆಯಿಂದ ಆಗಲಿಲ್ಲ.

" ಓ ! ನಟರಾಜ್ ! ಬನ್ನಿ. ಬನ್ನಿ !" ಎಂದು ಕರೆದಳು.

ನಟರಾಜನು ಬಂದು ಕುಳಿತುಕೊಂಡು ಮೂರು ಮಂದಿ ಸ್ತ್ರೀಯರನ್ನೂ ವಿಶ್ವಾಸದಿಂದ ಮಾತನಾಡಿಸಿದನು.

ನಗುತ್ತಾ " ವಿಮಲಾ. ಈ ಪುಟ್ಟ ಮಗುವು——" ಎಂದನು.

" ನನ್ನ ಮಗು. ಪುಷ್ಪಾ "

" ಓ ! ಈ ಪುಷ್ಪ ನನಗೆ ತಿಳಿಯದಂತೆ ಆಕಾಶದಿಂದ ಇಳಿದು ಬಿಟ್ಟಿದ್ದಾಳೆಯಲ್ಲಾ "

" ನ್ಯಾಯವಾಗಿ ನೋಡಿದರೆ ನಿಮಗೆ ಈ ವಿಷಯವನ್ನು ಬರೆಯಬೇಕಾಗಿದ್ದಿತು. ಆದರೆ ಇವಳು ಹುಟ್ಟಿದಾಗ ನಮಗೆ ಬಹಳ ಕಷ್ಟ. ನನಗಂತೂ ಏನು ಮಾಡುವುದಕ್ಕೂ ತೋರುತ್ತಿರಲಿಲ್ಲ "

" ನೀನು ಕಂಗೆಟ್ಟು ಹೋಗಿದ್ದೆಯಲ್ಲವೆ ?" ಎಂದು ನಟರಾಜನು ಕೇಳಿದನು.

ವಿಮಲೆಯು ತನ್ನ ಪ್ರಕಾಶಮಾನವಾದ ಕಣ್ಣುಗಳಿಂದ ಅವನ ಕಡೆಗೆ ನೋಡುತ್ತಾ " ಹೌದು. ಆದರೆ ನೀವೂ ಕಂಗೆಟ್ಟು ಹೋಗಿದ್ದೀರಿ " ಎಂದು ಹೇಳಿದಳು.

" ನನಗೆ ಮೈ ಚೆನ್ನಾಗಿರಲಿಲ್ಲ, ನಿನಗೆ ನಿನಗೆ ಕಾಗದ ಬರೆದಿದ್ದೆನಲ್ಲಾ "

" ಹೌದು. ಬರೆದಿದ್ದಿರಿ. ಮರೆತು ಹೋಯಿತು. ಹಿಮಾಲಯದಲ್ಲಿ ನಿಮಗೆ ಡಾಕ್ಟರುಗಳೆಲ್ಲಿ ಸಿಕ್ಕಿದರು "

" ಹಿಮಾಲಯವನ್ನು ಇಳಿದ ನಂತರ ಖಟಮಂಡುವಿನಲ್ಲಿ ನನಗೆ ಜ್ವರ ಬಂದಿತು.

ಅವನು ಅವರೊಂದಿಗೆ ಬಲು ಹೊತ್ತು ಮಾತನಾಡುತ್ತಾ ಕುಳಿತಿದ್ದನು. ಆಗಾಗ ತಲೆ ಎತ್ತಿ ವಿಮಲೆಯನ್ನು ನೋಡುತ್ತಿದ್ದನು.

ಅತ್ತೆಗೆ ನಿದ್ದೆ ಬರುವಂತೆ ಆಯಿತು. ವರದೆಯು ಅವರನ್ನು ಕರೆದುಕೊಂಡು ಹೋಗಿ ಹಜಾರದಲ್ಲಿ ಮಲಗಿಸಿದಳು.

ವಿಮಲೆಯು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿದಳು. ಅವನಲ್ಲಿ ಯಾವ ಬದಲಾವಣೆಗಳೂ ಕಂಡು ಬರಲಿಲ್ಲ. ಅದೇ ನಗುಮೊಗ. ಅದೇ ಮೆಲುದನಿ. ದನಿಯಲ್ಲಿ ಅದೇ ಸುಸ್ಪಷ್ಟತೆ. ಅದೇ ನೋಟ. ಆ ನೋಟದಲ್ಲಿ ನಿಸ್ಸಹಾಯಕತೆಯಿದ್ದಿತು. ಆದರೆ ಅದೊಂದು ಅರ್ಥವನ್ನು ಸೂಚಿಸುತ್ತಿದ್ದಿತು. ಮಗುವಿನ ಬೊಂಬೆಯನ್ನು ಕೈಯಲ್ಲಿ ಹಿಡಿದುಕೊಂಡು ಆಡಿಸುತ್ತಾ ಮಾತನಾಡುತ್ತಿದ್ದನು.

" ಈ ಮೂರು ವರ್ಷಗಳೂ ನೀವು ಪರ್ವತ ಶಿಖರಗಳ ಮೇಲೆಯೇ ಇದ್ದಿರಾ ?"

" ಆರು ತಿಂಗಳ ಕಾಲ ಹಿಮಾಲಯದಲ್ಲಿದ್ದೆವು. ಆಮೇಲೆ ಒಂದೆರಡು ತಿಂಗಳು ಷಿಲಾಂಗ್‌ನಲ್ಲಿದ್ದೆ. ಅನಂತರ ಎಲ್ಲಿದ್ದೆನೆಂದು ಹೇಳಲಾಗುವುದಿಲ್ಲ. ಎಲ್ಲೆಲ್ಲಿಯೋ ಅಲೆಯುತ್ತಿದ್ದೆ. ಪುನಃ ಪರ್ವತ ಪ್ರಾಂತಗಳಿಗೆ ಹೊರಟು ಹೋಗಬೇಕೆಂದಿದ್ದೇನೆ "

" ಹಾಗೇನು ? ಈ ಬಾರಿ ಇನ್ನಾವ ಶಿಖರವನ್ನು ಹತ್ತುತ್ತೀರಿ ?"

" ಈ ಬಾರಿ ಶಿಖರಾರೋಹಣವಿಲ್ಲ. ವಿಂಧ್ಯಪರ್ವತಗಳಲ್ಲಿ ವಾಸ ಮಾಡುವ ಮೂಲ ನಿವಾಸಿಗಳ ಜೀವನ ವಿಧಾನಗಳಲ್ಲಿ ಅನ್ವೇಷಣೆಗಳನ್ನು ಮಾಡಬೇಕೆಂದಿದ್ದೇನೆ "

" ನಿಮ್ಮ ಪ್ರಯಾಣವಾವಾಗ ?"

" ನಾಳೆಯ ದಿನ ಪ್ರಾತಃಕಾಲವೇ ಪೂನಾ ಮೈಲ್‌ನಲ್ಲಿ ಹೊರಟು ಹೋಗುತ್ತೇನೆ. ನಿನ್ನನ್ನು ನೋಡುವ ಉದ್ದೇಶದಿಂದ ಮಾತ್ರ ನಾನು ಇಲ್ಲಿಗೆ ಬಂದೆ "

" ಹಾಗಾದರೆ ನೀವು ಈ ಊರಿನಲ್ಲಿರುವುದು ಈ ಒಂದು ರಾತ್ರಿಯು ಮಾತ್ರ "

" ಅಷ್ಟೇ, ಅದಿರಲಿ. ನಿನ್ನ ವಿಷಯವೆಲ್ಲಾ ಹೇಳು, ವಿಮಲಾ " ಎಂದು ನಟರಾಜನು ಪುಷ್ಪಳನ್ನು ಎತ್ತಿಕೊಂಡನು.

ಹೊಸ ಮುಖವನ್ನು ನೋಡಿ ಮಗುವು ಕಿರುಚಿಕೊಂಡಿತು.

ಅಳುತ್ತಿದ್ದ ಮಗುವನ್ನು ವರದಳು ಎತ್ತಿಕೊಂಡು " ಅಳಬೇಡ, ಅಣ್ಣ-ಅಣ್ಣ " ಎಂದು ಹೇಳಿದಳು.

ಮಗುವು ಅಳುವನ್ನು ನಿಲ್ಲಿಸಲಿಲ್ಲ. ವರದೆಯು ಮಗುವನ್ನು ಎತ್ತಿಕೊಂಡು ಹೊರಗೆ ಹೋದಳು. ಅಡಿಗೆಯ ಮನೆಯಲ್ಲಿ ನಟರಾಜನೂ ವಿಮಲೆಯೂ ಇಬ್ಬರೇ ಉಳಿದರು.

ನಟರಾಜನು " ಹೇಳು, ವಿಮಲಾ. ನಿನ್ನ ವಿಷಯವೆಲ್ಲಾ ಹೇಳು. ಪುಷ್ಪ ಹುಟ್ಟಿದಳು. ಪುಷ್ಪಳ ತಂಗಿಯೋ ತಮ್ಮನೋ ಅವತಾರ ಮಾಡುವುದರಲ್ಲಿದ್ದಾನೆ. ಇನ್ನೇನು ವಿಷಯ ಹೇಳು " ಎಂದನು.

ತಿಳಿಯಾದ ನೀರನ್ನು ಸ್ವಲ್ಪ ಕಲಕಿದ ಹಾಗಾಯಿತು. ಅವಳು ತನ್ನ ಗಲ್ಲದ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಳು. ಅವನ ಮುಖವನ್ನು ನೋಡುತ್ತಿದ್ದಳು. ಅವನ ಕಣ್ಣುಗಳನ್ನು ನೋಡುತ್ತಿದ್ದಳು. ಅವನ ಮಾತುಗಳನ್ನು ಕೇಳುತ್ತಿದ್ದಳು. ಪುನಃ ತನ್ನ ಜೀವನದಲ್ಲಿ ನಟರಾಜನು ಪ್ರವೇಶಿಸುತ್ತಿರುವುದನ್ನು ಮನಗಂಡಳು.

ಸ್ವಲ್ಪ ತಡೆದು, ಚೇತರಿಸಿಕೊಂಡು, " ಇನ್ನೆರಡು ತಿಂಗಳಿಗೆ ಪುಷ್ಪಳಿಗೆ ಎರಡು ವರ್ಷಗಳು ತುಂಬುತ್ತದೆ. ಅಷ್ಟರ ಒಳಗಾಗಿ........" ಎಂದಳು.

" ಈಗ ಇಲ್ಲಿದ್ದೀಯಾ, ವಿಮಲಾ. ಶಂಕರ ವರದಾ ಶೀಲೆಯರೊಡನೆ "

ವಿಮಲೆಯ ಮುಖವು ಕೆಂಪಾಯಿತು. ಆದರೂ ಅವಳು ನಗುತ್ತಲೇ ಇದ್ದಳು.

" ಪುಷ್ಪಳು ಹುಟ್ಟುವುದಕ್ಕೆ ಕೆಲವು ವಾರಗಳಿದ್ದವು. ಆಗಲೇ ಷೇರು ಮಾರ್ಕೆಟ್ಟು ಬಹಳ ಇಳಿಮುಖವಾಗಿದ್ದಿತು. ಬರುತ್ತ ಬರುತ್ತ ಅವರಿಗೆ

ಬಹಳ ತೊಂದರೆಯಾಯಿತು. ಒಂದು ದಿನ, ಪುಷ್ಪಳು ಹುಟ್ಟಿದ ದಿನ ಮಧ್ಯಾಹ್ನ ಅವರು ಊಟ ಮಾಡಿ ಕುಳಿತುಕೊಂಡಿರುವಾಗ ಫೋನ್‌ಕಾಲ್ ಬಂದಿತು. ಬ್ಯಾಂಕು ಮ್ಯಾನೇಜರುಗಳಿಬ್ಬರು ಬಂದು ಹಣ ಕೊಡಲೇ ಬೇಕೆಂದು ಹಠ ಹಿಡಿದಿದ್ದರು. ಅಲ್ಲಿಗೆ ಆ ವ್ಯಾಪಾರವು ಮುಕ್ತಾಯವಾಯಿತು. ಈ ಎರಡನೆಯ ಮಹಾಯುದ್ಧವು ಮುಗಿದ ನಂತರ ಎಷ್ಟೋ ವ್ಯಾಪಾರಗಳಿಗೆ ಈ ದುರವಸ್ಥೆಯಾಯಿತೆಂದು ಕೇಳಿದ್ದೇನೆ. ನಿಮ್ಮ ಪುಸ್ತಕ ವ್ಯಾಪಾರವು ಹೇಗಿದೆ ?"

ನಟರಾಜನು ನಗುತ್ತಾ "ನನಗೆ ವ್ಯಾಪಾರವೆಲ್ಲಿದೆ, ವಿಮಲಾ. ಯಾವಾಗಲಾದರೂ ಪುಸ್ತಕ ಬರೆಯುತ್ತೇನೆ. ಯಾರಾದರೂ ಪ್ರಕಾಶಕರು ಮುದ್ರಿಸುತ್ತಾರೆ. ಅವರೇನಾದರೂ ಕೊಟ್ಟರೆ ಕೊಟ್ಟರು. ಇಲ್ಲದಿದ್ದರೆ ಇಲ್ಲ" ಎಂದನು.

"ಹೋಗಲಿ. ನನಗೇನಾದರೂ ಪುಸ್ತಕ ಕೊಡುವುದಕ್ಕೆ ಏನಡ್ಡಿ ? ಈ ಮೂರು ವರ್ಷಗಳಿಂದ ಏನೂ ಪುಸ್ತಕವನ್ನು ಬರೆದಿಲ್ಲವೇನು ?"

"ಬರೆದಿದ್ದೇನೆ. ಎರಡು ಪುಸ್ತಕಗಳು ಪ್ರಿಂಟಾಗಿವೆ. ನಿಮ್ಮ ಮನೆಗೆ ಕಳಿಸುವಂತೆ ಈ ದಿನವೇ ಕಾಗದ ಬರೆಯುತ್ತೇನೆ" ಎಂದು ಹೇಳಿ, ಜೇಬಿನಲ್ಲಿದ್ದ ಕಾಗದವನ್ನು ತೆಗೆದು ಗುರುತು ಹಾಕಿಕೊಂಡನು.

ವಿಮಲೆಯು ತನ್ನ ಕತೆಯನ್ನು ಮುಂದುವರಿಸಿ "ವರದಳಿಗೆ ಶಿಶು ವಿಹಾರ ಒಂದರಲ್ಲಿ ಸಂಬಳ. ಐವತ್ತು ರೂಪಾಯಿ ಬರುತ್ತದೆ. ಅದರ ಜೊತೆಗೆ ಮನೆಯಲ್ಲಿಯೂ ಕೆಲಸ ಮಾಡುತ್ತಾಳೆ. ಏನೋ ಕಷ್ಟ" ಎಂದಳು.

"ಶಂಕರ ಕೆಲಸ ಮಾಡುತ್ತಿದ್ದಾನೇನು ?"

"ಅವನೂ ಕಷ್ಟ ಪಡುತ್ತಿದ್ದಾನೆ. ಏರ್‌ಕ್ರಾಫ್ಟ್‌ನಲ್ಲಿದ್ದ ಕೆಲಸ ಹೋಯಿತು. ಈಗ ಯಾರೋ ಸಾಗುವಾನೀ ವರ್ತಕರಲ್ಲಿ ಕೆಲಸಕ್ಕಿದ್ದಾನೆ. ಅವನು ಈ ಮನೆಯ ಜವಾಬ್ದಾರಿಯನ್ನು ಪೂರ್ಣವಾಗಿ ವಹಿಸಿಕೊಂಡಿದ್ದಾನೆ. ಪುಟ್ಟ ಮಗು ಪುಷ್ಪಳೂ ಈ ಮನೆಗೆ ಸೇರಿದವಳೆಂದು ಕೊಂಡಿದ್ದಾನೆ"

" ಶೀಲೆಯು ಹೇಗಿದ್ದಾಳೆ ?"

" ವರದೆಗೆ ಇದ್ದ ತುಂಟತನವೆಲ್ಲಾ ಈಗ ಶೀಲೆಗೆ ಬಂದಿದೆ. ಅವಳೂ ವಾಸುವೂ ಪುಷ್ಪಳನ್ನು ನೋಡಿಕೊಳ್ಳುತ್ತಾರೆ. ಒಂದೊಂದು ದಿನ ಮಗುವು ನನ್ನ ಕೈಗೆ ಸಿಕ್ಕುವುದೇ ಇಲ್ಲ. ಒಟ್ಟಿನಲ್ಲಿ ಯಾರಿಗೆ ಕಷ್ಟವಾದರೂ ನಾನು ಸುಖವಾಗಿದ್ದೇನೆ "

ಒಂದು ನಿಮಿಷ ಕಾಲ ನಟರಾಜನು ನಗುನಗುತ್ತಾ ಅವಳ ಕಡೆಗೆ ನೋಡಿದನು.

ಅನಂತರ " ವಿಮಲಾ. ನೀನು ಸುಖವಾಗಿರುವಂತೆ ಕಂಡು ಬರುವು ದಿಲ್ಲ " ಎಂದು ಹೇಳಿದನು.

ಅವಳು ಎಲ್ಲಿಯೋ ನೋಡುತ್ತಾ " ಸುಖವಾಗಿದ್ದೇನೆ. ಯಾಕೆ ಇಲ್ಲ. ನನ್ನ ಅಣ್ಣ ತಮ್ಮಂದಿರೂ, ತಂಗಿಯರೂ ನನ್ನನ್ನು ಬಹಳ ಸುಖವಾಗಿಟ್ಟಿದ್ದಾರೆ. ನನಗೇನು ಕೊರತೆ ?" ಎಂದಳು.

" ಷೇರು ವ್ಯಾಪಾರವು ಬಿದ್ದು ಹೋದ ನಂತರ ನೀನೂ ವೆಂಕಟೂ ಇಬ್ಬರೂ ಇಲ್ಲಿಗೆ ಬಂದಿರೇನು ?"

" ಅವರು ಎಷ್ಟೋ ಪ್ರಯತ್ನ ಮಾಡಿದರು. ನಾನು ಆಸ್ಪತ್ರೆಯಿಂದ ಬರುವ ವೇಳೆಗಂತೂ ಬಹಳ ಕಷ್ಟವು ಬಂದುಬಿಟ್ಟಿತ್ತು. ಒಂದು ಆಶಾ ಕಿರಣವಾದರೂ ಇರಲಿಲ್ಲ. ನಾವು ಅದೇ ಮನೆಯಲ್ಲಿರುತ್ತಿದ್ದೆವು. ಕೆಲವು ದಿನ ಮನೆಯಲ್ಲಿದ್ದುದನ್ನು ಮಾರಿಕೊಂಡು ತಿಂದೆವು. ಕಟ್ಟಕಡೆಗೆ ಇನ್ಷೂರೆನ್ಸ್ ಏಜನ್ಸಿಯನ್ನು ತೆಗೆದುಕೊಂಡರು. ಖರ್ಚುಗಳನ್ನು ಎಷ್ಟು ಕಡಿಮೆ ಮಾಡಿದರೂ ಮನೆಯ ಬಾಡಿಗೆಯು ವಿಪರೀತ ಭಾರವಾಗಿದ್ದಿತು "

" ಅದಕ್ಕಾಗಿ ಇಲ್ಲಿ ಬಂದಿರೋ ?"

" ಅವರು ಬರಲಿಲ್ಲ. ನಾನು ಬಂದೆ. ಅವರು ಬಂದು ನನ್ನ ಮೇಲೆ ರೇಗಿದರು. ಇದನ್ನೆಲ್ಲಾ ಕೇಳಿ ನೀವು ನಗುತ್ತೀರೇನೋ ? ಏನೇ ಆಗಲಿ ಕಷ್ಟವನ್ನು ಹೊರಗೆ ತೋರಿಸಿಕೊಳ್ಳಬಾರದೆಂದು ಅವರ ಇಷ್ಟ. ಆದರೆ ತೋರಿಕೆಯು ಪ್ರಯೋಜನವಿಲ್ಲವೆಂದು ನಾನು ಹೇಳಿದೆ. ನಾನು ಬಡವಳಾಗಿಯೇ ಇದ್ದೆ. ಪುನಃ ಬಡತನವು ಬಂದರೆ ನಾನು ಹೆದರುವುದಿಲ್ಲ. ಆದರೆ ನಮ್ಮ ವಾಸ್ತವವಾದ ಯೋಗ್ಯತೆಗಿಂತಲೂ ಹೆಚ್ಚಾಗಿ ಬದುಕುವುದು ಮಾತ್ರ

ನನಗೆ ಇಷ್ಟವಿಲ್ಲ–ವೆಂದು ಸ್ಪಷ್ಟವಾಗಿ ಹೇಳಿದೆ. ಅವರ ಮನೋಭಾವವೇ ವಿಚಿತ್ರ. ಮೊದಲಿನಿಂದಲೂ ಸುಖದಲ್ಲಿಯೇ ಬೆಳೆದವರು. ಕಷ್ಟವನ್ನು ಅನುಭವಿಸದವರು. ಗೌರವವಾಗಿರುವುದೆಂದರೆ ದೊಡ್ಡ ಮನೆಯಿರಬೇಕು. ಮೋಟಾರುಕಾರು ಬೇಕು. ಆಳುಕಾಳುಗಳಿರಬೇಕು. ಹಣವಿರಬೇಕು–ಎಂದು ಅವರ ಭಾವನೆ. ಮೊದಲು ಚೆನ್ನಾಗಿದ್ದಾಗ ಅವರು ನಮ್ಮಪ್ಪನನ್ನು ಬೈಯ್ಯುತ್ತಿದ್ದರು. ಮನುಷ್ಯನು ತನ್ನ ಮಕ್ಕಳಿಗೆ ನಾಕಷ್ಟು ಬಿಟ್ಟು ಹೋಗಬೇಕು. ಬುದ್ಧಿವಂತರಾದವರು ಮಾತ್ರ ಹಣವನ್ನು ಹಾಳುಮಾಡದೇ ಕಾಪಾಡಿಕೊಳ್ಳಬಲ್ಲರು–ಎಂಬುದಾಗಿ ಹೇಳುತ್ತಿದ್ದರು. ಆದರೆ ಅದೆಲ್ಲಾ ಅವರ ಮೇಲೆಯೇ ಎರಗಿ ಬಂದುವು. ಹಣ ಹೋಯಿತು ಕೆಲಸ. ವಿಲ್ಲ. ಅಬ್ಬಾ ! ಅವರಂತಹವರಿಗೆ ಬಹಳ ಕಷ್ಟ ”

“ ಎಲ್ಲರಿಗೂ ಕಷ್ಟ, ವಿಮಲಾ ಈಗೇನು ಅವನಿಗೆ ಇನ್ಷೂರೆನ್ಸ್ ಕಂಪನಿಯಲ್ಲಿ ಕೆಲಸವೋ ?”

“ ಇಲ್ಲ. ಎಷ್ಟೋ ಬಿಸ್‌ನೆಸ್ ಕೊಡುವುದಾಗಿ ಅಗ್ರಿಮೆಂಟ್ ಮಾಡಿಕೊಟ್ಟಿದ್ದರು. ಆಗಲಿಲ್ಲ, ಅದರಿಂದ ಆ ಕೆಲಸವು ಹೋಯಿತು. ಸುಮಾರು ನಾಲ್ಕು ತಿಂಗಳ ಹಿಂದೆ ಪುಷ್ಪಳಿಗೆ ತಮ್ಮ ಹುಟ್ಟುತ್ತಾನೆಂದು ಗೊತ್ತಾಯಿತು. ಅವರ ಕೈಯಲ್ಲಿ ಬಿಡಿಗಾಸಿರಲಿಲ್ಲ. ಕೆಲಸಕ್ಕೆ ಸುತ್ತಿ ಬೇಸತ್ತಿದ್ದರು. ಅದರಿಂದ ನನ್ನನ್ನೂ ಮಗುವನ್ನೂ ಇಲ್ಲಿ ಬಿಟ್ಟು ಇನ್ನೆಲ್ಲಿಯಾದರೂ ಕೆಲಸ ಸಿಗುವುದೇನೋ ಎಂದು ಹೋಗಿದ್ದಾರೆ ”

“ ಅವನಿಂದ ಏನಾದರೂ ವರ್ತಮಾನವು ಬಂದಿತೇನು ?”

“ ಇನ್ನೂ ಇಲ್ಲ ”

ನಟರಾಜನು ನಿಟ್ಟುಸಿರು ಬಿಟ್ಟು “ ಮನೆಯಿಂದ ಹೋದ ಮಗಳು ಪುನಃ ಮನೆಗೆ ಬಂದೆ ” ಎಂದನು.

“ ಹೌದು. ಆದರೆ ಮನೆಗೆ ಬಂದುದು ನನಗೆ ಸ್ವಲ್ಪವೂ ಕಷ್ಟವಾಗಿರಲಿಲ್ಲ. ಅವರ ಬಳಿ ಹಣವಿರಲಿಲ್ಲ. ಆದರೆ ಇಷ್ಟು ದೊಡ್ಡ ಮನೆಯಲ್ಲಿ ಅವರ ಒಂದು ತುತ್ತು ಅನ್ನಕ್ಕೆ ಕಷ್ಟವೇ ? ಮನೆ ಎಂದರೆ ಸಂಪಾದಿಸುವವರೂ ಕಷ್ಟ ಪಡುವವರೂ ಮಾತ್ರ ಇರಬೇಕೇ ? ಮನೆಯೇನು ಹೋಟಲೇ ? ನಮ್ಮ ವಾಸು, ನಮ್ಮ ಶೀಲೆ ಇವರುಗಳು ಸಂಪಾದಿಸುವರೇ?

ಹಾಗೆಯೇ ಅವರು ಸಂಪಾದನೆ ಮಾಡದಿದ್ದುದು ನನಗೆ ಕಷ್ಟವಾಗಿ ಕಂಡು ಬರಲಿಲ್ಲ. ನಾವಿಲ್ಲಿಗೆ ಬಂದಾಗ ಪುಷ್ಪಳಿಗೆ ಒಂದು ವರ್ಷವೊ ಏನೋ ? ಕೆಲವು ದಿನಗಳು ಎಷ್ಟೋ ಸುಖವಾಗಿದ್ದೆವು. ಪುಷ್ಪ ಆರು ಗಂಟೆಗೇ ಎದ್ದು ನನ್ನನ್ನು ಎಬ್ಬಿಸುತ್ತಿದ್ದಳು. ನಾನು ಬಂದು ಕಾಫೀ ಮಾಡಲು ಆರಂಭಿಸುತ್ತಿದ್ದೆ. ಅವರೂ ಎದ್ದು ಬಂದು ನನ್ನ ಜೊತೆಯಲ್ಲಿ ಕುಳಿತಿರುತ್ತಿದ್ದರು. ಮಗುವನ್ನು ತೊಡೆಯ ಮೇಲೆ ಇಟ್ಟುಕೊಂಡೇ ಕಾಫೀ ಮಾಡಿ ಕುಡಿಯುತ್ತಿದ್ದೆವು. ಅನಂತರ ಮನೆಯವರೆಲ್ಲಾ ಕಾಫಿಯಾಗಿದೆ ಎಂದು ತಿಳಿದು ಏಳುತ್ತಿದ್ದರು. ಅಷ್ಟೇಕೆ, ಅನೇಕ ದಿನಗಳು ಅವರನ್ನೂ ಶಂಕರನನ್ನೂ ನೋಡಿದಾಗ ಶಂಕರನಿಗೆ ಅಣ್ಣನಿಲ್ಲದ ಕೊರತೆಯು ಇವರಿಂದ ನಿವಾರಣೆಯಾಗಿದೆ–ಎಂದುಕೊಳ್ಳುತಿದ್ದೆ ”

ನಟರಾಜನು ಕುತೂಹಲವಿಷ್ಟವಾದ ದೃಷ್ಟಿಯಿಂದ ಅವಳ ಕಡೆಗೆ ಹೋಡುತ್ತಾ “ ಮುಂದೇನು–ಎಂಬುದಾಗಿ ನಿನಗೆ ಆಲೋಚನೆಯು ಬರುವುದಿಲ್ಲವೇ, ವಿಮಲಾ ” ಎಂದು ಕೇಳಿದನು.

ಅವಳು “ ಅದೊಂದು ದೇವರ ಅನುಗ್ರಹ. ಏನು ಕೆಲಸ ಮಾಡುವುದಕ್ಕೆ, ಏನು ಆಲೋಚನೆಮಾಡುವುದಕ್ಕೆಅಸಾಧ್ಯವೋ, ಅದರ ಚಿಂತೆ ಇರುವುದಿಲ್ಲ ” ಎಂದು ಹೇಳಿ “ ನಿಮ್ಮನ್ನು ನೋಡಿದುದು ಸಂತೋಷ. ನಿಮ್ಮೊಂದಿಗೆ ಪುರಸತ್ತಾಗಿ ಮಾತನಾಡಲು ಅವಕಾಶವು ಸಿಕ್ಕಿದ್ದು ಅತ್ಯಂತ ಸಂತೋಷ ” ಎಂದು ಹೇಳಿದಳು.

ನಟರಾಜನು ಮಾತನಾಡಲಿಲ್ಲ. ಅವಳ ಕಡೆಗೆ ನೋಡಲಿಲ್ಲ. ಅವನು ಎತ್ತ ಕಡೆಯೋ ತಿರುಗಿಕೊಂಡಿದ್ದನು. ಆದರೆ ಉರಿಯುತ್ತಿದ್ದ ಒಲೆಯ ಬೆಂಕಿಯಲ್ಲಿ ಅವನ ಮುಖವು ಕೆಂಪಾಗಿ ಕಾಣುತ್ತಿದ್ದಿತು.

ಅಡಿಗೆಯ ಮನೆಯಲ್ಲಿ ಬಹಳ ಹೊತ್ತು ಮೌನವಿದ್ದಿತು.

ಅನಂತರ ನಟರಾಜನು “ ನನ್ನನ್ನು ಏಕಾಏಕಿ ನೋಡಿದ್ದು ಆಶ್ಚರ್ಯವಾಯಿತೇ ?” ಎಂದು ಕೇಳಿದನು.

“ ಆಶ್ಚರ್ಯವಲ್ಲದೇ ಮತ್ತೇನು ? ಈ ದಿನ ಬೆಳಗಿನಿಂದ ಈ ರೀತಿ ಗಾಳಿ ಹೊಡೆಯುತ್ತಿರುವುದನ್ನು ನೋಡಿ ಏನೋ ಅನಾಹುತವಾಗುತ್ತದೆ, ಎಂದಿದ್ದೆ. ನೀವು ಬಂದುಬಿಟ್ಟಿರಿ ” ಎಂದು ವಿಮಲೆಯು ನಕ್ಕಳು.

" ನಾನು ಹೊರಗಿದ್ದ ಪ್ರತಿ ನಿಮಿಷವೂ ನಿನ್ನನ್ನು ನೆನೆಸಿಕೊಳ್ಳು ತ್ತಿದ್ದೆ. ನಿನ್ನ ಜ್ಞಾಪಕ ಬರದ ಒಂದು ಕ್ಷಣವನ್ನೂ ನಾನರಿಯೆ. ನೀವೆ ಲ್ಲರೂ ಇಲ್ಲಿದ್ದೀರೆಂಬುದು ಕೂಡಾ ನನಗೆ ಗೊತ್ತಿರಲಿಲ್ಲ. ಈ ಎರಡು ವರ್ಷ ದಲ್ಲಿ ಈ ಮನೆಯನ್ನು ಬಿಟ್ಟು ಬೆಂಗಳೂರಿನಲ್ಲಿ ಎಲ್ಲಿಯಾದರೂ ಇದ್ದೀರೇನೋ ಎಂದು ಸಹ ತೋರಿತು. ಮನೆ ಬಾಗಿಲು ಹಾಕಿತ್ತು. ಹೊರಗಡೆ ನೋಡಿ ದರೆ ಯಾರೂ ಇದ್ದ ಹಾಗಿರಲಿಲ್ಲ. ಮನೆಯ ಪಕ್ಕದಲ್ಲಿ ನಾನು ನಡೆದು ಬಂದಾಗ ಎದೆ ಹೊಡೆದುಕೊಳ್ಳುತ್ತಿತ್ತು. ಇಲ್ಲಿ ಮಾತನಾಡುವ ಧ್ವನಿ ಯನ್ನು ಕೇಳಿ ಯಾರೋ ಇದ್ದಾರೆಂದುಕೊಂಡೆ "

" ನೀವು ನಿದ್ದೆಯಲ್ಲಿ ಬರುವವರಂತೆ ಬಂದುಬಿಟ್ಟರಿ "

" ಹಾಗಾದರೆ ನೀನು ನನ್ನನ್ನು ಮರೆತಿರಲಿಲ್ಲವೆನ್ನು "

ಅವಳು ಕ್ಷಣಕಾಲ ರೆಪ್ಪೆ ಹೊಡೆಯಲಿಲ್ಲ

" ನಾನು ನಿಮ್ಮನ್ನು ಮರೆತು ಸುಖವಾಗಿರುವ ಪುಣ್ಯವನ್ನು ಮಾಡಿಲ್ಲ "

ಅವನೂ " ಅಂತಹ ಪುಣ್ಯ ಮಾಡಿಲ್ಲ " ಎಂದು ಪ್ರತಿಧ್ವನಿ ಮಾಡಿದನು.

ಸ್ವಲ್ಪ ಹೊತ್ತು ಸುಮ್ಮನಿದ್ದು " ವಿಮಲಾ ! ಇದೇನು ಆ ಜೀವ ಶಿಕ್ಷೆಯೋ ?" ಎಂದು ಕೇಳಿದನು.

ಅವಳು ನಗುತ್ತಾ " ನನಗೆ ಹಾಗೆಯೇ ತೋರುತ್ತದೆ " ಎಂದು ಹೇಳಿದಳು.

" ನಮಗಿಬ್ಬರಿಗೂ ಅದೇ........ಎನ್ನುತ್ತೀಯಾ ?"

" ನಾನು ನನ್ನ ವಿಷಯವನ್ನು ಮಾತ್ರ ಹೇಳುತ್ತೇನೆ. ಮನುಷ್ಯ ರಿಗೆ ಜೀವನದಲ್ಲಿ ಬರುವುದು ಒಂದೊಂದೇ ಅವಕಾಶ. ಸರಿಯಾಗಿ ಉಪ ಯೋಗಿಸಿಕೊಳ್ಳುತ್ತಾರೆಯೋ ತಪ್ಪಾಗಿ ಉಪಯೋಗಿಸಿಕೊಳ್ಳುತ್ತಾರೆಯೋ ಒಂದೇ ಅವಕಾಶ. ಮೊದಲು ಅವರೊಡನೆ ತಿರುಗುತ್ತಿದ್ದುದು ಅವಿವೇಕ. ಮದುವೆಯಾಗುವಾಗಲಂತೂ ಪ್ರೇಮವೇ ಇರಲಿಲ್ಲ, ಆದರೇನು ? ನಾನು ಮೊದಲಿನಂತೆ ಹುಡುಗಿಯಾಗಬಲ್ಲೆನೇ ? ನಮ್ಮಮ್ಮ ಪುನಃ ನಾಯಬಲ್ಲಳೆ ?

ಹೊಸ ಜೀವನವನ್ನು ಕಟ್ಟುವ ಹುರುಪಿನಿಂದ ನಾವು ಪುನಃ ಈ ಮನೆಯನ್ನು ಪ್ರವೇಶಿಸಬಲ್ಲವೆ ? ಹಳೆಯದನ್ನು ನೆನೆಸಿಕೊಂಡೇನು ಫಲ "

ಪುನಃ ಗಳಿಗೆಯ ಹೊತ್ತು ತಡೆದು " ಹೆಂಗಸರು ತಮ್ಮ ಹಿಂದಿನ ಜೀವನವನ್ನು ನೆನೆಸಿಕೊಂಡು ವಿಸ್ಮಿತರಾಗುತ್ತಾರೆ. ಗಂಡಸರಿಗೂ ಹಾಗಾಗುತ್ತದೆಂದು ಕೊಂಡಿದ್ದೇನೆ. ಅಂದಿನ ದಿನಗಳ ಪ್ರೇಮವನ್ನು ಜ್ಞಾಪಿಸಿಕೊಂಡು ಏನೇನೋ ಎಂದುಕೊಳ್ಳುತ್ತಾರೆ. ಆದರೆ ಜೀವನದಲ್ಲಿ ಪ್ರೇಮವೊಂದೇ ಮುಖ್ಯವಾದುದಲ್ಲ. ಇತರ ಎಷ್ಟೋ ಮುಖ್ಯವಾದ ಅಂಶಗಳಿವೆ " ಎಂದಳು.

" ಮುಖ್ಯವಾದ ವಿಷಯಗಳೆಂದರೆ........"

" ಮಾತೃತ್ವ, ಸ್ತ್ರೀತ್ವ, ಕರ್ತವ್ಯ, ನಡತೆ........" ಎಂದು ಹೇಳುತ್ತಾ ನಕ್ಕಳು.

ಆ ನಗುವು ತಾಯಿಯು ನಗುವ ನಗುವಿನಂತಿತ್ತು.

" ನೀನು ಹೇಳುವುದು ಒಂದು ವಿಧವಾಗಿ ಸರಿ, ವಿಮಲಾ. ಇಲ್ಲಿಗೆ ಯಾರಾದರೂ ಬರುವುದರೊಳಗೆ ನಾನು ಮುಖ್ಯವಾದುದೊಂದು ವಿಷಯವನ್ನು ಮಾತನಾಡಬೇಕೆಂದಿದ್ದೇನೆ "

" ಅದು ಅಂತಹ ಮುಖ್ಯವಾದ ವಿಷಯವೇ ?"

" ಹೌದು. ಮೊದಲೇ ಹೇಳಿದಂತೆ ನೀನು ಪ್ರತಿ ಕ್ಷಣವೂ ನನ್ನ ಕಣ್ಣು ಮುಂದೆಯೇ ಇದ್ದೆ. ನನಗೆ ಈಗ ಇಲ್ಲಿ ಬರುವ ಕೆಲಸವಿರಲಿಲ್ಲ. ನೀನು ಹೇಗಿದ್ದೀ. ಕಾಲವು ನಿನ್ನ ಮೇಲೆ ಏನು ಪರಿಣಾಮವನ್ನು ಮಾಡಿದೆ–ಎಂದು ನೋಡಿಕೊಂಡು ಹೋಗುವುದಕ್ಕಾಗಿಯೇ ಬಂದೆ. ಅದೇ ಮುಖ. ಅದೇ ಮುಖಭಾವ. ಅದೇ ಪ್ರಕಾಶಮಾನವಾದ ಕಣ್ಣುಗಳು. ಅದೇ ಆನಂದ. ಅದೇ ಮನೋಭಾವ " ಎಂದು ಹೇಳಿ ತಡೆದು " ವಿಮಲಾ. ನಾನು ಪುನಃ ಬರುವುದರೊಳಗೆ ಬಡತನ ಕಷ್ಟಗಳು ನಿನ್ನನ್ನು ಹಾಕಿ ಅರೆದಿವೆ. ಎಷ್ಟೋ ದುಃಖವು ಬಂದಿದೆ. ಎಂತಹ ಹೆಂಗಸೇ ಆದರೂ ಇವುಗಳನ್ನು ತಡೆದುಕೊಳ್ಳಲಾರಳು. ನೀನು ತಡೆದುಕೊಂಡಿದ್ದೀಯೆ. ಸ್ತ್ರೀತ್ವದ ಈ ಉಚ್ಚ ಆದರ್ಶವು ನನ್ನ ತಲೆಯು ಬಾಗುವಂತೆ ಮಾಡಿದೆ " ಎಂದನು.

ಅವಳಿಗೆ ಅಳುವು ಬಂದುಬಿಟ್ಟಿತು. ಬಿಕ್ಕಿಬಿಕ್ಕಿ ಅಳಲು ಮೊದಲು ಮಾಡಿದಳು.

" ಅಳಬೇಡ, ವಿಮಲಾ. ನೀನು ಅಳುವುದರಿಂದ ನನಗೆ ಬಹಳ ದುಃಖವಾಗುತ್ತದೆ. ನಾನು ಆಡಬೇಕೆಂದಿರುವ ಮಾತು ಕೇಳು. ನಾನು ನಿನಗೆ ಸ್ವಲ್ಪ ಸಾಲ ಕೊಟ್ಟು ಹೋಗಬೇಕೆಂದು ಕೊಂಡಿದ್ದೇನೆ "

" ಬೇಡ. ಈಗ ಸದ್ಯದಲ್ಲಿ ನಮಗೆ ಅಷ್ಟು ಕಷ್ಟವಿಲ್ಲ. ತಿಂಗಳ ಹಿಂದೆ ಶೀಲಾಗೆ ಕ್ರಾಸ್ ವರ್ಡ್‌ನಲ್ಲಿ ಐನೂರು ರೂಪಾಯಿ ಬಂದಿತು. ಇದ್ದ ಸಾಲಸೋಲಗಳನ್ನು ತೀರಿಸಿಬಿಟ್ಟೆವು. ನನಗೆ ಜೀವನದಲ್ಲಿ ವಿಚಿತ್ರವಾದು ದೊಂದು ಅನುಭವವಾಗಿದೆ. ಅತ್ಯಂತ ಕಷ್ಟವು ಬಂದು ತಡೆದುಕೊಳ್ಳಲಾ ರದೇ ಇರುವಾಗ ದೇವರು ಯಾವುದಾದರೊಂದು ಬಗೆಯಾಗಿ ಸಹಾಯ ಮಾಡುತ್ತಾನೆ "

" ಶೀಲಾ ಕ್ರಾಸ್ ವರ್ಡ್‌ನಲ್ಲಿ ಗೆದ್ದಳೇ ? ಭೇಷ್. ಎಲ್ಲಿ, ಅವಳು ಕಾಣಲೇ ಇಲ್ಲವಲ್ಲ "

" ನಿಮಗೆ ಹೇಳಲೇ ಇಲ್ಲ. ಅವಳು ಗಮಕಿಗಳಲ್ಲಿ ಗದುಗಿನ ಭಾರತ ಓದಲು ಕಲಿಯುತ್ತಿದ್ದಾಳೆ. ಅಲ್ಲಿಗೆ ಹೋಗಿರಬಹುದು "

" ನನ್ನ ಮಾತು ಕೇಳು, ವಿಮಲಾ. ನನ್ನ ಬಳಿ ಹಣ ತೆಗೆದು ಕೊಂಡರೆ ಪರವಾಯಿಲ್ಲ. ನಾನೊಂದು ಸ್ವಲ್ಪ ಕೊಟ್ಟು ಹೋದರೆ ನನಗೆ ಕಷ್ಟವಾಗುತ್ತದೆಂದು ಕೊಂಡಿದ್ದೀಯಾ ? ಹಣವಿದ್ದರೆ ಸಮಯದಲ್ಲಿ ಕೈ ಕಾಯುತ್ತದೆ........"

ಅವನು ವಿಮಲೆಯ ಕಡೆಗೆ ಬಗ್ಗಿ ಆ ಮಾತು ಹೇಳುತ್ತಿದ್ದನು. ಮುಂದೆ ಮಾತನಾಡುವುದರಲ್ಲಿ ಅವನ ಕಣ್ಣುಗಳಲ್ಲಿ ನೀರು ತುಂಬಿ ಬಂದಿತು ಕತ್ತು ಕಟ್ಟಿಕೊಂಡಿತು.

" ವಿಮಲಾ. ನನ್ನ ಕಾಣಿಕೆಯನ್ನು ಕೊಡುವುದರಿಂದ ನಾನು ಆನಂದಿತವಾಗುವುದಾದರೆ–ನೀನದನ್ನು ತಿರಸ್ಕರಿಸುವುದರಿಂದ ನಾನು ದುಃಖ ಭಾರವಾದ ಹೃದಯದಿಂದ ಹಿಂತಿರುಗುವಂತಾದರೆ........"

" ಬೇಡ. ನನ್ನ ಮಾತು ಕೇಳಿ, ಈಗ ಬೇಡ........ನಾನು ಈಗೇನೂ ತೆಗೆದುಕೊಳ್ಳಲಾರೆ. ಅಂತಹ ಅವಶ್ಯಕತೆ ಈಗೇನಿರುವುದು ? ಶಂಕರನಿಂ

ದಲೂ ವರದೆಯಿಂದಲೂ ಏನೋ ಒಂದು ಬಗೆಯಾಗಿ ಸಂಸಾರವು ನಡೆಯು ತ್ತದೆ. ಅಷ್ಟಕ್ಕೂ ನನಗೆ ಹಣವೇಕೆ ? ನಾನು ತೀರಿಸಿಕೊಳ್ಳಬೇಕಾದ ಆಸೆ ಯೇನಿದೆ........"

ಅವಳು ಮುಂದೆ ಮಾತನಾಡುವುದರಲ್ಲಿ ನಟರಾಜನು " ವಿಮಲಾ. ಈಗ ನಿನಗೇನು ಇಪ್ಪತ್ತು ಮೂರು, ಇಪ್ಪತ್ತ ನಾಲ್ಕು ವರ್ಷಗಳಿರಬಹುದೇ?" ಎಂದನು.

" ಹೆಚ್ಚು ಕಡಿಮೆಯಾಗಿ ಅಷ್ಟಷ್ಟೇ "

" ಈಗಲೇ ಮುದುಕಿಯಾಗಿ ಬಿಟ್ಟೆಯೇನು ?"

" ಹಾಗಲ್ಲ. ವಯಸ್ಸಿನ ಮೇಲೆ ಅದನ್ನು ನಿರ್ಣಯಿಸಬಾರದು. ನನಗೆ ಕಂಡು ಬರುವಂತೆ ನನ್ನ ಜೀವನವೇ ಮುಗಿದು ಹೋಗಿದೆ. ಈಗೇ ನಾದರೂ ಆಗಬೇಕಾದರೆ ಶಂಕರ, ವಾಸು, ಶೀಲಾ ವರದೆಯರಿಗಾಗಬೇಕು. ಅವರ ಜೀವನವೇ ಬದಲಾಗುವಂತೆ ದೇವರು ಕಣ್ಣೆತ್ತಿ ನೋಡಬೇಕು. ಅವರ ವಯಸ್ಸಿನವರೆಲ್ಲರೂ ಎಷ್ಟೊ ಆನಂದವಾಗಿದ್ದಾರೆ. ಅವರಿಗೆ ಏನಿದೆ ?"

" ನಿನ್ನಂತಹ ಸಹೋದರಿ ಇದ್ದಾಳೆ "

" ಅವರು ಹೇಳುತ್ತಿರುವುದೂ ಅದೇ. ಹೇಗೋ ನಾವು ನಮ್ಮ ಅದೃಷ್ಟದ ದಿನಗಳಿಗಾಗಿ ಬದುಕಿರಬೇಕು. ಬದುಕಿದ್ದು ಕಾಯಬೇಕು. ಕಾಯುವಾಗ ನಗುನಗುತ್ತಿರಬೇಕು"

"ನಿಮ್ಮ ತಂದೆಯು ಸಾಯುವ ಮೊದಲು ಬ್ಯಾಂಕಿನಿಂದತೆಗೆದುಕೊಂಡ ಬಾಂಡುಗಳ ವಿಷಯವೇನಾದರೂ ಗೊತ್ತಾಯಿತೇನು ?"

" ಇಲ್ಲ. ಅಮ್ಮನೇ ಅವುಗಳನ್ನು ಮಾರಿಬಿಟ್ಟಿರಬೇಕು. ಎಲ್ಲ ಕಡೆಯೂ ವಿಚಾರಿಸಿದೆವು. ಒಂದೂ ಗೊತ್ತಾಗಲಿಲ್ಲ "

ಶಂಕರನು ಬಂದನು. ಅವನ ತಲೆ ಎಲ್ಲವೂ ಗಾಳಿಯಿಂದ ಕೆದರಿ ಹೋಗಿದ್ದಿತು. ಆಗ ಸುಮಾರು ಆರುಗಂಟೆಯಾಗಿರ ಬಹುದು. ಆದರೆ ಮೋಡಗಳು ಆವರಿಸಿದ್ದರಿಂದ ಸ್ವಲ್ಪ ಕತ್ತಲಾಗಿದ್ದಂತೆ ಇದ್ದಿತು. ಬಾಗಿಲು ಗಳೂ ಕಿಟಕಿಗಳೂ ಹೊಡೆದುಕೊಳುತ್ತಿದ್ದವು. ಗಾಳಿಯು ರೊಯ್ಯನೆ ಬೀಸುವ ಶಬ್ದವು ಕೇಳಿಬರುತ್ತಿದ್ದಿತು. ವಾಸುವು ಓಡಿ ಓಡುತ್ತಾ ಬಂದನು. ಶೀಲೆಯು ಬಂದಳು. ನಟರಾಜನನ್ನು ನೋಡಿ ನಕ್ಕಳು. ತನ್ನ ಮೃದು

ವಾದ ದನಿಯಿಂದ ವೆಂಕಟರಾಯನಿಂಗ ಅಕ್ಕನಿಗೆ ಕಾಗದವು ಬಂದು ತಿಂಗಳು ಗಳ ಗಟ್ಟಲೆಯಾಯಿತೆಂದು ಹೇಳಿದಳು. ಅದನ್ನು ಕೇಳಿ ವಿಮಲೆಯು ಎಲ್ಲಿಯೋ ನೋಡುತ್ತಾ ತಟ್ಟೆಗಳಲ್ಲಿ ಉಪ್ಪಿಟ್ಟು ಹಾಕತೊಡಗಿದಳು. ನಟರಾಜನಿಗೆ ಮರೆಯಾಗಿದ್ದ ಅವಳ ಮುಖವು ಕಾಣದೇ ಇದ್ದುದರಿಂದ ಅವಳ ಕೃಶವಾದ ದೇಹವನ್ನು ನೋಡುತ್ತಿದ್ದನು.

ಎಲ್ಲರೂ ಉಪ್ಪಿಟ್ಟು ತಿಂದರು.

ಶಂಕರನು ಅತ್ಯುತ್ಸಾಹದಿಂದ ನಟರಾಜನ ಪರ್ವತಾರೋಹಣದ ಕತೆ ಯನ್ನು ಕೇಳತೊಡಗಿದನು. ಬೆಳಗಿನಿಂದ ಕೆಲಸ ಮಾಡಿ ಸಪ್ಪಗಾಗಿದ್ದ ಅವನ ಮುಖವು ಸಾಹಸ ಪೂರ್ಣವಾದ ಆ ವೃತ್ತಾಂತಗಳನ್ನು ಕೇಳಿ ಕಳೆ ಗೂಡುತ್ತಾ ಬಂದಿತು. ಅವರಿಬ್ಬರೂ ಮಾತು ಆರಂಭಿಸುತ್ತಲೇ ವಿಮಲೆಗೆ ಅಡಿಗೆಯ ಕೆಲಸಗಳನ್ನು ಮಾಡಲು ಬಿಡುವು ಸಿಕ್ಕಿತು. ಅವಳು ಬೇಳೆಯು ಬೆಂದಿದ್ದ ಕಂಚು ತೆಗೆದು ಪಕ್ಕದಲ್ಲಿಟ್ಟು, ಅಕ್ಕಿಯನ್ನು ತೊಳೆದು ಒಲೆಯ ಮೇಲಿಟ್ಟಳು.

ನಟರಾಜನು "ನಾನೇನು ಈ ರಾತ್ರಿ ಊಟಕ್ಕೆ ಇರಬೇಕೇನು ?" ಎಂದು ಕೇಳಿದನು.

ವಿಮಲೆಯು ನಗುತ್ತಾ "ಇರಬೇಕಾಗಿಲ್ಲ. ಆದರೆ ನೀವು ಇದ್ದೇ ಇರುತ್ತೀರಿ" ಎಂದಳು.

ಅವನಿಗೇನು ಮಾತನಾಡಬೇಕೋ ತೋರಲಿಲ್ಲ.

ಶಂಕರನು "ವಿಮಲಾ. ಅಪರೂಪವಾಗಿ ಬಂದಿದ್ದಾರೆ. ಒಂದಿಷ್ಟು ಹಪ್ಪಳ ಸಂಡಿಗೆಗಳನ್ನಾದರೂ ಕಡೆಯಬಾರದೆ ?" ಎಂದನು.

ಶೀಲೆಯು "ಅಣ್ಣನೇನೋ ಹೇಳಿದ. ನಮಗೂ ಸಂತೋಷವೇ ! ಆದರೆ ಡಬ್ಬಾದಲ್ಲಿ ಎಣ್ಣೆ ಇರುವುದೋ ಇಲ್ಲವೋ ನೋಡುತ್ತೇನೆ" ಎಂದು ನೋಡಿದಳು.

ಡಬ್ಬಾದಲ್ಲಿ ಸ್ವಲ್ಪ ಎಣ್ಣೆ ಇದ್ದಿತು.

ಅಡಿಗೆಯಾಗಿ ಊಟಕ್ಕೆ ಕುಳಿತುಕೊಳ್ಳುವ ವೇಳೆಗೆ ಕುಂಭದ್ರೋಣ ವಾಗಿ ಮಳೆಯು ಬೀಳತೊಡಗಿತು. ಮನೆಯಲ್ಲಿ ಕೆಲವು ಕಡೆ ಸೋರು

ತ್ತಿದ್ದರೂ ಹಜಾರದಲ್ಲಿಯೂ ಅದರ ಪಕ್ಕದ ಸಣ್ಣ ಕೋಣೆಯಲ್ಲಿಯೂ ಮತ್ತು ಅಡಿಗೆಯ ಮನೆಯಲ್ಲಿಯೂ ಸೋರುತ್ತಿರಲಿಲ್ಲ. ಸಾವಿತ್ರಮ್ಮನವರು ರಾತ್ರಿಯ ಹೊತ್ತು ಊಟ ಮಾಡುತ್ತಿರಲಿಲ್ಲ. ಅವರು ಹಜಾರದ ಒಂದು ಕೊನೆಯಲ್ಲಿ ಹಾಸಿಗೆಯ ಮೇಲೆ ಮಲಗಿದ್ದರು. ಅವರಿಗೆ ಎಚ್ಚರವಾಗಿಯೇ ಇದ್ದಿತು. ಅತ್ತಕಡೆಯೇ ಇದ್ದ ಸಣ್ಣ ಕೋಣೆಯಲ್ಲಿ ಪುಷ್ಪಳು ಮಲಗಿ ನಿದ್ದೆ ಮಾಡುತ್ತಿದ್ದಳು.

ಶೀಲೆಯೂ ವರದೆಯೂ ದೀಪವನ್ನು ಎಲ್ಲ ಕಡೆಗೂ ಕಾಣುವಂತೆ ಒಂದು ಸಣ್ಣ ಮುಕ್ಕಾಲು ಮಣೆಯ ಮೇಲಿಟ್ಟು ತಟ್ಟೆಗಳನ್ನು ಹಾಕಿದರು. ನಟರಾಜನಿಗೆ ಬಾಳೆಯ ಎಲೆಯನ್ನು ಹಾಕಿದರು. ಉಪ್ಪಿನಕಾಯಿ, ಹಪ್ಪಳ ಸಂಡಿಗೆ ಮತ್ತು ಅನ್ನ ಇವುಗಳನ್ನು ಒಂದು ಬಾರಿ ಬಡಿಸಿ ಅವರುಗಳೂ ಊಟಕ್ಕೆ ಕುಳಿತುಕೊಂಡರು.

ನಟರಾಜನ ಎಲೆಯನ್ನು ಮೊದಲು ಹಾಕಿದ್ದಿತು. ವಿಮಲೆಯು ಒಂದು ಕೈಯಲ್ಲಿ ಸಣ್ಣ ಕೊಳದಪ್ಪಲೆಯನ್ನು ಹಿಡಿದು ಬಲಗೈಯಲ್ಲಿ ಸೌಟು ಹಿಡಿದು ಬಡಿಸುವುದಕ್ಕೆ ಬಂದಳು. ಸೆರಗನ್ನು ಬಿಗಿಯಾಗಿ ಎಳೆದು ಸಿಕ್ಕಿಸಿ ಕೊಂಡು, ಸೀರೆಯ ನೆರಿಗೆಯನ್ನು ಮುದುರಿಕೊಂಡು ಬಂದ ಅವಳನ್ನು ನಟರಾಜನು ನೆಟ್ಟ ನೋಟದಿಂದ ನೋಡಿದನು. ಬಡಿಸಲು ಬಂದು ನಿಂತಿರುವ ವಿಮಲೆಯನ್ನು ನೋಡಿ ಇಂತಹ ರೂಪವತಿಯಾದ ಹೆಂಗಸನ್ನು ತಾನು ಕಂಡೇಇಲ್ಲವೆಂದುಕೊಂಡನು. ಹಿಂದೆ ಅವನು ವಿಮಲೆಯನ್ನು ಎಷ್ಟೋ ಬಾರಿ ನೋಡಿದ್ದನು. ಈಗ ಕಂಡಷ್ಟು ಆಕರ್ಷಕವಾಗಿ ಅವನಿಗೆಂದೂ ಅವಳುಕಂಡಿರಲಿಲ್ಲ.

ಊಟ ಮಾಡುತ್ತಾ ಶಂಕರನು ನಟರಾಜನನ್ನು ಕುರಿತು " ನೀವು ಇನ್ನೂ ಎಷ್ಟು ದಿನ ಈ ಊರಿನಲ್ಲಿರುತ್ತೀರಿ ?" ಎಂದು ಕೇಳಿದನು.

" ಈದಿನ ರಾತ್ರಿ ಮಾತ್ರ "

ಅವನು " ಅಯ್ಯೋ ಇದೇನು ?" ಎಂದನು.

ಶಂಕರನು ನಟರಾಜನು ಹೇಳಿದ ಮಾತಿಗೆ " ಅಯ್ಯೋ ಇದೇನು ?" ಎಂದನು. ಆದರೆ ಅಂತಹ ಪರಿಸ್ಥಿತಿಯೇ ಬಂದೊದಗಿತು. ಪ್ರಚಂಡ ಮಾರುತವೊಂದು ಬೀಸಿತು. ಬಾಗಿಲು ಪಟಾರನೆ ಬೀಸಿ ದೀಪವು ಆರಿತು.

ಮಳೆಯು ಇರುಚಲು ಹೊಡೆಯುವುದಕ್ಕೆ ಆರಂಭವಾಯಿತು. ದೂರದಲ್ಲಿ ಸಿಡಿಲು ಬಡಿದ ಕಠೋರವಾದ ಶಬ್ದವು ಕೇಳಿಬಂದಿತು. ಮನೆಯ ಹತ್ತಿರದ ಯಾವುದೋ ಮರದ ಕೊಂಬೆಯು ಕಟಕಟನೆ ಮುರಿದ ಧ್ವನಿಯು ಕೇಳಿಸಿತು. ಅದೇ ಕ್ಷಣದಲ್ಲಿ ಭೀಕರವಾದ ಶಬ್ದವೊಂದಾಗಿ ಮನೆಯ ಚಾವಣಿಯೂ ಗೋಡೆಗಳೂ ಕೆಳಗುರುಳಿದಂತಾಯಿತು.

ಯಾರಿಗೂ ಮೈಮೇಲೆ ಜ್ಞಾನವಿರಲಿಲ್ಲ. ಎಲ್ಲರೂ ಹೆದರಿ ಹೊರಗೋಡಿ ಬಂದರು. ಆ ಅವಾಂತರದಲ್ಲಿ ಯಾರು ಎಲ್ಲಿದ್ದಾರೆಂದು ಒಬ್ಬರಿಗೂ ಗೊತ್ತಾಗಲಿಲ್ಲ.

ಆದರೆ ನಟರಾಜನು ಸ್ವಲ್ಪ ಹೊತ್ತಿನಲ್ಲಿಯೇ ಸಾವಿತ್ರಮ್ಮನವರನ್ನು ಹೊರಗೆತ್ತಿಕೊಂಡು ಬಂದನು. ಹೊರಗೆ ಬಂದವನು " ವಿಮಲಾ-ವಿಮಲಾ " ಎಂದು ಕೂಗಿದನು.

ಹೆಣ್ಣು ಧ್ವನಿಯೊಂದು " ವಿಮಲೆಯು ಇಲ್ಲಿಲ್ಲ. ರೂಮಿನಲ್ಲಿ ಮಲಗಿದ್ದ ಪುಷ್ಪಳನ್ನು ಕರೆದುಕೊಂಡು ಬರಲು ಹೋಗಿದ್ದಾಳೆ" ಎಂದು ಹೇಳಿತು.

ನಟರಾಜನು ಕರೆದನು. ಯಾರೋ ಬಂದು ಸಾವಿತ್ರಮ್ಮನವರನ್ನು ಹಿಡಿದುಕೊಂಡು ಅವರ ಮೇಲೆ ಮಳೆ ಬೀಳದಂತೆ ಅಡ್ಡವಾಗಿ ನಿಂತುಕೊಂಡರು.

ಪುನಃ ನಟರಾಜನು " ವಿಮಲಾ-ವಿಮಲಾ " ಎಂದು ಕೂಗಿಕೊಂಡು ಒಳಗೆ ಹೋದನು. ಒಳಗೆಲ್ಲಿಯೋ " ಬರುತ್ತಿದ್ದೇನೆ " ಎಂಬ ಧ್ವನಿಯು ಕೇಳಿಸಿತು.

ಅವನು ಕತ್ತಲೆಯಲ್ಲಿ ಧ್ವನಿ ಬಂದ ಕಡೆಗೆ ಹೋದನು. ದಾರಿಯಲ್ಲಿ ಏನೇನೋ ಬಿದ್ದಿದ್ದವು. ಒಮ್ಮೆ ಮಿಂಚು ಮಿಂಚಿತು. ಅದರ ಬೆಳಕಿನಲ್ಲಿ ಅವನು ವಿಮಲೆಯನ್ನು ನೋಡಿದನು. ಆದರೆ ಆ ನೋಟವು ಭೀಕರವಾದ ದೃಶ್ಯ. ನೋಡದೇ ಬರುವಾಗ ತೊಲೆಯು ಅವಳ ಹೊಟ್ಟೆಗೆ ತಗುಲಿ " ಅಯ್ಯೋ " ಎಂದು ಕೂಗಿಕೊಂಡು ಕೆಳಗೆ ಬಿದ್ದಳು.

ನಟರಾಜನು ಮುಂದೆ ಹೋಗಿ ಅವಳನ್ನು ಎಬ್ಬಿಸಿದನು. ಕಿರಾರನೆ ಕಿರುಚಿಕೊಳ್ಳುತ್ತಿದ್ದ ಮಗುವನ್ನು ಎತ್ತಿಕೊಂಡನು. ವಿಮಲೆಯನ್ನು ನಡೆಸಿಕೊಂಡು ಮುಂದೆ ಬಂದನು.

ಅಷ್ಟು ಹೊತ್ತಿಗೆ ಇವರಿಬ್ಬರನ್ನೂ ಹುಡುಕಿಕೊಂಡು ಶಂಕರನೂ ಬಂದನು. ಅವನು ನಟರಾಜನ ಕೈಯಿಂದ ಮಗುವನ್ನು ಎತ್ತಿಕೊಂಡನು.

ಪಕ್ಕದಲ್ಲಿದ್ದ ಮರದ ದೊಡ್ಡದೊಂದು ಕೊಂಬೆಯು ಮನೆಯ ಮೇಲೆ ಬಿದ್ದಿತ್ತು. ಹಳೆಯ ಮನೆಯ ಒಂದು ಭಾಗವು ಮುರಿದು ಕೆಳಗೆ ಬಿದ್ದಿತು. ಅಡಿಗೆ ಮನೆಯ ಕಡೆ ಎಲ್ಲವೂ ಸರಿಯಾಗಿದ್ದಿತು. ಅಡಿಗೆಯ ಮನೆಯಲ್ಲಿ ಒಲೆಯಲ್ಲಿ ಬೆಂಕಿ ಇದ್ದಿತು.

ಶಂಕರನೂ ನಟರಾಜನೂ ವಿಮಲೆಯನ್ನೂ, ಅವಳ ಮಗುವನ್ನೂ ಅಡಿಗೆಯ ಮನೆಯಲ್ಲಿ ಕೂರಿಸಿದರು. ಹೊರಗೆ ಹೋಗಿ ಸಾವಿತ್ರಮ್ಮನವ ರನ್ನು ಎತ್ತಿಕೊಂಡು ಬಂದರು. ಆರಿ ಹೋಗಿದ್ದ ದೀಪವನ್ನು ಹಚ್ಚಿಟ್ಟರು. ಹುಡುಗರೆಲ್ಲರೂ ಒಳಗೆ ಬಂದರು.

ಆದರೆ ಸಾವಿತ್ರಮ್ಮನವರ ಪ್ರಾಣವು ಹೋಗಿತ್ತು. ದೀಪದ ಬೆಳಕಿನಲ್ಲಿ ಅವರ ತಲೆಗೆ ಪೆಟ್ಟು ಬಿದ್ದು ಗಾಯವಾಗಿರುವುದು ಕಂಡುಬಂದಿತು. ಆ ರಕ್ತವೂ ಮಳೆಯ ನೀರಿನಲ್ಲಿ ತೊಯ್ದು ಹೋಗಿತ್ತು.

*

೨೨

ಎರಡು ದಿನಗಳ ನಂತರ ಸಂಧ್ಯಾಕಾಲ ವಿಮಲೆಯು ಪಾಣೀ ವಿಲಾಸ ಆಸ್ಪತ್ರೆಯ ಸ್ಪೆಷಲ್ ವಾರ್ಡಿನಲ್ಲಿ ಮಲಗಿದ್ದಳು. ಅವಳ ಬಿಳಿಚಿಕೊಂಡಿದ್ದ ಪ್ರಶಾಂತವಾದ ಮುಖಕ್ಕೆ ಅವಳು ಮಲಗಿದ್ದ ಬಿಳಿಯ ಹಾಸಿಗೆಯೂ, ತಲೆಯಿಟ್ಟುಕೊಂಡಿದ್ದ ಬಿಳಿಯ ದಿಂಬೂ ಹಿನ್ನೆಲೆಯಂತೆ ಕಂಡು ಬರುತ್ತಿದ್ದವು.

ಅವಳ ಮುಖದಂತೆ ಅವಳ ದೇಹವೂ ಮತ್ತು ಮನಸ್ಸೂ ಶಾಂತವಾಗಿರಲಿಲ್ಲ. ಆದರೆ ದೇಹದ ಪ್ರಖರವಾದ ಯಾತನೆ ಮತ್ತು ಆಪರೇಷನ್ನಿನ ಅಪಾಯಗಳು ಕಳೆದುಹೋಗಿದ್ದವು. ಈ ದಿನ ಮಧ್ಯಾಹ್ನ ಅವಳು ಸ್ವಲ್ಪ ಆಹಾರವನ್ನು ತೆಗೆದುಕೊಂಡಿದ್ದಳು. ಅದರಿಂದ ಸ್ವಲ್ಪ ಶಕ್ತಿಯು ಬಂದು ಮಾತನಾಡುವಂತಿದ್ದಿತು. ಪಕ್ಕದಲ್ಲಿ ಹಾಕಿದ್ದ ಕುರ್ಚಿಯ ಮೇಲೆ ಶಂಕರನು ಕುಳಿತು ಅವಳೊಡನೆ ಮಾತನಾಡುತ್ತಿದ್ದನು.

ಮೂರು ದಿನಗಳ ಹಿಂದಿನ ರಾತ್ರಿ ಗಾಳಿ ಬೀಸಿದುದೂ, ಮಳೆ ಬಂದುದೂ, ಮನೆಯು ಬಿದ್ದುದೂ, ತನಗೆಅಪಾಯುವಾದುದೂ ನೆನಪಿದ್ದಿತು. ಅವಳ ಹೊಟ್ಟೆಗೆ ಪೆಟ್ಟು ತಗುಲಿದ್ದಿತು. ಅದರಿಂದ ಆಪರೇಷನ್ ಸಹ ಆಗಿತ್ತು. ಅದಷ್ಟು ವಿಮಲೆಗೆ ನೆನಪಿದ್ದಿತು. ಅದರ ಮೊದಲಿನ ಮನೆ-ಸಂಸಾರಗಳ ಅರಿವುಗಳೂ ಇದ್ದವು. ಆದರೆ ಆಸ್ಪತ್ರೆಯಲ್ಲಿ ಮಲಗಿದ್ದ ಅವಳಿಗೆ ಅವುಗಳೆಲ್ಲವೂ ಸ್ವಪ್ನದಂತೆ ಭಾಸವಾಗುತ್ತಿದ್ದವು.

ನಡೆದ ಅನಾಹುತವನ್ನು ಕುರಿತು ಮಾತನಾಡಿದ ಶಂಕರನ ಮಾತಿಗೆ ಮರುಮಾತಾಗಿಯೋ, ಉತ್ತರವಾಗಿಯೋ ವಿಮಲೆಯು " ನಾವು ಬಡವರಾ

ಗಿರಬಹುದು, ಶಂಕರ. ಆದರೆ ಪುಷ್ಪಳಿಗೆ ತವ್ಮನಿಲ್ಲವೆಂಬುದು ಮನಸ್ಸಿಗೇನೋ ಒಂದು ಬಗೆಯಾಗಿದೆ " ಎಂದಳು,

" ಅದು ಸರಿ. ಆದರೆ ಯಾವ ಮಗುವೂ ನಮಗೆ ಪುಷ್ಪಳಷ್ಟು ಪ್ರಿಯವಾಗುವುದಿಲ್ಲ "

ಆ ಮಾತಿಗೆ ವಿಮಲೆಯು ನಕ್ಕುಬಿಟ್ಟಳು.

" ವಿಮಲಾ. ವರದೆಯು ನಿನಗೆ ಅತ್ತೆಯ ವಿಷಯವೆಲ್ಲವನ್ನೂ ಹೇಳಿದಳೇನು ?"

" ಆ ರಾತ್ರಿಯೇ ನನಗೆ ಒಂದು ವಿಧವಾಗಿ ಗೊತ್ತಾಗಿದ್ದಿತು. ಈ ದಿನ ಬೆಳಗಾಗ ವರದಾ ಪುಷ್ಪಳನ್ನು ಕರೆದುಕೊಂಡು ಬಂದಿದ್ದವಳು ಎಲ್ಲವನ್ನೂ ವಿವರವಾಗಿ ಹೇಳಿದಳು. ಅತ್ತೆ ಸತ್ತುದು ದುಃಖವಿಲ್ಲವೆಂದು ನಾನು ಹೇಳುವುದಿಲ್ಲ. ಹನ್ನೆರಡು ಹದಿಮೂರು ವರ್ಷಗಳಿಂದ ಅವಳ ಬುದ್ಧಿಯು ಸರಿಯಾಗಲಿಲ್ಲ. ಮೈ ಚೆನ್ನಾಗಿರಲಿಲ್ಲ. ಆದರೆ ಅನಾಹುತವಾಗಿ ಸಾಯಬಾರದಾಗಿದ್ದಿತು, ಅಷ್ಟೇ "

ಶಂಕರನು " ಆದರೆ ಅತ್ತೆ ಇಲ್ಲದಿರುವುದು ಮನೆಯು ಭಿಂಎನ್ನುವಂತಾಗಿದೆ. ಶೀಲೆಯು ಅತ್ತೆಗಾಗಿ ಕೊರಗುತ್ತಿದ್ದಾಳೆ. ವಿಮಲಾ, ಅತ್ತೆಯ ಮರಣದಿಂದ ಅವಳ ಹುಡುಗತನವು ಹೋಗಿರುವಂತಿದೆ. ಅವಳು ಮಂಕಾಗಿ ಹೋಗಿದ್ದಾಳೆ "

ವಿಮಲೆಯು ಕಣ್ಣಿನಲ್ಲಿ ನೀರು ತಂದುಕೊಂಡು " ಆದರೆ ನನಗೆ ಒಂದೇ ತೃಪ್ತಿ. ಅತ್ತೆ ಪರಲೋಕದಲ್ಲಿ ಅಮ್ಮ ಅಪ್ಪನನ್ನು ನೋಡಿದಾಗ ನಮ್ಮ ಮೇಲೆ ಏನೂ ದೂರು ಹೇಳುವಂತಿಲ್ಲ " ಎಂದಳು.

ಶಂಕರನು ಪ್ರಕಾಶ ರಹಿತವಾದ ನಗುವನ್ನು ನಗುತ್ತಾ " ಅಮ್ಮ ಅಪ್ಪನ ಬಳಿ ದೂರು ಹೇಳುವುದೆಲ್ಲಿ ಬಂದಿತು. ಅವರು ಇಷ್ಟು ಬಡತನದಲ್ಲಿಯೂ ಅತ್ತೆಯನ್ನು ಸರಿಯಾಗಿ ನೋಡಿಕೊಂಡರಲ್ಲ–ಎಂದು ಸಂತೋಷಪಡುತ್ತಾರೆ " ಎಂದನು.

ಅನಂತರ ಶಂಕರನು ಮಾತನಾಡಲು ಹೋಗಿ ಆಡಲು ಸಂಕೋಚಪಟ್ಟುಕೊಂಡು ನಿಲ್ಲಿಸುತ್ತಿದ್ದನು.

ಅದಕ್ಕೆ ವಿಮಲೆಯು " ನೀನೇನೂ ಸಂಕೋಚ ಪಡಬೇಕಾಗಿಲ್ಲ,

ಶಂಕರ. ನನಗೆ ಆರೋಗ್ಯವಾಗಿದೆ. ನನ್ನ ಮನಸ್ಸಿಗೆ ಎಂತಹ ದುಃಖವನ್ನು ಬೇಕಾದರೂ ತಡೆದುಕೊಳ್ಳುವಂತಹ ಶಕ್ತಿಯಿದೆ. ವರದಾ ನನಗೆ ಎಲ್ಲವನ್ನೂ ಹೇಳಿದಳು. ನಮ್ಮ ಮನೆಯು ವಾಸಕ್ಕೆ ಅಯೋಗ್ಯವಾಗಿದೆಯಂತೆ " ಎಂದಳು.

" ಹೌದು. ಅದೇ ಹೇಳಬೇಕೆಂದಿದ್ದೆ. ಮನೆಯ ಕಿಟಕಿ ಬಾಗಿಲುಗಳು, ಹೆಂಚುಗಳೂ ಎಲ್ಲವನ್ನೂ ಬದಲಾಯಿಸಿ ಬೇರೆ ಹಾಕಬೇಕು. ಅಲ್ಲಿಯವರೆವಿಗೆ ಅಲ್ಲಿ ವಾಸ ಮಾಡುವಂತೆಯೇ ಇಲ್ಲ. ಅಡಿಗೆ ಮನೆ ಮತ್ತು ಬನರ ಪಕ್ಕದಲ್ಲಿ ಸ್ವಲ್ಪ ನಿಂತಿರುವ ಹಜಾರದ ತಾವಣಿಯ ಕೆಳಗೆ ವಾಸ ಮಾಡುತ್ತಿದ್ದೇವೆ "

" ಜೀವನವು ವಿಚಿತ್ರವಾಗಿದೆ, ಅಲ್ಲವೇ, ಶಂಕರ " ಎಂದು ಕೇಳಿ " ನಟರಾಜ್ ಮಾರನೆಯ ದಿನ ಬೆಳಿಗ್ಗೆ ಹೊರಟು ಹೋದರೇನು ? ' ಎಂದು ವಿಚಾರಿಸಿದಳು.

" ಇಲ್ಲ. ಹೀಗಾದುದರಿಂದ ಅವರು ಸದ್ಯದಲ್ಲಿ ಪ್ರಯಾಣವನ್ನು ನಿಲ್ಲಿಸಿದರು. ನಿನ್ನನ್ನು ಆಸ್ಪತ್ರೆಗೆ ಕರೆದುಕೊಂಡು ಬರುವಾಗ ಅವರೂ ಇದ್ದರು. ಆಗಲೇ ನಿನಗೆ ಜ್ಞಾನ ಹೋಗಿದ್ದಿತು. ನೀನು ಹುಷಾರಾದುದನ್ನು ನೋಡಿಕೊಂಡು ಹೋಗಬೇಕೆಂದಿದ್ದಾರೆ "

" ಹಾಗಾದರೆ ಅವರ ಪ್ರಯಾಣವು ನಿಂತುಹೋಯಿತು "

" ಹೌದು. ಆಪರೇಷನ್ ಆಗುವಾಗ ಇದ್ದರು. ಮೊನ್ನೆ ಅವರು ಬಂದಿದ್ದಾಗ ನಿನಗೆ ಜ್ಞಾನವಿರಲಿಲ್ಲ. ನಿನ್ನೆಯ ದಿನ ನಿದ್ದೆ ಬಂದಿತ್ತು "

" ಎರಡು ಬಾರಿ ಬಂದರು. ನೋಡಲಾಗಲಿಲ್ಲ. ನೋಡದೆಯೋ ಹೊರಟುಹೋಗುತ್ತಾರೆಯೋ ಏನೋ ?"

ಶಂಕರನು ಸುಮ್ಮನಿದ್ದನು.

ನರ್ಸ್ ಬಂದು ಬಾಗಿಲು ತೆಗೆದಳು. ನಟರಾಜನು ಒಳಗೆ ಬಂದನು. ವಿಮಲೆಯು ತನಗೆ ಉತ್ತರವು ಬಂದಿತೆಂಬಂತೆ ಅಣ್ಣನ ಕಡೆಗೆ ನೋಡಿದಳು.

ಶಂಕರನು " ನಿಮಗೆ ನೂರು ವರ್ಷ ಆಯಸ್ಸು. ಈಗ ತಾನೇ ನಿಮ್ಮ ಮಾತನ್ನಾಡುತ್ತಿದ್ದವು " ಎಂದನು.

ನಟರಾಜನು ಕುಳಿತುಕೊಂಡು " ನಿನ್ನ ದೇಹಸ್ಥಿತಿಯು ಹೇಗಿದೆ, ವಿಮಲಾ" ಎಂದನು.

" ಚೆನ್ನಾಗಿದೆ " ಎಂದು ಹೇಳಿ ವಿಮಲೆಯು ನಕ್ಕಳು.

ಶಂಕರನು ಏನೋ ನೆವ ಹೇಳಿ ಹೊರಗಡೆ ಹೋದನು. ನಟರಾಜನು ಅವನು ಕುಳಿತಿದ್ದ ಕುರ್ಚಿಯ ಮೇಲೆ ಹತ್ತಿರದಲ್ಲಿ ಕುಳಿತುಕೊಂಡು " ಹೇಗಿದ್ದೀಯೆ ?" ಎಂದು ಪುನಃ ಕೇಳಿದಳು.

ಅವಳು "ನನ್ನ ವಿಷಯ ಸರಿ. ನಿಮ್ಮ ಪ್ರಯಾಣವು ತಪ್ಪಿಹೋಯಿತಲ್ಲ " ಎಂದಳು.

" ಹೋದರೆ ಹೋಯಿತು ಬಿಡು. ಮೂರು ನಾಲ್ಕು ದಿನ ನಿಧಾನವಾದರೇನಾಯಿತು " ಎಂದು ನಿರಾಸಕ್ತಿಯಿಂದ ಹೇಳಿ, " ವಿಮಲಾ ! ಈ ಬಿಳಿಯ ಸೀರೆಯನ್ನುಟ್ಟು ನಿರಾತಂಕವಾಗಿ ಮಲಗಿರುವ ನಿನ್ನನ್ನು ನೋಡಿದರೆ, ಒಳ್ಳೆಯ ಸನ್ಯಾಸಿನಿಯಂತೆ ಕಂಡುಬರುತ್ತೀಯೆ " ಎಂದನು.

" ಹಾಗೂ ಆಗಬೇಕೆಂದು ಒಂದೊಂದು ಬಾರಿ ತೋರುತ್ತದೆ "

" ನಿಮ್ಮ ಅತ್ತೆ, ಪಾಪ, ಸತ್ತುಹೋದರು "

" ಪುಣ್ಯಾತ್ಮರ ಕೋರಿಕೆಗಳು ಈಡೇರುವುದಂತೆ. ನಮ್ಮ ಅತ್ತೆ ತಮ್ಮನನ್ನೂ ನಾದಿನಿಯನ್ನೂ ನೋಡಲು ಹಾತೊರೆಯುತ್ತಿದ್ದರು "

" ಎಷ್ಟು ದಿನ ಆಸಪತ್ರೆಯ ವಾಸ ?"

" ಇನ್ನೂ ವಾರ ಅಥವಾ ಹತ್ತು ದಿನಗಳಿರಬೇಕೆಂದು ಡಾಕ್ಟರು ಹೇಳಿದರು "

" ನಿಮಗೆ ಬಹಳ ಕಷ್ಟವು ಬಂದುಬಿಟ್ಟಿತು, ವಿಮಲಾ "

" ಬಂದಿತು. ಆದರೇನು ಮಾಡುವುದು ? ಅನುಭವಿಸಬೇಕಷ್ಟೇ "

" ಸಾಮಾನ್ಯ ಪರಿಸ್ಥಿತಿಯಲ್ಲಿ ನನ್ನ ಕಾಣಿಕೆಯನ್ನು ಬೇಡವೆಂದು ಹೇಳಿದೆ. ಈಗ ಅಸಾಧಾರಣವಾದ ಪರಿಸ್ಥಿತಿಯು ಏರ್ಪಟ್ಟಿದೆ. ಈಗ ತೆಗೆದುಕೊಳ್ಳಬಹುದಲ್ಲ——"

" ಆದರೂ ಅದು ಸರಿಯಲ್ಲ. ಇಂತಹ ಸಮಯದಲ್ಲಿ ನನಗೆ ಸಹಾಯ ಮಾಡಬೇಕಾದವರು ಎಲ್ಲಿಯೋ ಇದ್ದಾರೆ. ಶಂಕರನೂ, ನನ್ನ ತಂಗಿಯರೂ

ತಮ್ಮ ಕೈಲಾದ ಸಹಾಯಗಳನ್ನು ಮಾಡಲು ಸಿದ್ಧರಾಗಿದ್ದಾರೆ. ನಿಮ್ಮಿಂದ ಸಹಾಯವನ್ನು ಪಡೆಯುವುದು ಸರಿಯಲ್ಲ"

ಅವನಾಗಲೀ ಅವಳಾಗಲೀ ಆಡಿದ ಮಾತುಗಳಿಗೆ ಅರ್ಥವಿರಲಿಲ್ಲ. ಆದರೆ ಅವರ ಪರಸ್ಪರ ಪ್ರೇಮವು ಅತುಲವಾಗಿದ್ದಿತು. ಆ ದೈವೀ ಪ್ರೇಮವು ತಮ್ಮನ್ನು ಮಾನವ ಲೋಕದಿಂದ ನಕ್ಷತ್ರ ಲೋಕಕ್ಕೆ ಕೊಂಡು ಹೋದಂತೆ ಅವರಿಗೆ ಭಾಸವಾಗುತ್ತಿತ್ತು.

"ವೆಂಕಟು ಇಷ್ಟು ದಿನಗಳಾದರೂ ಬರದೇ ಇರುವುದರಿಂದ ತನ್ನ ಕೆಲಸದಲ್ಲಿ ಕೃತಕಾರ್ಯನಾಗಲಿಲ್ಲವೆಂದೂ ಅವನು ಪುನಃ ಬರುವುದಿಲ್ಲ ವೆಂದೂ ಹೇಳಬಹುದಲ್ಲವೆ ?"

ಅವಳು ಶುಷ್ಕವಾಗಿ ನಕ್ಕು, "ಹೇಳಬಹುದು. ಆದರೆ ಅದಕ್ಕಾಗಿ ಪರಿತಾಪ ಪಡಬೇಕಾಗಿದೆ" ಎಂದಳು.

ಇಬ್ಬರೂ ಮಾತನಾಡಲಿಲ್ಲ. ಪರಸ್ಪರ ಒಬ್ಬರನ್ನೊಬ್ಬರು ನೋಡುತ್ತಾ ಗಳಿಗೆಯ ಹೊತ್ತು ಕಳೆದರು. ವಿಮಲೆಯು ದಿಂಬಿನ ಮೇಲೆ ತಲೆಯಿಟ್ಟು ಕೊಂಡು ಮಲಗಿದ್ದಳು. ಅವಳ ತಲೆಯು ಕೆದರಿದ್ದಿತು. ಶುಭ್ರವಾದ ಆಕಾಶದಲ್ಲಿ ಕಾರ್ಮೋಡಗಳ ನಡುವೆ ಕಂಗೊಳಿಸುವ ಚಂದ್ರನಂತೆ ಆ ಮುಖವು ನಟರಾಜನಿಗೆ ಕಂಡಿತು. ಅವನದನ್ನು ಕಣ್ಣು ದಣಿಯುವವರೆವಿಗೆ ನೋಡುತ್ತಿದ್ದನು.

"ಏನೇ ಆದರೂ ನಾವು ಪರಸ್ಪರ ಪ್ರೇಮಿಗಳು" ಎಂದು ನಟರಾಜನು ಹೇಳಿದನು.

ವಿಮಲೆಯು "ಹೌದು, ಸಂದೇಹವೇ ಇಲ್ಲ" ಎಂದಳು.

ನಟರಾಜನು "ಹಾಗಿದ್ದೂ ನಾವು ಈ ರೀತಿಯಾಗಿರುವುದು ಸರಿಯಲ್ಲ, ವಿಮಲಾ. ನೀನು ಒಪ್ಪುವುದಾದರೆ ನೀನು ಆಸ್ಪತ್ರೆ ಯಿಂದ ಬರುವವರೆವಿಗೆ ನಾನು ಇಲ್ಲಿಯೇ ಇರುತ್ತೇನೆ. ನಾನೂ, ನೀನೂ, ಪುಷ್ಪಳೂ ವಿಂಧ್ಯ ಪರ್ವತಗಳಿಗೆ ಹೊರಟು ಹೋಗೋಣ" ಎಂದನು.

ಅವಳ ಕಣ್ಣು ರೆಪ್ಪೆಗಳು ಅರ್ಧ ಮುಚ್ಚಿಕೊಂಡವು. ಹಣೆಯ ಮೇಲೆ ಎರಡು ಗೆರೆಗಳು ಮೂಡಿದವು.

ವಿಮಲೆಯು "ನನಗೆ ಮದುವೆಯಾಗದೇ ಇದ್ದಿದ್ದರೆ ಹಾಗೆಯೇ ಇರಬಹುದಾಗಿದ್ದಿತು. ಆದರೆ ಈಗ——" ಎಂದಳು.

ನಟರಾಜನು ತನ್ನ ಕತ್ತು ಸರಿಮಾಡಿಕೊಳ್ಳುತ್ತಾ "ಆದರೆ ಈಗ—" ಎಂದನು.

"ಈಗ-ಅವರಿದ್ದಾರೆ"

"ಅವರೆಲ್ಲಿದ್ದಾರೆ? ಅವನು ಎಲ್ಲಿಯೋ ದೇಶಾಂತರ ಓಡಿಹೋಗಿದ್ದಾನೆ"

"ಅದರಿಂದ ಏನು ವ್ಯತ್ಯಾಸವಾಗುತ್ತದೆ ?"

"ಹಾಗಾದರೆ ಅದರಿಂದ ವ್ಯತ್ಯಾಸವಾಗುವುದಿಲ್ಲವೆನ್ನುತ್ತೀಯಾ ?"

"ಅದರಿಂದ ವ್ಯತ್ಯಾಸವಾಗುವುದಿಲ್ಲ. ಪುಷ್ಪಳು ಎಷ್ಟು ನನ್ನವಳೋ ಅಷ್ಟೇ ಅವರವಳೂ ಆಗಿದ್ದಾಳೆ. ಅವರು ಊರಿನಲ್ಲಿಲ್ಲದೇ ಇದ್ದಾಗ ಅವಳನ್ನು ಹಾರಿಸಿಕೊಂಡು ಹೋಗಲು ನಮಗೇನು ಅಧಿಕಾರ ? ಈಗವರು ಕಷ್ಟದಲ್ಲಿದ್ದಾರೆ. ಅದು ಅವರ ತಪ್ಪಲ್ಲ. ಗ್ರಹಚಾರ. ಅವರಿಲ್ಲದಾಗ ಅವರ ಹೆಂಡತಿಯಾದ ನಾನು ಐಶ್ವರ್ಯವಂತನೊಡನೆ, ಪ್ರಖ್ಯಾತನಾದವನೊಡನೆ, ನನ್ನ ಪ್ರೇಮಿಯೊಡನೆ, ಅವರ ಮಗಳನ್ನು ಕರೆದುಕೊಂಡು ಹೊರಟು ಹೋಗಲೇ ? ಹಾಗೆ ಮಾಡುವುದಾದರೆ ನನ್ನಲ್ಲಿ ಯಾವ ಉಚ್ಚ ಗುಣಗಳಿವೆ ಎಂದು ನೀವೇ ಹೇಳುತ್ತೀರೋ ಅವುಗಳೆಲ್ಲಕ್ಕೂ ತಿಲಾಂಜಲಿಯನ್ನು ಕೊಟ್ಟ ಹಾಗೆ ಆಗುವುದಿಲ್ಲವೇ ?"

ಸ್ವಲ್ಪ ಹೊತ್ತು ಬಿಟ್ಟು ನಟರಾಜನು "ವಿಮಲಾ. ನಾನು ಕಾಂಚನಗಂಗಾಗೆ ಹೋಗಿದ್ದೆ. ಈಗ ವಿಂಧ್ಯಪರ್ವತಕ್ಕೆ ಹೋಗುತ್ತೇನೆ. ಯಾಕೆ ಬಲ್ಲೆಯಾ ? ಮೊದಲೂ ನಿರಾಸೆಯಿಂದ ಹೋಗಿದ್ದೆ. ಈಗಲೂ ನಿರಾಸೆಯಿಂದ ಹೋಗುತ್ತಿದ್ದೇನೆ. ನೀನಿಲ್ಲದ ಜಗತ್ತು ನನಗೆ ಶೂನ್ಯವಾಗಿ ಕಂಡು ಬರುತ್ತಿದೆ" ಎಂದನು.

"ನೀವು ಆ ರೀತಿಯಾಗಿ ಹೇಳಿದುದು ನನ್ನ ಮನಸ್ಸಿಗೆ ಶಾಂತಿಯನ್ನು ಕೊಡುತ್ತದೆ. ನಾನು ಕಷ್ಟಗಳನ್ನು ಸಹಿಸಿಕೊಂಡು ಸುಖವಾಗಿರಲು ನನಗೆ ಶಕ್ತಿಯನ್ನು ಕೊಡುತ್ತದೆ. ನಾನು ನಿಮ್ಮನ್ನು ನೋಡಿದ ಕೂಡಲೇ ನಾನು ನಿಮ್ಮಿಂದ ಪ್ರಭಾವಿತಳಾದೆ. ಆದರೆ........ಆದರೆ ಅಷ್ಟು ಹೊತ್ತಿಗೆ ಕೈ ಮಿಂಚಿ ಹೋಗಿದ್ದಿತು"

" ನಿನ್ನನ್ನು ನಾನು ಶಕುಂತಲೆಯ ಮನೆಯಲ್ಲಿ ನೋಡಿದ ದಿನವು ನಿನಗೆ ಜ್ಞಾಪಕವಿದೆಯೆ ? ನಾನು ನಿನ್ನನ್ನು ನೋಡಿದಾಗ ನೀನು ಅವಿವಾಹಿತೆ ಎಂದುಕೊಂಡಿದ್ದೆ. ನೀನು ಹೇಳುವಂತೆ ಕೈ ಮಿಂಚಿ ಹೋಗಿದೆ ಎಂಬುದು ನನಗೆ ಗೊತ್ತಿರಲಿಲ್ಲ. ನೀನು ಅದೊಂದನ್ನೂ ಹೇಳಲಿಲ್ಲ. ನನಗಾಗಲೇ ಗೊತ್ತಿದ್ದಿದ್ದರೆ ನಾನು ನಿನ್ನನ್ನು ನೋಡುವ ದೃಷ್ಟಿಯೇ ಬೇರೆಯಾಗಿರುತ್ತಿತ್ತು. ಈಗ-ಈಗ, ಯಾಕೆ ಇನ್ನೆಂದಿಗೂ ನಾನು ಆ ದೃಷ್ಟಿಯನ್ನು ಬದಲಾಯಿಸಿಕೊಳ್ಳಲಾರೆ "

ವಿಮಲೆಯು ಶಾಂತವಾಗಿ " ನನಗೂ ಆ ಆಸೆಯಿದೆ. ಈಗ ನೀವು ವಿಂಧ್ಯಕ್ಕೆ ಹೋಗುತ್ತೇನೆನ್ನುತ್ತಿದ್ದೀರಿ. ಅಲ್ಲಿಗೆ ಬರಬೇಕೆಂದು ನನಗೆ ಆಸೆಯಿಲ್ಲವೆಂದು ಕೊಂಡಿದ್ದೀರಾ ? ಈ ಚಳಿಗಾಲದಲ್ಲಿ ಬೆಚ್ಚನೆಯ ಶಾಲುವನ್ನು ಹೊದ್ದುಕೊಂಡು ಪರ್ವತಾಗ್ರದಲ್ಲಿ, ದುರ್ಗಮವಾದ ಅರಣ್ಯಗಳ ನಡುವೆ ಸಂಚರಿಸುವುದಕ್ಕೆ ನನಗೆ ಆಸೆಯಿಲ್ಲವೆಂದು ಕೊಂಡಿದ್ದೀರಾ ? ಆದರೆ ನಾನು ಇಲ್ಲಿ ಸಿಕ್ಕಿ ಬಿದ್ದಿದ್ದೇನೆ. ಕರ್ತವ್ಯವು ನನ್ನನ್ನು ಕಟ್ಟಿಹಾಕಿದೆ. ನನಗೆ ಬೇರೆಯ ಮಾರ್ಗವೇ ಇಲ್ಲವಾಗಿದೆ " ಎಂದು ಹೇಳಿದಳು.

ವಿಮಲೆಯ ಚಾಚಿದ್ದ ಕೈಯನ್ನು ಹಿಡಿದುಕೊಂಡಿದ್ದನು.

" ನಿಜ....ನೀನು ಹೇಳುವುದು ನಿ...."

ಅಷ್ಟು ಹೊತ್ತಿಗೆ ನರ್ಸ್ ಬಂದು ಮೆಲುದನಿಯಿಂದ " ಆಪರೇಷನ್ ಆದ ಪೇಷಂಟು. ಬಹಳ ಹೊತ್ತು ಮಾತ........" ಎಂದು ಹೇಳಿದಳು.

ನಟರಾಜನು ಅವಳ ಕೈಯನ್ನು ಹಿಡಿದುಕೊಂಡೇ ಮೇಲೆದ್ದು ನಿಂತುಕೊಂಡನು.

" ಆಗಾಗ ಕಾಗದವನ್ನು ಬರೆಯುತ್ತೀಯಾ ? ವಿಮಲೆ "

ಉತ್ತರ ಹೇಳುವುದಕ್ಕೆ ಅವಳ ಕತ್ತು ಕಟ್ಟಿಕೊಂಡು ಬಂದಿತು. ಅವಳಿಗೆ ಶಕ್ತಿ ಇಲ್ಲವಾಗಿತ್ತು. ಆದರೆ ಅವಳ ಕಣ್ಣು ನೋಟವೇ ಅವನಿಗೆ ಉತ್ತರ ಹೇಳಿತು.

ಕುಡಿಯಲು ಆತುರಗೊಂಡಿದ್ದವನು ಅಲಭ್ಯವಾದ ಮದ್ಯವನ್ನು ನೋಡುವಂತೆ ಅವನು ನೋಡಿದನು. ಅವಳು ಪರಿತಾಪ ಪೂರ್ಣವಾದ ದೃಷ್ಟಿಯಿಂದ ಮರುನೋಟ ನೋಡಿದಳು. ಅವಳ ಬಿಳಿಚಿಕೊಂಡಿದ್ದ ಮುಖ

ವಿಮಲೆಯು "ನನಗೆ ಮದುವೆಯಾಗದೇ ಇದ್ದಿದ್ದರೆ ಹಾಗೆಯೇ ಇರಬಹುದಾಗಿದ್ದಿತು. ಆದರೆ ಈಗ——" ಎಂದಳು.

ನಟರಾಜನು ತನ್ನ ಕತ್ತು ಸರಿಮಾಡಿಕೊಳ್ಳುತ್ತಾ "ಆದರೆ ಈಗ—" ಎಂದನು.

"ಈಗ-ಅವರಿದ್ದಾರೆ"

"ಅವರೆಲ್ಲಿದ್ದಾರೆ? ಅವನು ಎಲ್ಲಿಯೋ ದೇಶಾಂತರ ಓಡಿಹೋಗಿದ್ದಾನೆ"

"ಅದರಿಂದ ಏನು ವ್ಯತ್ಯಾಸವಾಗುತ್ತದೆ?"

"ಹಾಗಾದರೆ ಅದರಿಂದ ವ್ಯತ್ಯಾಸವಾಗುವುದಿಲ್ಲವೆನ್ನುತ್ತೀಯಾ?"

"ಅದರಿಂದ ವ್ಯತ್ಯಾಸವಾಗುವುದಿಲ್ಲ. ಪುಷ್ಪಳು ಎಷ್ಟು ನನ್ನವಳೋ ಅಷ್ಟೇ ಅವರವಳೂ ಆಗಿದ್ದಾಳೆ. ಅವರು ಊರಿನಲ್ಲಿಲ್ಲದೇ ಇದ್ದಾಗ ಅವಳನ್ನು ಹಾರಿಸಿಕೊಂಡು ಹೋಗಲು ನಮಗೇನು ಅಧಿಕಾರ? ಈಗವರು ಕಷ್ಟದಲ್ಲಿದ್ದಾರೆ. ಅದು ಅವರ ತಪ್ಪಲ್ಲ. ಗ್ರಹಚಾರ. ಅವರಿಲ್ಲದಾಗ ಅವರ ಹೆಂಡತಿಯಾದ ನಾನು ಐಶ್ವರ್ಯವಂತನೊಡನೆ, ಪ್ರಖ್ಯಾತನಾದವನೊಡನೆ, ನನ್ನ ಪ್ರೇಮಿಯೊಡನೆ, ಅವರ ಮಗಳನ್ನು ಕರೆದುಕೊಂಡು ಹೊರಟು ಹೋಗಲೇ? ಹಾಗೆ ಮಾಡುವುದಾದರೆ ನನ್ನಲ್ಲಿ ಯಾವ ಉತ್ಕೃಷ್ಟ ಗುಣಗಳಿವೆ ಎಂದು ನೀವೇ ಹೇಳುತ್ತೀರೋ ಅವುಗಳೆಲ್ಲಕ್ಕೂ ತಿಲಾಂಜಲಿಯನ್ನು ಕೊಟ್ಟ ಹಾಗೆ ಆಗುವುದಿಲ್ಲವೇ?"

ಸ್ವಲ್ಪ ಹೊತ್ತು ಬಿಟ್ಟು ನಟರಾಜನು "ವಿಮಲಾ. ನಾನು ಕಾಂಚನ ಗಂಗಾಗೆ ಹೋಗಿದ್ದೆ. ಈಗ ವಿಂಧ್ಯಪರ್ವತಕ್ಕೆ ಹೋಗುತ್ತೇನೆ. ಯಾಕೆ ಬಲ್ಲೆಯಾ? ಮೊದಲೂ ನಿರಾಸೆಯಿಂದ ಹೋಗಿದ್ದೆ. ಈಗಲೂ ನಿರಾಸೆಯಿಂದ ಹೋಗುತ್ತಿದ್ದೇನೆ. ನೀನಿಲ್ಲದ ಜಗತ್ತು ನನಗೆ ಶೂನ್ಯವಾಗಿ ಕಂಡು ಬರುತ್ತಿದೆ" ಎಂದನು.

"ನೀವು ಆ ರೀತಿಯಾಗಿ ಹೇಳಿದುದು ನನ್ನ ಮನಸ್ಸಿಗೆ ಶಾಂತಿಯನ್ನು ಕೊಡುತ್ತದೆ. ನಾನು ಕಷ್ಟಗಳನ್ನು ಸಹಿಸಿಕೊಂಡು ಸುಖವಾಗಿರಲು ನನಗೆ ಶಕ್ತಿಯನ್ನು ಕೊಡುತ್ತದೆ. ನಾನು ನಿಮ್ಮನ್ನು ನೋಡಿದ ಕೂಡಲೇ ನಾನು ನಿಮ್ಮಿಂದ ಪ್ರಭಾವಿತಳಾದೆ. ಆದರೆ........ಆದರೆ ಅಷ್ಟು ಹೊತ್ತಿಗೆ ಕೈ ಮಿಂಚಿ ಹೋಗಿದ್ದಿತು"

" ನಿನ್ನನ್ನು ನಾನು ಶಕುಂತಲೆಯ ಮನೆಯಲ್ಲಿ ನೋಡಿದ ದಿನವು ನಿನಗೆ ಜ್ಞಾಪಕವಿದೆಯೆ ? ನಾನು ನಿನ್ನನ್ನು ನೋಡಿದಾಗ ನೀನು ಅವಿವಾಹಿತೆ ಎಂದುಕೊಂಡಿದ್ದೆ. ನೀನು ಹೇಳುವಂತೆ ಕೈ ಮಿಂಚಿ ಹೋಗಿದೆ ಎಂಬುದು ನನಗೆ ಗೊತ್ತಿರಲಿಲ್ಲ. ನೀನು ಅದೊಂದನ್ನೂ ಹೇಳಲಿಲ್ಲ. ನನಗಾಗಲೇ ಗೊತ್ತಿದ್ದಿದ್ದರೆ ನಾನು ನಿನ್ನನ್ನು ನೋಡುವ ದೃಷ್ಟಿಯೇ ಬೇರೆಯಾಗಿರುತ್ತಿತ್ತು. ಈಗ-ಈಗ, ಯಾಕೆ ಇನ್ನೆಂದಿಗೂ ನಾನು ಆ ದೃಷ್ಟಿಯನ್ನು ಬದಲಾಯಿಸಿಕೊಳ್ಳಲಾರೆ "

ವಿಮಲೆಯು ಶಾಂತವಾಗಿ " ನನಗೂ ಆ ಆಸೆಯಿದೆ. ಈಗ ನೀವು ವಿಂಧ್ಯಕ್ಕೆ ಹೋಗುತ್ತೇನೆನ್ನುತ್ತಿದ್ದೀರಿ. ಅಲ್ಲಿಗೆ ಬರಬೇಕೆಂದು ನನಗೆ ಆಸೆಯಿಲ್ಲವೆಂದು ಕೊಂಡಿದ್ದೀರಾ ? ಈ ಚಳಿಗಾಲದಲ್ಲಿ ಬೆಚ್ಚನೆಯ ಶಾಲುವನ್ನು ಹೊದ್ದುಕೊಂಡು ಪರ್ವತಾಗ್ರದಲ್ಲಿ, ದುರ್ಗಮವಾದ ಅರಣ್ಯಗಳ ನಡುವೆ ಸಂಚರಿಸುವುದಕ್ಕೆ ನನಗೆ ಆಸೆಯಿಲ್ಲವೆಂದು ಕೊಂಡಿದ್ದೀರಾ ? ಆದರೆ ನಾನು ಇಲ್ಲಿ ಸಿಕ್ಕಿ ಬಿದ್ದಿದ್ದೇನೆ. ಕರ್ತವ್ಯವು ನನ್ನನ್ನು ಕಟ್ಟಿಹಾಕಿದೆ. ನನಗೆ ಬೇರೆಯ ಮಾರ್ಗವೇ ಇಲ್ಲವಾಗಿದೆ " ಎಂದು ಹೇಳಿದಳು.

ವಿಮಲೆಯು ಚಾಚಿದ್ದ ಕೈಯನ್ನು ಹಿಡಿದುಕೊಂಡಿದ್ದನು.

" ನಿಜ....ನೀನು ಹೇಳುವುದು ನಿ...."

ಅಷ್ಟು ಹೊತ್ತಿಗೆ ನರ್ಸ್ ಬಂದು ಮೆಲುದನಿಯಿಂದ " ಆಪರೇಷನ್ ಆದ ಪೇಷಂಟು. ಬಹಳ ಹೊತ್ತು ಮಾತ........" ಎಂದು ಹೇಳಿದಳು.

ನಟರಾಜನು ಅವಳ ಕೈಯನ್ನು ಹಿಡಿದುಕೊಂಡೇ ಮೇಲೆದ್ದು ನಿಂತುಕೊಂಡನು.

" ಆಗಾಗ ಕಾಗದವನ್ನು ಬರೆಯುತ್ತೀಯಾ ? ವಿಮಲೆ "

ಉತ್ತರ ಹೇಳುವುದಕ್ಕೆ ಅವಳ ಕತ್ತು ಕಟ್ಟಿಕೊಂಡು ಬಂದಿತು. ಅವಳಿಗೆ ಶಕ್ತಿ ಇಲ್ಲವಾಗಿತ್ತು. ಆದರೆ ಅವಳ ಕಣ್ಣಿನ ನೋಟವೇ ಅವನಿಗೆ ಉತ್ತರ ಹೇಳಿತು.

ಕುಡಿಯಲು ಆತುರಗೊಂಡಿದ್ದವನು ಅಲಭ್ಯವಾದ ಮದ್ಯವನ್ನು ನೋಡುವಂತೆ ಅವನು ನೋಡಿದನು. ಅವಳು ಪರಿತಾಪ ಪೂರ್ಣವಾದ ದೃಷ್ಟಿಯಿಂದ ಮರುನೋಟ ನೋಡಿದಳು. ಅವಳ ಬಿಳಿಚಿಕೊಂಡಿದ್ದ ಮುಖ

ದಲ್ಲಿ ಬಣ್ಣವಿರಲಿಲ್ಲ. ನಟರಾಜನು ಅವಳ ಕೈಯನ್ನು ಸಿದಾನವಾಗಿ ಹಾಸಿಗೆಯ ಮೇಲಿಟ್ಟು, ಹೊರಟು ಹೋದನು.

ನರ್ಸ್ ಬಂದು ವಿಮಲೆಯನ್ನು ಸರಿಯಾಗಿ ಮಲಗಿಸಿ, ಕೆದರಿದ ಕೂದಲನ್ನು ಸರಿಪಡಿಸಿ, ಹೊದ್ದಿಕೆಯನ್ನು ಹೊದ್ದಿಸಿ, ಹೊರಗೆ ಹೋದಳು.

ವಿಮಲೆಯು ಕೋಣೆಯ ಚಾವಣಿಯನ್ನು ನೋಡಿದಳು. ಅವಳಿಗೆ ಎಲ್ಲವೂ ಶೂನ್ಯವಾಗಿ ಕಂಡಿತು. ಭಯಂಕರವಾದ ಮೌನವು ಅವಳ ಸುತ್ತಲೂ ಆವರಿಸಿರುವಂತೆ ಕಂಡಿತು. ನಟರಾಜನು ದೂರ ದೂರ ಹೋದಂತೆ, ನಗರಗಳನ್ನೂ ಪಟ್ಟಣಗಳನ್ನೂ ದಾಟಿ ಹೋದಂತೆ, ಪರ್ವತಾಗ್ರದಲ್ಲಿರುವ ದುರ್ಗಮವಾದ ಅರಣ್ಯವನ್ನು ಪ್ರವೇಶಿಸಿದಂತೆ ಆ ಅರಣ್ಯದಲ್ಲಿ ಮರೆಯಾಗಿ ಹೋದಂತೆ ಭಾಸವಾಯಿತು.

ಅವಳು ಶೂನ್ಯದಲ್ಲಿಯೇ ಆಸಕ್ತಳಾಗಿದ್ದಳು.

ಬಲು ಹೊತ್ತಿನ ಮೇಲೆ ಅವಳ ಹಾಸಿಗೆಯ ಪಕ್ಕದಲ್ಲಿ ಕುಳಿತಿದ್ದ ವರದೆಯು "ಅಕ್ಕ. ಶಂಕರನು ನಿನ್ನನ್ನು ನೋಡಲು ಬಂದಿದ್ದ. ನಿನಗೆ ನಿದ್ದೆ ಬಂದಿರಲಿಲ್ಲ. ಕಣ್ಣು ಬಿಟ್ಟುಕೊಂಡಿದ್ದೆಯಂತೆ. ಅವನು ಮಾತನಾಡಿಸಿದ. ನೀನು ಮಾತನಾಡಲಿಲ್ಲ. ಅನನ್ಯ ಮನಸ್ಕೆಯಾಗಿದ್ದೀ ಎಂದು ಹೊರಟು ಹೋದ" ಎಂದಳು.

ವಿಮಲೆಯು ತಂಗಿಯ ಕಡೆಗೆ ನೋಡುತ್ತಾ ಸಣ್ಣದಾಗಿ ನಗುತ್ತಾ "ನನಗೆ ತೂಕಡಿಕೆ ಬಂದಿತ್ತು. ಬಂದಿದ್ದವನು ಶಂಕರನಲ್ಲ. ನಟರಾಜ್ ಬಂದಿದ್ದರು" ಎಂದಳು.

"ಅಕ್ಕಾ! ಹುಷಾರಾಗಿದ್ದೀಯಾ?"

ವಿಮಲೆಯು "ಇದ್ದೇನೆ" ಎಂದಳು.

"ನಾನೊಂದು ಮಾತು ಕೇಳಲೇ?"

"ಕೇಳು. ಪೀಠಿಕೆಯೇನು ಬಂದಿತು?"

ತಂಗಿಗೆ ಕೇಳಲು ಸಂಕೋಚವಾಯಿತು.

"ಕೇಳು. ಏನುಬೇಕಾದರೂ ಕೇಳು"

"ನೀನು ನಟರಾಜರನ್ನು ಪ್ರೇಮಿಸುತ್ತಿದ್ದೀಯಾ?"

" ಹೌದು. ನಾವು ಒಬ್ಬರನ್ನೊಬ್ಬರು ನೋಡಿದಾಗಿನಿಂದ ಪ್ರೇಮಿಸುತ್ತಿದ್ದೇವೆ "

" ಹಾಗಾದರೆ ವೆಂಕಟರಾಯರನ್ನೇಕೆ ಮದುವೆಯಾದೆ ?"

" ಅವರನ್ನು ನೋಡುವ ವೇಳೆಗೆ ನನಗೆ ಮದುವೆಯಾಗಿಹೋಗಿತ್ತು"

'' ಮರೆತುಹೋಗಿತ್ತು. ಆದರೆ——''

'' ಏನು ಆದರೆ——''

'' ನಿನಗೆ ಮದುವೆಯಾಗಿದ್ದು ಆರ್ಯ ಸಮಾಜದಲ್ಲಿ. ಅದು ರಿಜಿಸ್ಟರ್ ಮ್ಯಾರೇಜ್‌ನಂತೆ. ಈಗೇಕೆ ಅದನ್ನು ರದ್ದು ಮಾಡಬಾರದು "

'' ಯಾವ ತರಹದ ಮದುವೆಯಾದರೂ ಹೆಂಗಸಿಗೆ ಒಂದೇ ಬಾರಿ ಮದುವೆ. ವಿಚ್ಛೇದನವು ಕೃತಕ. ಅವರಲ್ಲಿಯೂ ಗಂಡನು ಕಷ್ಟದಲ್ಲಿರುವಾಗ-ಹೆಂಡತಿಗಾಗಿ ದೇಶಾಂತರಗತನಾಗಿ ದುಡಿಯುತ್ತಿರುವಾಗ—ಅಬ್ಬಾ"

'' ಅಕ್ಕ. ನೀನು ದೇವತೆ. ನೀನು ಈ ಲೋಕದಲ್ಲಿ ಬದುಕಿರಬಾರದಷ್ಟು ಒಳ್ಳೆಯವಳು "

'' ಇದರಲ್ಲೆಲ್ಲಾ ಒಳ್ಳೆಯತನ, ಕೆಟ್ಟ ತನಗಳೆಂಬುದು ಇಲ್ಲಾ, ವರದ. ಜನಗಳು ಕರ್ಮ ಮಾಡುವಾಗ ಇದು ಒಳ್ಳೆಯದೇ ಕೆಟ್ಟುದೇ ಎಂಬುದನ್ನು ನೋಡಿಕೊಂಡು ಮಾಡುವುದಿಲ್ಲ. ತಮಗೆ ಪ್ರಿಯವಾದುದಾವುದೋ ಅದನ್ನು ಮಾಡುತ್ತಾರೆ. ನಾನೂ ಅಷ್ಟೆ. ವಾಸ್ತವವಾಗಿ ಹೇಳುವುದಾದರೆ ನಾನು ಎಂದೂ ಅವರನ್ನು ಪ್ರೇಮ ಮಾಡಿರಲಿಲ್ಲ. ಪ್ರೇಮ ಮಾಡಿದ್ದೆನೆಂದು ನಾನು ಭಾವಿಸಿದರೂ ಅವರು ಭಾವಿಸಿದರೂ ಅದು ಭ್ರಾಂತಿ. ಆದರೆ ನಾವು ಗಂಡ ಹೆಂಡಿರು. ನಮ್ಮಿಬ್ಬರ ಸಂಬಂಧದಲ್ಲಿ ಅವರು ಇದುವರೆವಿಗೆ ಎಂದೂ ತಪ್ಪು ಮಾಡಿಲ್ಲ. ಈಗವರು ಹೊರಗಡೆ ಹೊರಟು ಹೋಗಿರುವುದೂ ಸಹ ತಪ್ಪಲ್ಲ. ಸಂಪಾದನೆ ಮಾಡಲು ಹೋಗಿದ್ದಾರೆ. ಅದರಲ್ಲಿ ಅವರು ಕೃತಕಾರ್ಯರಾಗಬಹುದು. ಆಗದೇ ಹೋಗಬಹುದು. ಆದರೆ ಅವರು ನನ್ನನ್ನು ಸುಖವಾಗಿಡಲು ಕಷ್ಟಪಡುತ್ತಿದ್ದಾರೆ. ಹಾಗಿರುವಾಗ ಅವರನ್ನು ನಿರಾಕರಿಸುವುದರಿಂದ ನನ್ನ ಮನಸ್ಸಿಗೆ ಸುಖವಾಗುವುದಿಲ್ಲ. ಅದರಿಂದ ನಾನು ಹಾಗೆ ಮಾಡುವುದಿಲ್ಲ "

ವಿಮಲಳು ವೆಂಕಟರಾಯನ ವಿಷಯವನ್ನು ಮಾತನಾಡುತ್ತಿದ್ದರೂ

ವರದಳ ಮನಸ್ಸಿನಲ್ಲಿ ನಟರಾಜನ ಸಂಬಂಧವಾದ ಯೋಚನೆಯೇ ಇದ್ದಿತೆಂದು ಕಂಡುಬರುತ್ತದೆ.

ವರದೆಯು "ಅಕ್ಕಾ! ನಟರಾಜ್ ಈ ದಿನವೇ ಪ್ರಯಾಣ ಮಾಡಬಹುದಲ್ಲವೇ ?" ಎಂದಳು.

"ಹೌದು! ಅವರ ವಿಂಧ್ಯಾರಣ್ಯ ವಾಸವು ಈ ರಾತ್ರಿಯಿಂದಲೇ ಆರಂಭವಾದಂತೆ"

"ಆಸ್ಪತ್ರೆಯಿಂದ ಹೊರಗೆ ಹೋಗುವಾಗ ಶಂಕರನು ಹೊರಗೆ ನಿಂತಿದ್ದುದನ್ನು ನಟರಾಜ್ ನೋಡಿದರು. ಅವನನ್ನು ಕರೆದು ಅವನ ಕೈಗೆ ಒಂದು ಕವರನ್ನು ಕೊಟ್ಟು "ಇದನ್ನು ಓದಿಕೊಂಡು ನಿಮ್ಮ ತಂಗಿಗೆ ಕೊಡಿರಿ" ಎಂದು ಹೇಳಿ ಟ್ಯಾಕ್ಸಿಯಲ್ಲಿ ಹೊರಟು ಹೋದರು"

"ಎಲ್ಲಿ ಆ ಕಾಗದ ? ಅದರಲ್ಲಿ ಏನು ಬರೆದಿದೆ ?"

"ಅದರಲ್ಲಿ ಯಾವ ಕಾಗದವೂ ಇರಲಿಲ್ಲ. ನೂರು ರೂಪಾಯಿಗಳ ಐವತ್ತು ನೋಟುಗಳಿದ್ದವು"

ಅಕ್ಕತಂಗಿಯರು ಗಳಿಗೆಯ ಹೊತ್ತು ಪರಸ್ಪರ ಮುಖಗಳನ್ನು ನೋಡಿಕೊಂಡರು.

ಅನಂತರ ವರದೆಯು "ಅಕ್ಕಾ. ಆ ಹಣವನ್ನು ಏನು ಮಾಡುವುದು ?" ಎಂದು ಕೇಳಿದಳು.

"ಏನು ಮಾಡುವುದೇ ? ಆಸ್ಪತ್ರೆಗೆ ಕೊಡಬೇಕಾದ ಹಣವನ್ನು ಕೊಡುವುದು, ಅತ್ತೆಯ ಕರ್ಮಾಂತರ ಮಾಡುವುದು, ಮನೆ ರಿಪೇರಿ ಮಾಡಿಸುವುದು ಉಳಿದುದನ್ನು ಖರ್ಚಿಗಿಟ್ಟುಕೊಳ್ಳುವುದು" ಎಂದು ಹೇಳಿ ಸ್ವಲ್ಪ ಹೊತ್ತು ತಡೆದು "ಅವರು ಈ ಹಣವನ್ನು ಕೊಟ್ಟಿರುವುದೂ ಅದಕ್ಕಾಗಿಯೇ. ಅವರು ಮೊನ್ನೆಯೇ ಅನಾಹುತವಾದ ದಿನವೇ ಹಣ ತೆಗೆದುಕೊಳ್ಳಲು ಹೇಳಿದರು. ನಾನು ಬೇಡವೆಂದೆ. ಈಗ ಹೋಗುವ ಮೊದಲು ಸಹ ಹೇಳಿದರು. ಶಂಕರನು ಮನೆ ರಿಪೇರಿಯಾಗದೆ ವಾಸ ಮಾಡುವಂತೆಯೇ ಇಲ್ಲವೆಂದು ಹೇಳಿದ್ದ. ಆದರೂ ಸಹ ಬೇಡವೆಂದು ಹೇಳಿದೆ. ಅವರೇಕೆ ಹಣ ಕೊಡಬೇಕು, ನಾವೇಕೆ ಅದನ್ನು ತೆಗೆದುಕೊಳ್ಳಬೇಕು, ಎಂದುಕೊಂಡೆ. ಅವರು ಅದನ್ನು ಕಾಣಿಕೆ ಎಂದು ಕರೆದರೂ ಅದು ದಾಕ್ಷಿಣ್ಯಕ್ಕೆ ಸಿಕ್ಕಿಸುವ

ಅಂಕುಶವೇನೋ ಎಂದು ಸಹ ಸಂದೇಹವು ಬಂದಿತು. ಅದು ನಿಜವಾಗಿಯೂ ಅವರು ಕೊಟ್ಟ ಕಾಣಿಕೆ. ಹಿಂದಕ್ಕೆ ಕೊಡುವುದರಿಂದ ಅವರನ್ನು ಅಪಮಾನ ಪಡಿಸಿದಂತೆ ಆಗುತ್ತದೆ. ಅದರಿಂದ ನಾವು ತೆಗೆದುಕೊಳ್ಳಬೇಕು"

ವರದೆಯು " ನಮಗೆ ಹಣವನ್ನು ಇಟ್ಟುಕೊಳ್ಳಲೇ ಬೇಕೆಂದಿದ್ದಿತು. ನೀನು ಎಲ್ಲಿ ಒಪ್ಪುವುದಿಲ್ಲವೋ ಎಂದುಕೊಂಡೆವು. ಯಾವುದೋ ಒಂದು ಬಗೆಯಾಗಿ ನಮ್ಮ ಇಷ್ಟವು ನೆರವೇರಿದಂತೆ ಆಯಿತು " ಎಂದಳು.

" ಅಷ್ಟೇ ಅಲ್ಲ, ವರದಾ. ಈ ಸಹಾಯಕ್ಕಾಗಿ ನಾನು ಅವರಿಗೆ ಧನ್ಯವಾದಗಳನ್ನು ಕಳಿಸಬೇಕೆಂದಿದ್ದೇನೆ "

ವಿಮಲೆಯು ಆಸ್ಪತ್ರೆಯಿಂದ ಮನೆಗೆ ಹೋಗುವ ವೇಳೆಗೆ ಅವರ ಮನೆಯು ಒಂದು ಬಗೆಯಾಗಿ ರಿಪೇರಿಯಾಗಿದ್ದಿತು. ಮನೆಯು ರಿಪೇರಿಯಾಗುವ ಸಮಯದಲ್ಲಿ ಮನೆಯ ಸಾಮಾನುಗಳೆಲ್ಲವನ್ನೂ ತೆಗೆದು ಒಂದು ಕಡೆ ಹಾಕಿದ್ದರು. ಅದರಲ್ಲಿ ಉಪಯೋಗವಾಗುವ ಮತ್ತು ಉಪಯೋಗವಾಗದ ಎಲ್ಲಾ ಪದಾರ್ಥಗಳೂ ಸೇರಿಹೋಗಿದ್ದವು. ಅವಕಾಶವಾದಾಗ ಅವುಗಳನ್ನೆಲ್ಲಾ ನೋಡಿ ಉಪಯೋಗವಿಲ್ಲದ ಸಾಮಾನುಗಳನ್ನು ಹೊರಗೆ ಹಾಕಬೇಕೆಂದುಕೊಂಡಿದ್ದರು.

ಒಂದು ದಿನ ಪುರಸತ್ತಾಗಿದ್ದಾಗ ಅಕ್ಕತಂಗಿಯರು ಸೇರಿ ಅವುಗಳನ್ನು ನೋಡಲಾರಂಭಿಸಿದರು.

ನೋಡುತ್ತಿದ್ದಾಗ ಸಾವಿತ್ರಮ್ಮನವರ ಪೆಟ್ಟಿಗೆಯು ಅವರ ಕಣ್ಣಿಗೆ ಬಿದ್ದಿತು. ಅದೊಂದು ದೊಡ್ಡ ಟ್ರಂಕು. ವರ್ಷಾಂತರಗಳಿಂದ ಅದರ ವಿಷಯದಲ್ಲಿ ಯಾರೂ ಆಸಕ್ತರಾಗಿರಲಿಲ್ಲ. ಅವರತ್ತೆಯು ಹುಷಾರಾಗಿರಲಿಲ್ಲ. ಅವರು ಬದುಕಿದ್ದಾಗ ಆ ಪೆಟ್ಟಿಗೆಯನ್ನು ತೆಗೆದು ಅದರಲ್ಲೇನಿದೆ ಎಂಬುದನ್ನು ನೋಡಲು ಯಾರಿಗೂ ಮನಸ್ಸು ಬಂದಿರಲಿಲ್ಲ. ಈಗ ಅವರು ಸತ್ತುಹೋಗಿದ್ದುದರಿಂದ ಅದನ್ನು ತೆಗೆದು ನೋಡಲು ಯಾರ ಅಡ್ಡಿಯೂ ಇಲ್ಲ. ಇದೆಲ್ಲದರ ಮೇಲೆ ಅತ್ತೆಯ ಪೆಟ್ಟಿಗೆಯಲ್ಲಿ ಏನಿದೆ ಎಂದು ನೋಡಬೇಕೆಂದು ಸೋದರ ಸೊಸೆಯರಿಗೆ ಆಸಕ್ತಿಯುಂಟಾಯಿತು.

ಆ ಪೆಟ್ಟಿಗೆಗೆ ಬೀಗದ ಕೈ ಇರಲಿಲ್ಲ. ವಿಮಲೆ ವರದೆಯರು ಕಷ್ಟ ಪಟ್ಟು ಅದನ್ನು ಒಡೆದರು. ಮುಚ್ಚಳವನ್ನು ತೆಗೆದ ಕೂಡಲೇ ಮೇಲುಗಡೆ ಕಾರ್ಡುಬೋರ್ಡಿನ ಮೌಂಟಿಗೆ ಅಂಟಿಸಿದ ಒಂದು ಭಾವಚಿತ್ರವು ಕಂಡುಬಂದಿತು.

ವರದೆಯು ಕೂಡಲೇ ಅದನ್ನು ತೆಗೆದು ನೋಡಿ "ಅಕ್ಕ, ನೋಡಿದೆಯಾ? ಇಬ್ಬರು ಸಣ್ಣ ಹುಡುಗಿಯರು" ಎಂದಳು.

ಅಕ್ಕತಂಗಿಯರು ಅದನ್ನು ನೋಡಿ ಅದು ಯಾರ ಭಾವಚಿತ್ರವೆಂದು ಕಂಡುಹಿಡಿದರು. ಅದರಲ್ಲಿ ಒಬ್ಬಾಕೆ ಅವರಮ್ಮನೆಂದೂ ಮತ್ತೊಬ್ಬಾಕೆ ಸೋದರತ್ತೆ ಎಂದೂ ಗುರುತು ಹಿಡಿದರು.

ವರದೆಯು "ಅತ್ತೆಗೆ ಅಮ್ಮನ ಮೇಲೆ ಎಷ್ಟು ಪ್ರೀತಿಯಿತ್ತೋ, ನೋಡು. ಹುಡುಗಿಯರಾಗಿದ್ದಾಗಲೂ ಸಹ ಅವರಿಗೆ ಸ್ನೇಹವಿತ್ತೆಂದು ಕಾಣುತ್ತದೆ. ಆಗ ತೆಗೆಸಿಕೊಂಡ ಫೋಟೋ! ಎಷ್ಟು ವರ್ಷಗಳಾದರೂ ಅತ್ತೆ ಹಾಳು ಮಾಡದೆ ತೆಗೆದಿಟ್ಟಿದ್ದರು" ಎಂದು ಹೇಳಿದಳು.

"ಹೌದು. ನನಗೆ ಜ್ಞಾಪಕವಿರುವಂತೆ ಅತ್ತೆಯೂ ಅಮ್ಮನೂ ಎಷ್ಟೋ ವಿಶ್ವಾಸದಿಂದ ಇದ್ದರು"

ವಿಮಲೆಯು ಒಂದು ಬೆಳ್ಳಿಯ ಕುಂಕುಮದ ಡಬ್ಬಿಯನ್ನು ತೆಗೆದಳು. ಮರಗು ಹೋಗಿದ್ದ ಆ ಡಬ್ಬಿಯ ಕೆಳಭಾಗದಲ್ಲಿ ಅಲ್ಲಲ್ಲಿ ಸ್ವಲ್ಪ ಕುಂಕುಮ ಅಂಟಿಕೊಂಡಿತ್ತು. ಅದರಲ್ಲಿ ಎರಡು ತಾಳಿಗಳೂ ಕರಿಯ ಮಣಿಗಳೂ ಇದ್ದವು.

ವಿಮಲೆಗೆ ಅದನ್ನು ನೋಡಿ ಕಣ್ಣಿನಲ್ಲಿ ನೀರು ಬಂದಿತು. ಅವಳು "ಅತ್ತೆ ಬಾಲ್ಯದಲ್ಲಿ ಸತ್ತ ತಮ್ಮ ಗಂಡನ ಜ್ಞಾಪಕಾರ್ಥವಾಗಿ ಇಟ್ಟಿದ್ದರು" ಎಂದಳು.

ಮುಂದೆ ಪೆಟ್ಟಿಗೆಯನ್ನು ಹುಡುಕಲು ವಿಮಲೆಗೆ ಮನಸ್ಸಾಗಲಿಲ್ಲ. ಅವಳು "ಈ ದಿನ ಶಂಕರನು ಊಟಕ್ಕೆ ಬರುವುದಿಲ್ಲ. ನಾವೇಕೆ ಕಾಯಬೇಕು. ಏಳು. ಊಟ ಮಾಡೋಣ" ಎಂದಳು.

ಅಕ್ಕ ತಂಗಿಯರಿಗೆ ಒಂದು ಗಂಟೆಯಾಗಿದ್ದರೂ ಹಸಿವಾಗದೇ ಈ

ಕೆಲಸಕ್ಕೆ ಕೈ ಹಚ್ಚಿದ್ದರು. ಶೀಲೆಯನ್ನು ಅವಳ ಗುರುಗಳು ಊಟಕ್ಕೆ ಕರೆದಿದ್ದರು. ವಾಸುವು ಸ್ಕೂಲಿಗೆ ಹೋಗಿದ್ದನು.

ವರದಳಿಗೆ ಅರ್ಧದಲ್ಲಿಯೇ ಬಿಟ್ಟು ಹೋಗಲು ಮನಸ್ಸು ಒಪ್ಪಲಿಲ್ಲ. ತಂಗಿಯ ಬಲಾತ್ಕಾರದಿಂದ ಅಕ್ಕನೂ ಕುಳಿತುಕೊಂಡಳು.

ಪೆಟ್ಟಿಗೆಯಲ್ಲಿ ಅನೇಕ ಪದಾರ್ಥಗಳು ತುಂಬಿದ್ದವು. ಒಂದೆರಡು ಸೀರೆಗಳಿದ್ದವು. ಟವಲುಗಳೂ, ಕರವಸ್ತ್ರಗಳೂ ಇದ್ದವು. ವೆಂಕಟಾಚಾರ್ಯರ ಗಳಗ ನಾಥರ ಕಾದಂಬರಿಗಳಿದ್ದವು. ಕತ್ತರಿ, ದಾರ, ಕಸೂತಿ ಕಡ್ಡಿ, ಉಲ್ಲನ್, ಅಳತೆಯ ಟೇಪು, ಪೆನ್ಸಲ್ ತುಂಡುಗಳೆರಡು, ಪೌಂಟೆನ್ಪೆನ್, ಹೇರ್ ಪಿನ್‌ಗಳು, ಹೀಗೆ ಏನು ಏನೋ ಇದ್ದವು.

ವರದಳು "ಅತ್ತೆಯ ಸಾಮಾನುಗಳು ಎಗ್ಸಿಬಿಷನ್‌ನಂತೆ ಇವೆ" ಎಂದಳು.

ಅಕ್ಕತಂಗಿಯರು ಉತ್ಸುಕತೆಯಿಂದ ಕಾಲವಾದ ಅತ್ತೆಯ ಪೆಟ್ಟಿಗೆಯನ್ನು ಹುಡುಕುತ್ತಿರುವಾಗ ವರದೆಯು ದಪ್ಪವಾಗಿದ್ದ ಕಾಗದದ ಮಡಕೆಯೊಂದನ್ನು ತೆಗೆದು "ನೋಡಕ್ಕಾ, ಇದೇನೋ ಮುಖ್ಯವಾದ ಕಾಗದದಂತೆ ಇದೆ" ಎಂದಳು.

ವಿಮಲೆಯು "ಎಲ್ಲಿ, ತೆಗೆ. ಇದೇನೋ ಛಾಪಾ ಕಾಗದಂತೆ ಇದೆ. ನೋಡಿದೆಯಾ, ಇಲ್ಲಿ ಅಪ್ಪನ ರುಜುವಿದೆ. ಹಣ ತೆಗೆದುಕೊಂಡಿರುವ ರಸೀತಿಯಂತೆ ಇದೆ. ಆ....ಆ ವೆಂಕಟರಾಮಯ್ಯನವರು ಹಣ ತೆಗೆದುಕೊಂಡಿರುವಂತಿದೆ. ನೋಡು ಯಾರದು, ಈ ರುಜು. ಸುಂದರರಾಜಯ್ಯಂ ಅಂತ ಇದೆ" ಎಂದಳು.

"ಶಂಕರನು ಬಂದ ನಂತರ ಯಾರಾದರೂ ಲಾಯರಿಗೆ ತೋರಿಸಿಕೊಂಡು ಬಾ–ಎನ್ನಬೇಕು"

"ಇಲ್ಲಿ ತಾರೀಖು ನೋಡು. ಹದಿಮೂರು ವರ್ಷದ ಹಿಂದಿನ ಕಾಗದ. ನಮ್ಮಪ್ಪ ಸತ್ತೂ ಅಷ್ಟೇ ದಿನಗಳಾದುವು"

ಬಹಳ ಹೊತ್ತು ಆ ಕಾಗದವನ್ನಿಟ್ಟುಕೊಂಡು ಅವರುಗಳು ಯೋಚಿಸಿದರು. ತಂದೆ ಸತ್ತ ದಿನ ಅತ್ತೆಯೂ ಕಾರಿನಲ್ಲಿಯೇ ಇದ್ದರು. ಆಗಲೋ

ಅಥವಾ ಮತ್ತಾವುದಾದರೂ ಸಮಯದಲ್ಲಿಯೋ ತಂದೆ ಆಕೆಯ ಬಳಿ ತೆಗೆದಿಡಲು ಈ ಕಾಗದವನ್ನು ಕೊಟ್ಟಿರಬೇಕು" ಎಂದುಕೊಂಡರು.

ವರದೆಯು ನಿದಾನವಾಗಿ ಅದನ್ನು ಓದಿದಳು. ಬಸವನಗುಡಿಯ ಪಕ್ಕದಲ್ಲಿರುವ ವಿಜಯ ಕಾಲೋನಿಯಲ್ಲಿ ಹೊಸದಾಗಿ ಕಟ್ಟಿದ್ದ ನೂರು ಮನೆಗಳನ್ನು ವೆಂಕಟರಾಮಯ್ಯನವರಿಂದ ವಿಮಲೆಯ ತಂದೆ ಎಂಟು ಲಕ್ಷ ರೂಪಾಯಿಗೆ ಕೊಂಡುಕೊಂಡಿದ್ದರು. ಅದನ್ನು ವೆಂಕಟರಾಮಯ್ಯನವರು ಮಾರಿ ಹಣ ತೆಗೆದುಕೊಂಡಿದ್ದರು.

ವರದೆಯು "ಅಕ್ಕಾ. ವೆಂಕಟರಾಮಯ್ಯನವರು ಹೀಗೆ—" ಎಂದಳು.

ಸುಮಾರು ಮೂರು ವಾರಗಳ ನಂತರ ವಿಮಲೆಯ ಮನೆಯವರು ಬೆಂಗಳೂರಿನಲ್ಲಿ ಮೊದಲು ತಾವಿದ್ದ ದೊಡ್ಡ ಮನೆಗೆ ವಾಪ್ಸ ಹೊರಟರು. ಹೋಗಲು ಎರಡು ಟ್ಯಾಕ್ಸಿಗಳು ಬಂದಿದ್ದವು. ಸಾಮಾನುಗಳನ್ನು ಸಾಗಿಸಲು ಲಾರಿಯು ಬಂದಿತು. ವಿಮಲೆ, ವರದೆ, ಶೀಲೆಯರು ಹೊಸ ಬಣ್ಣದ ಸೀರೆಗಳನ್ನು ಉಟ್ಟುಕೊಂಡಿದ್ದರು. ಸೊಗಸಾದ ಲಂಗಾ ಹಾಕಿದ್ದ ಪುಷ್ಪಳನ್ನು ಶಂಕರನು ಎತ್ತಿಕೊಂಡು ಟ್ಯಾಕ್ಸಿಯಲ್ಲಿ ಕುಳಿತುಕೊಂಡನು. ಕೆಂಗೇರಿಯ ಬಳಿ ಇವರಿಗೆ ಪರಿಚಯವಿದ್ದವರೆಲ್ಲಾ ಬೀಳ್ಕೊಡಲು ಬಂದಿದ್ದರು. ಇವರಿಗೆ ಇದ್ದಕ್ಕಿದಂತೆಯೇ ಎಲ್ಲಿಯೋ ಐಶ್ವರ್ಯವು ಬಂದಿದೆ ಎಂದು ಅವರಿಗೆಲ್ಲಾ ವಿಸ್ಮಯವಾಗಿದ್ದಿತು. ಅದು ಹೇಗೆ ಬಂದಿತೆಂಬುವನ್ನು ಯಾರೂ ಅರಿಯರು.

ಇವರು ಆ ಮನೆಗೆ ಹೋದಾಗ ಶಕುಂತಲೆಯ ಮದುವೆಗೆ ವಿಮಲೆಯು ಬಂದಾಗ ನೋಡಿದಂತೆ ಇರಲಿಲ್ಲ. ಮನೆಗೆ ಸುಣ್ಣ ಬಣ್ಣಗಳನ್ನು ಹೊಡೆದಿದ್ದರು. ಕಾಂಪೌಂಡಿನಲ್ಲಿದ್ದ ತೋಟದಲ್ಲಿ ಓಡಿಯಾಡುವ ದಾರಿಗಳನ್ನು ಸರಿಪಡಿಸಿ, ಹೆಚ್ಚಾಗಿ ಬೆಳೆದಿದ್ದ ಗಿಡ ಬಳ್ಳಿಗಳನ್ನು ಕತ್ತರಿಸಿ, ಅಚ್ಚುಕಟ್ಟು ಮಾಡಲಾಗಿದ್ದಿತು. ಟ್ಯಾಕ್ಸಿಯಲ್ಲಿ ಬಂದಾಗ ಅವರಿಗೆಲ್ಲಾ ಆ ಮನೆಯಲ್ಲಿ ಕುಣಿದಾಡುವಷ್ಟು ಆನಂದವಾಗಿದ್ದಿತು.

ಬಾಗಿಲು ಮತ್ತು ಕಿಟಕಿಗಳಲ್ಲಿದ್ದ ಹರಕಲು ಪರದೆಗಳನ್ನು ತೆಗೆದು

ಹಾಕಿ ಹೊಸ ಪರದೆಗಳನ್ನು ಹಾಕಿದ್ದರು. ಬೆಲೆ ಬಾಳುವ ರತ್ನ ಕಂಬಳಿ ಗಳನ್ನು ಸರಿಮಾಡಿ ಹಾಸಲಾಗಿತ್ತು. ಸೋಫಾಗಳನ್ನು ರಿಪೇರಿ ಮಾಡ ಲಾಗಿತ್ತು. ಮನೆಯಲ್ಲಿದ್ದ ಫರ್ನೀಚರಿಗೆ ವಾರ್ನಿಷ್ ಹಾಕಿದ್ದುದರಿಂದ ಹೊಸದಾಗಿ ಸೊಗಸಾಗಿ ಕಂಡುಬರುತ್ತಿದ್ದವು.

ಅಮ್ಮನ ಕೋಣೆಯನ್ನು ವಿಮಲೆಯೂ ತಂದೆಯ ಕೋಣೆಯನ್ನು ಶಂಕರನೂ ಇಟ್ಟುಕೊಂಡರು. ಹುಡುಗರೆಲ್ಲಾ ದೊಡ್ಡದಾಗಿದ್ದ ಒಂದೊಂದು ಕೋಣೆಯನ್ನು ತಮ್ಮದಾಗಿ ಮಾಡಿಕೊಂಡರು. ಕೆಳಗಡೆ ಇದ್ದ ಅತ್ತೆಯ ಕೋಣೆಯು ಮಾತ್ರ ಖಾಲಿಯಾಗಿಯೇ ಇದ್ದಿತು.

ಬಂದ ದಿನ ಶಂಕರನೂ, ವರದೆಯೂ, ಮನೆಯ ಎಲ್ಲಾ ಕಡೆಗಳ ಲ್ಲಿಯೂ ಓಡಿಯಾಡಿ ಎಲ್ಲವನ್ನೂ ತಮಗೆ ಸೂಕ್ತ ತೋರಿದಂತೆ ಸರಿಪಡಿಸಿ ದರು. ಪರಿಚಾರಕನು ಅಡಿಗೆಯಾಗಿದೆ ಎಂದು ಹೇಳಿದ ನಂತರ ಎಲ್ಲರೂ ಕುಳಿತು ಊಟ ಮಾಡಿದರು.

ಸಾಯಂಕಾಲ ಐದೂವರೆ ಗಂಟೆಯ ಹೊತ್ತಿಗೆ ವಿಮಲೆಯೂ ವರ ದೆಯೂ ಮನೆಯ ಹೊರಗೆ ಬಂದರು. ಸಾಯಂಕಾಲದ ಹೊತ್ತು ಕುಳಿತು ಕೊಳ್ಳಲು ಮರದ ಕೆಳಗೆ ಏಳೆಂಟು ಹೊಸ ಬೆತ್ತದ ಕುರ್ಚಿಗಳನ್ನು ಹಾಕಿದ್ದರು. ಆಗಲೂ ವಿಮಲೆಯು ತಂಗಿಯೊಡನೆ ಹುಲ್ಲಿನ ಮೇಲೆಯೇ ಕುಳಿತುಕೊಂಡಳು.

ಮಾತನಾಡಲು ಅವರಿಗೆ ವಿಷಯವಿರಲಿಲ್ಲ. ಏನೋ ಮಾತನಾಡು ತ್ತಿದ್ದಾಗ ವಿಮಲೆಯು " ನಮಗೆ ಹೀಗೆ ಹುಲ್ಲಿನ ಮೇಲೆಯೇ ಕುಳಿತು ಕೊಂಡು ರೂಢಿಯಾಗಿದೆ. ಅಲ್ಲವೇ, ವರದಾ " ಎಂದು ಕೇಳಿದಳು.

ವರದೆಯು ಮಾತನಾಡುವುದರೊಳಗಾಗಿ ಶೀಲೆಯೂ, ಶಂಕರನೂ ಬಂದರು. ಶಂಕರನು " ಓಹೋ ! ಇಲ್ಲಿದ್ದೀರೋ " ಎಂದು ಹೇಳಿ ತಂಗಿಯರ ಹತ್ತಿರ ಬಂದು ತಾನೂ ಕುಳಿತುಕೊಂಡು, ಸಿಗರೇಟು ಹಚ್ಚಿದನು.

" ಈಗ ಕೆಲವು ದಿನಗಳಿಂದ ಶಿಶು ವಿಹಾರಕ್ಕೆ ಹೋಗದೇ ಇರುವುದು ಮನಸ್ಸಿಗೆ ಏನೋ ಒಂದು ವಿಧವಾಗಿದೆ " ಎಂದು ವರದೆಯು ಹೇಳಿದಳು.

ಶಂಕರನು ನಗುತ್ತಾ " ನಿನಗೆ ಶಿಶು ವಿಹಾರದ ಮೇಲೆ ಅಷ್ಟೊಂದು ಆಸಕ್ತಿ ಇರುವುದಾದರೆ ಅಲ್ಲಿಗೇ ಹೋಗಿ ಕೆಲಸ ಮಾಡು. ಆದರೆ

ಇಲ್ಲಿಯೇ ಒಂದು ಶಿಶು ವಿಹಾರವನ್ನು ಮಾಡಿ ಗಲಾಟೆ ಮಾಡಿಬಿಡಬೇಡ" ಎಂದು ಹೇಳಿದನು.

ಅಣ್ಣನೇನು ಮಾಡುತ್ತಾನೆಯೋ ಎಂಬ ಕುತೂಹಲದಿಂದ ವರದೆಯು "ಅಣ್ಣಾ ! ನೀನು ಲಾಗೆ ಓದುತ್ತೀಯಾ ?" ಎಂದು ಕೇಳಿದಳು.

ಅವನು "ಓದಿದರೂ ಓದಬಹುದು. ಆದರೆ ನನಗೆ ಅದು ಅಷ್ಟು ಇಷ್ಟವಿಲ್ಲ. ಈಗ ನನಗೆ ಕೆಲಸ ಕೊಟ್ಟಿರುವ ವೀರಪ್ಪ ಕಷ್ಟದಲ್ಲಿದ್ದಾನೆ. ಅವನ ಜೊತೆಯಲ್ಲಿಯೇ ವ್ಯಾಪಾರ ಮಾಡಿಕೊಂಡು ಇರೋಣವೆಂದುಕೊಂಡಿದ್ದೇನೆ" ಎಂದನು.

ಶೀಲೆಯು "ನೀನು ವೆಂಕಟರಾಯ್ಯನವರ ಬಳಿಗೆ ಹೋದಾಗ ಏನಾಯಿತೆಂಬುದನ್ನು ನಮಗೆ ಹೇಳಲೇ ಇಲ್ಲವಲ್ಲಣ್ಣ" ಎಂದು ಕೇಳಿದಳು.

"ಅದೇನು ಗುಟ್ಟಿಲ್ಲ, ಹೇಳಬಹುದು. ನೀನೆಲ್ಲಿ ಟಾಂಟಾಂ ಹೊಡೆದುಕೊಂಡು ಬರುತ್ತೀಯೋ, ಎಂದು ಯೋಚನೆ. ಹಾಗೆ ಮಾಡಿದರೂ ಹೆದರಿಕೆಯೇನಿಲ್ಲ. ಆದರದು ಅನಾವಶ್ಯಕ"

ವಿಮಲೆಯು "ಹಾಗೆನ್ನಬೇಡ, ಶಂಕರ. ಅತ್ತೆ ಸತ್ತ ದಿನದಿಂದ ಶೀಲೆಯು ಬಹಳ ಬುದ್ಧಿ ಕಲಿತುಕೊಂಡಿದ್ದಾಳೆ. ಅವಳ ಹುಡುಗತನವೆಲ್ಲವೂ ಹೋಗಿದೆ" ಎಂಬುದಾಗಿ ಹಿಂದೆ ಶಂಕರನು ಹೇಳಿದ್ದ ಮಾತನ್ನೇ ಅವನಿಗೆ ಹೇಳಿದಳು.

ಅನಂತರ "ವೆಂಕಟರಾಮಯ್ಯನವರು ನಮಗೆ ಮೋಸ ಮಾಡಿದಂತೆ ಆಗಲಿಲ್ಲವೆ ?" ಎಂದು ವಿಮಲೆ ಕೇಳಿದಳು.

"ಮೋಸವಷ್ಟೇ ಅಲ್ಲ. ಜೈಲಿಗೆ ಹೋಗುವಂತಹ ಕೆಲಸವನ್ನು ಮಾಡಿದ್ದನು"

ವಿಮಲೆಯು "ನಮ್ಮ ತಂದೆಯ ಬಳಿ ಹಣ ತೆಗೆದುಕೊಂಡು ಕಾಲೋನಿ ಮಾರಿದ್ದು ಮರೆತು ಹೋಯಿತಂತೆ" ಎಂದಳು.

"ಮೊನ್ನೆ ಅಚ್ಚಮ್ಮನವರು ಏನು ಹೇಳಿದರು ! ಅವರನ್ನು ನೋಡಲು ಲಲಿತಮ್ಮನವರು ಬಂದಿದ್ದರಂತೆ. ನಮ್ಮ ಯಜಮಾನರಿಗೆ ಬಹಳ ಮರವು ಅವರಿಂದ ಹೆಚ್ಚು ಕಡಿಮೆಯಾಯಿತು. ಇಲ್ಲದಿದ್ದರೆ ಹಾಗಾಗುತ್ತಿರಲಿಲ್ಲ ಎಂದು ಹೇಳಿದರಂತೆ" ಎಂದಳು ಶೀಲೆ.

ವರದೆಯು “ ವೆಂಕಟರಾಮಯ್ಯನವರು ಹೇಳುತ್ತಿರುವುದು ವಿಚಿತ್ರ ವಾಗಿದೆ. ನಮ್ಮಪ್ಪ ವಾಸು ಮೆಜಾರಿಟಿಗೆ ಬರುವವರೆವಿಗೆ ವಿಷಯವನ್ನು ಗುಟ್ಟಾಗಿಡಬೇಕು-ಎಂದು ಹೇಳಿದರಂತೆ. ನಮ್ಮಪ್ಪನಿಗೂ ಆತನಿಗೂ ಇದ್ದ ಸ್ನೇಹಕ್ಕಾಗಿ ವಿಷಯವನ್ನು ಮುಚ್ಚಿಡಬೇಕಾಯಿತು-ಎಂದು ಯಾರೊಂದಿಗೂ ಹೇಳಿದರಂತೆ ” ಎಂದಳು.

ಶಂಕರನು “ ಹೌದು. ನಮ್ಮಪ್ಪನಿಗೂ ಅವರಿಗೂ ಬಹಳ ಸ್ನೇಹ. ಅದರಿಂದಲೇ ಹದಿಮೂರು ವರ್ಷಗಳಿಂದ ಬಾಡಿಗೆಗಳನ್ನು ವಸೂಲು ಮಾಡಿ ತೆಗೆದುಕೊಂಡರು ” ಎಂದು ಕೋಪದಿಂದ ಹೇಳಿದನು.

ಶೀಲೆಯು “ ನೀನು ಹೋದಾಗ ಅವರೇನೆಂದರು ?” ಎಂದಳು.

“ ಎನ್ನುವುದಕ್ಕೆ ಏನೂ ಅವಕಾಶವೇ ಇರಲಿಲ್ಲ. ನಾನೂ ಶ್ಯಾಮಣ್ಣನವರೂ, ಅದೇದಿನ ನಮ್ಮಪ್ಪನೊಡನೆ ಕಾರ್ ಆಕ್ಸಿಡೆಂಟಿನಲ್ಲಿ ಸತ್ತುಹೋದ ಅಡ್ವೋಕೇಟ್ ಸುಂದರರಾಜಯ್ಯಂಗಾರ್ಯರ ತಮ್ಮ ರಾಜಗೋಪಾಲ್, ಅವರ ಮನೆಗೆ ಹೋದೆವು. ಈಗ ರಾಜಗೋಪಾಲ್ ಪ್ರಾಕ್ಟೀಸ್ ಮಾಡುತ್ತಿದ್ದಾರೆ. ಅವರು “ ನೀನು ಮಾಡಬಾರದಂತಹ ಮೋಸ ಮಾಡಿದ್ದೀಯೆ. ನಿನ್ನನ್ನು ಜೈಲಿಗೆ ಕಳಿಸುತ್ತೇನೆ ” ಎಂದು ಹೇಳಿದರು. ಶ್ಯಾಮಣ್ಣನವರು “ ನನಗೂ ಅರವತ್ತು ವರ್ಷದ ಮೇಲಾಗಿದೆ. ಇಂತಹ ಮೋಸವನ್ನು ನಾನು ಇದುವರೆವಿಗೆ ನೋಡಲೇ ಇಲ್ಲ” ಎಂದು ಹೇಳಿದರು

ವರದೆಯು “ ಆ ಕಾಗದ ಅತ್ತೆಯ ಪೆಟ್ಟಿಗೆಯಲ್ಲಿದ್ದದ್ದು ಆಶ್ಚರ್ಯ ” ಎಂದು ಹೇಳಿದಳು.

ಶಂಕರನು “ ಅದರಲ್ಲಿ ಅಂತಹ ಆಶ್ಚರ್ಯವೇನಿಲ್ಲ, ವರದಾ. ವೆಂಕಟರಾಮಯ್ಯನವರು ಮೊದಲಿನಿಂದಲೂ ಕಂಟ್ರಾಕ್ಟರಂತೆ. ಅವರು ಚೆನ್ನಾಗಿಯೇ ಇದ್ದರು. ಅವರೇ ಇಷ್ಟೊಂದು ಮನೆಗಳನ್ನು ಕಟ್ಟಿದರು. ಆಗಲೇ ಯುದ್ಧವು ಮೊದಲಾಗಿದ್ದಿತಂತೆ. ಅವರದಾವುದೋ ಲಕ್ಷಾಂತರ ರೂಪಾಯಿನ ಬಿಲ್ ಇಲ್ಲವೆಂದಾಗಿ ಕಷ್ಟ ಬಂದಿತು. ರಾಜಗೋಪಾಲ್ ಆ ಬಿಲ್ ಖೋಟಾ ಇರಬೇಕೆನ್ನುತ್ತಾರೆ. ಸಾಲಗಾರರ ತಗಾದೆ ಹೆಚ್ಚಾಯಿತು. ಇವರು ಊರು ಬಿಟ್ಟು ಓಡಿಹೋದರು. ನಮ್ಮಪ್ಪ ಎಂಟುಲಕ್ಷ ರೂಪಾಯಿ ಕೊಟ್ಟು ಅವನ್ನು ಬರೆಸಿಕೊಂಡರು. ಪತ್ರ ಮದರಾಸಿನಲ್ಲಿ

ಆಯಿತು. ಸುಂದರ ರಾಜಯ್ಯಂಗಾರ್ ಅದಕ್ಕೆ ಸಾಕ್ಷಿ ಹಾಕಿದ್ದಾರೆ. ವಾಪ್ಸು ಬರುವಾಗ ಅಪ್ಪ ಅತ್ತೆಯನ್ನು ಕಾಗದ ತೆಗೆದಿಡುವಂತೆ ಕೊಟ್ಟಿದ್ದಾರೆ. ಅತ್ತೆ ಪೆಟ್ಟಿಗೆಯಲ್ಲಿಟ್ಟಿದ್ದಾರೆ. ಅನಾಹುತವಾದ ನಂತರ ಅವರ ಬುದ್ಧಿಯುಕೆಟ್ಟುಹೋಗಿದ್ದುದರಿಂದ ಅವರಿಗೆ ಒಂದೂ ಜ್ಞಾಪಕವಿಲ್ಲ" ಎಂದನು

ಅಷ್ಟು ಹೊತ್ತಿಗೆ ವಾಸುವು ಬಂದು "ಅಕ್ಕ. ನಮ್ಮ ಸ್ಕೂಲಿನಲ್ಲಿ ಹುಡುಗರೆಲ್ಲರೂ ತಿಪ್ಪಗೊಂಡನ ಹಳ್ಳಿಗೆ ಟ್ರಿಪ್ ಹೋಗುತ್ತಾರೆ. ನಾನೂ ಹೋಗುತ್ತೇನೆ" ಎಂದು ಕೇಳಿದನು.

ವಿಮಲೆಯು ಆಗಲೆಂದು ಹೇಳಿದಳು.

ಶೀಲೆಯು "ಕಡೆಗೆ ಇತ್ಯರ್ಥ ಹೇಗಾಯಿತೆ"ಂದು ಕೇಳಿದಳು.

"ಆಗುವುದೇನು ? ನಮ್ಮ ಕಾಲೋನಿ ನಮಗೆ ಕೊಟ್ಟುಬಿಡುವುದು. ಇದುವರೆವಿಗೆ ವಸೂಲು ಮಾಡಿರುವ ಬಾಡಿಗೆಯಲ್ಲಿ ಅರ್ಧವನ್ನು ಕೊಡುವುದು. ಕೂಡಲೇ ಕಾಲುವಾಸಿ ಕೊಡುವುದು. ಉಳಿದ ಕಾಲುವಾಸಿಯನ್ನು ಕಂತುಗಳಲ್ಲಿ ಕೊಡುವುದೆಂದು ತೀರ್ಮಾನವಾಯಿತು. ಅವರನ್ನು ಜೈಲಿಗೆ ಕಳಿಸುವುದರಿಂದ ಏನು ಪ್ರಯೋಜನ ?"

ಊಟ ಮಾಡಿ ಮಲಗಿಕೊಳ್ಳುವುದಕ್ಕೆ ಹೋಗುವಾಗ ಶಂಕರನು ವೆಂಕಟರಾಯರ ವಿಷಯವೇನೂ ಗೊತ್ತೇ ಆಗಲಿಲ್ಲವಲ್ಲ" ಎಂದು ಹೇಳಿದನು.

"ಹೌದು. ಅದೇ ಯೋಚನೆಯಾಗಿದೆ" ಎಂದು ವಿಮಲೆಯು ಹೇಳಿದಳು.

"ಅವರೆಲ್ಲಿದ್ದಾರೆಂದು ಪತ್ತೆ ಮಾಡುವ ಮಾರ್ಗವೇ ಇಲ್ಲವೇನು ?"

"ನನಗೇನೂ ಕಂಡು ಬರಲಿಲ್ಲ. ಎಲ್ಲಿ ಹೋದರೋ ಯಾರು ಹೇಳವವರು ?"

"ಇಷ್ಟು ದಿನದಿಂದಲೂ ಇವರಿಂದ ಕಾಗದ ಪತ್ರಗಳಿಲ್ಲದಿರುವುದರಿಂದ ಅವರು ಬದುಕಿದ್ದಾರೆಯೋ ಇಲ್ಲವೋ ಎಂದು ಸಂದೇಹವಾಗಿದೆ"

ವಿಮಲೆಯು ಕೂಡಲೇ "ಇಲ್ಲ. ಅವರು ಸತ್ತಿಲ್ಲ" ಎಂದಳು.

ಶಂಕರನು " ಅದೇನು ಹಾಗೆ ಹೇಳುತ್ತೀಯೆ ?" ಎಂದು ಕೇಳಿದನು.

" ನನಗೇಕೋ ಹಾಗೇ ತೋರುತ್ತದೆ "

"ನಿನಗೆ ತೋರುವುದು ವಿಚಿತ್ರವಾಗಿದೆ. ಇಲ್ಲಿ ಅವರಿದ್ದಾಗ ಎಷ್ಟು ಕಷ್ಟವಾಗಿತ್ತು. ಅವರ ಬಟ್ಟೆಗಳು ಹರಿದು ಜೂಲಾಗಿದ್ದವು. ಎಲ್ಲಿಯಾದರೂ ಕೆಲಸ ಕೇಳಲು ಹೋಗೋಣವೆಂದರೆ ಅವರಿಗೆ ಸರಿಯಾದುದೊಂದು ಪಂಚೆ, ಬನಿಯನ್ನು ಸಹ ಇರಲಿಲ್ಲ. ಕ್ರಾಪು ಮಾಡಿಸಿಕೊಂಡು ಎರಡು ತಿಂಗಳಾಗಿತ್ತು. ಅಬ್ಬಾ ! ಅಂದಿನ ಕಷ್ಟವನ್ನು ನೆನೆಸಿಕೊಂಡರೆ ಈಗಲೂ ಮೈ ಜುಂ ಎನ್ನುತ್ತದೆ. ಹಾಗಿರುವಾಗ ನಮಗೆ ಎರಡನೆಯ ಮಗುವಾಗುತ್ತದೆಂದು ಗೊತ್ತಾಯಿತು. ಅದೇ ರಾತ್ರಿ ಸ್ವಲ್ಪ ಊರು ಬಿಟ್ಟು ಹೋಗಿ ಬರುತ್ತೇನೆ"ಂದು ಹೇಳಿ ಹೊರಟು ಹೋದರು. ಆ ರಾತ್ರಿ ಯಾವ ರೈಲೂ ಇರಲಿಲ್ಲ. ಏನಾದರೂ ಗೊತ್ತುಗುರಿಯಾಗುವವರವಿಗೆ ಅವರಿಗೆ ಕಾಗದ ಬರೆಯುವುದಕ್ಕೂ ವಾಪ್ಸು ಬರುವುದಕ್ಕೂ ಮನಸ್ಸಿಲ್ಲ "

ಆ ಮಾತಿಗೆ ಅವನು ಜವಾಬು ಹೇಳಲಿಲ್ಲ.

ವಿಮಲೆಯು ತನ್ನ ಕೋಣೆಗೆ ಬಂದಳು. ಪುಟ್ಟ ಮಂಚದ ಮೇಲಿದ್ದ ಹಾಸಿಗೆಯಲ್ಲಿ ಪುಷ್ಪಳು ಮಲಗಿ ಸುಖವಾಗಿ ನಿದ್ದೆ ಮಾಡುತ್ತಿದ್ದಳು. ದೀಪವನ್ನು ಹಚ್ಚಿ ಬಲು ಹೊತ್ತು ಮಗುವಿನ ಮುಖವನ್ನೇ ನೋಡುತ್ತಾ ತನ್ನ ಮಂಚದ ಮೇಲೆ ಕುಳಿತಿದ್ದಳು.

ಅನಂತರ ಪುಸ್ತಕ ಒಂದನ್ನು ತೆಗೆದು ಓದಲು ಪ್ರಯತ್ನ ಮಾಡಿದಳು. ಅವಳಿಂದ ಓದಲಾಗಿಲಿಲ್ಲ. ಪುಸ್ತಕವನ್ನು ಬಿಸಾಡಿ ಹಾಸಿಗೆಯ ಮೇಲೆ ಬಿದ್ದುಕೊಂಡಳು. ಬಲು ಹೊತ್ತು ಹೊರಳಾಡುತ್ತಲೇ ಇದ್ದಳು. ಅವಳಿಗೆ ನಿದ್ದೆ ಬರಲಿಲ್ಲ. ಅರ್ಧ ರಾತ್ರಿಯ ಮೇಲೆ ಯಾವಾಗಲೋ ನಿದ್ದೆ ಬಂದಿತು.

ಎರಡು ತಿಂಗಳಾದ ಮೇಲೆ ಒಂದು ದಿನ ಸುಮಾರು ಹನ್ನೊಂದೂವರ ಗಂಟೆಯಿರಬಹುದು. ವಿಮಲೆಯು ಹಜಾರದ ಸೋಫಾದ ಮೇಲೆ ಕುಳಿತು ಏನೋ ಪುಸ್ತಕವನ್ನು ಓದುತ್ತಿದ್ದಳು. ಪೋಸ್ಟ್ ಮ್ಯಾನ್ ಕವರೊಂದನ್ನು ತಂದು ಕೊಟ್ಟನು. ವಿಳಾಸವು ವಿಮಲೆಯ ಹೆಸರಿಗಿತ್ತು. ಅದು ನೋಡಿ

ಅವಳಿಗೆ ಆಶ್ಚರ್ಯವಾಯಿತು. ಆ ಮನೆಗೆ ಅಗಾಗ ಕಾಗದಗಳು ಬರುತ್ತಿದ್ದವು. ಆದರೆ ಅದೆಲ್ಲಾ ಶಂಕರನ ಹೆಸರಿಗೆ ಬರುತ್ತಿದ್ದವು. ಇದು ತನ್ನ ಹೆಸರಿಗೆ ಬಂದಿದೆ. ಮೊದಲು ನಟರಾಜನ ಕಾಗದವೇನೋ ಎಂದುಕೊಂಡಳು. ಅವನದಲ್ಲ. ವೆಂಕಟರಾಯನದೇನೋ ಎಂದೆನಿಸಿತು. ಅದೂ ಅಲ್ಲ. ಅವನ ಕೈ ಬರಹವಲ್ಲ.

ಕಾಗದವನ್ನು ಒಡೆದು ಓದಿದಳು. ಅದರಲ್ಲಿ ನಾಲ್ಕೇ ನಾಲ್ಕು ಪಂಕ್ತಿಗಳಿದ್ದವು. ಬರೆದವರು ರುಜು ಮಾಡಿರಲಿಲ್ಲ. " ನಿನ್ನ ಗಂಡ ವೆಂಕಟರಾಯನು ಗದಗಿನಲ್ಲಿದ್ದಾನೆ. ಅವನ ವಿಳಾಸವನ್ನು ಕೆಳಗೆ ಬರೆದಿದೆ. ಅವನು ಒಬ್ಬ ಸೂಳೆಯ ಮನೆಯಲ್ಲಿದ್ದು ಕೂಳು ಕಳೆದುಕೊಳ್ಳುತ್ತಿದ್ದಾನೆ. ಕೆಲಸವಿಲ್ಲ, ಕಾರ್ಯವಿಲ್ಲ. ನೀನು ಇಂತಹ ಉತ್ತಮವಾದ ಸ್ಥಿತಿಯಲ್ಲಿದ್ದು ನಿನ್ನ ಗಂಡನನ್ನು ಅಂತಹ ದಾರಣವಾದ ಸ್ಥಿತಿಯಲ್ಲಿಟ್ಟಿರುವುದು ನಾಚಿಕೆಗೇಡು " ಎಂಬರ್ಥದಲ್ಲಿ ಆ ಕಾಗದವು ಬರೆಯಲ್ಪಟ್ಟಿತ್ತು.

ವಿಮಲೆಯು ಕಾಗದವನ್ನು ಕವರಿನಲ್ಲಿ ಹಾಕಿ ಓದುತ್ತಿದ್ದ ಪುಸ್ತಕದಲ್ಲಿ ಕವರನ್ನು ಇಟ್ಟು ಯೋಚಿಸುತ್ತಾ ಕುಳಿತುಕೊಂಡಳು.

ಪಕ್ಕದಲ್ಲಿ ಮಲಗಿದ್ದ ಪುಷ್ಪಳ ಕಡೆಗೆ ಅವಳ ದೃಷ್ಟಿಯು ಹರಿಯಿತು. ಮಗುವಿಗೆ ನಿದ್ದೆ ಬಂದಿತ್ತು. ಅದು ಯಾವುದೋ ಸುಖಸ್ವಪ್ನವನ್ನು ನೋಡುತ್ತಿದ್ದಿರಬೇಕು. ಮುಖದ ಮೇಲೆ ಮಂದಹಾಸವಿದ್ದಿತು. ಗುಂಡು ಗುಂಡಾದ ಕೆನ್ನೆಗಳ ಮೇಲೆ ಕೊನೆಯಲ್ಲಿ ತುಸು ಕೆಂಪು ಕಂಡುಬರುತ್ತಿದ್ದಿತು. ಎಳಸಾದ ಕಪ್ಪನೆಯ ಕೂದಲುಗಳು ಗಾಳಿಗೆ ಹಾರುತ್ತಿದ್ದವು. ಅದರ ಪುಟ್ಟ ಮೂಗು, ಅದರ ತೆಳುವಾದ ತುಟಿಗಳನ್ನು ನೋಡಿದರೆ ಮುತ್ತಿಡೋಣವೆನ್ನಿಸುವಂತಿತ್ತು. ಅದರ ಒಂದು ಕೈ ದೇಹದ ಬಳಿ ಇದ್ದು, ಮತ್ತೊಂದು ಕೈ ಚಾಚಿತ್ತು. ಅದೆಷ್ಟು ಮೃದುವಾದ ಮುದ್ದು ಕೈ.

ಆಗ ಮಗುವನ್ನು ನೋಡಿದ ವಿಮಲೆಗೆ ಇಪ್ಪತ್ತೆರಡು ವರ್ಷಗಳ ಹಿಂದೆ ನಾನೂ ಇದೇ ಮನೆಯಲ್ಲಿ ಈ ರೀತಿಯಾಗಿ ಬಿದ್ದುಕೊಂಡಿದ್ದೆನೇನೋ ಎಂದೆನಿಸಿತು.

ಹಾಗೆಯೇ ಅವಳಿಗೆ ಆ ಭೀಕರವಾದ ರಾತ್ರಿ–ಅತ್ತೆ ಸತ್ತ ರಾತ್ರಿಯ ನೆನಪು ಬಂದಿತು. ಆ ಗಾಳಿ–ಆ ಮಳೆ ಆ ವೃಕ್ಷದ ಪತನ. ಆಸ್ಪತ್ರೆಯಲ್ಲಿ

ತನ್ನ ಆಪರೇಷನ್. ಈಗಲೂ ನೆನೆಸಿಕೊಂಡರೆ ಅವಳಿಗೆ ಮೈ ನಡುಗುವಂತಾಗುತ್ತಿತ್ತು.

ಒಂದೊಂದಾಗಿ ಅನೇಕ ಘಟನೆಗಳು ಅವಳಿಗೆ ನೆನಪು ಬಂದುವು. ತಾಯಿಯ ಮರಣ, ತಾವು ಕೆಂಗೇರಿಯಲ್ಲಿದ್ದುದು, ವೆಂಕಟರಾಯನ ಸ್ನೇಹ ಎಲ್ಲವೂ ನೆನಪು ಬಂದುವು. ಆ ದಿನ ರಾತ್ರಿ ತಾನೇಕೆ ಕೃಷ್ಣರಾಜ ಸಾಗರದಲ್ಲಿ ಅವನಿಗೆ ಆತ್ಮಾರ್ಪಣೆ ಮಾಡಬೇಕಾಗಿದ್ದಿತು ? ಅನಂತರ ಆರ್ಯ ಸಮಾಜದಲ್ಲಿ ಅವನ ಬಲಾತ್ಕಾರಕ್ಕೆ ಒಳಗಾಗಿ ಯಾಕೆ ಮದುವೆಯಾಗಬೇಕಾಗಿದ್ದಿತು ? ಇಪ್ಪತ್ತು ವರ್ಷದ ತಾಯಿ ಸತ್ತ ಮಗಳಾದ ತನಗೆ ಅದಲ್ಲದೇ ಬೇರೆಯ ಗತ್ಯಂತರವೇ ಇರಲಿಲ್ಲವೇನು ?

ಒಂದು ಗಂಟೆಯ ಮೊದಲು ವಿಮಲೆಯು ಸಮಾಧಾನದಿಂದ ಇದ್ದಳು. ಸಂತೋಷವಾಗಿದ್ದಳು. ಈಗ........ಈಗ ಪುನಃ ಗಾಢಾಂಧಕಾರವು ಅವಳನ್ನು ಆವರಿಸಿಕೊಂಡಿದೆ.

## ೨೩

ಐದಾರು ದಿನಗಳ ನಂತರ ಒಂದು ದಿನ ಸಂಧ್ಯಾಕಾಲ. ಮನೆಯ ಹೊರಗೆ ದೊಡ್ಡ ಮರದ ಕೆಳಗೆ ಮೂಮೂಲಿನಂತೆ ಐದಾರು ಬೆತ್ತದ ಕುರ್ಚಿ ಗಳನ್ನು ಹಾಕಿದ್ದರು. ವಿಮಲೆ ಸಾಧಾರಣವಾದ ಬಿಳಿಯ ಸೀರೆಯನ್ನು ಉಟ್ಟುಕೊಂಡು ಮಹಡಿಯ ಮೆಟ್ಟಲುಗಳನ್ನು ಇಳಿದು ಕೆಳಗೆ ಬಂದಳು.

ಅವಳು ಬೆತ್ತದ ಕುರ್ಚಿಗಳ ಬಳಿಗೆ ಬರುವ ವೇಳೆಗೆ ಶಂಕರನು ಅಲ್ಲಿ ಬಂದು ನಿಂತು ಸಿಗರೇಟು ಸೇದುತ್ತಾ ಇದ್ದನು.

ವಿಮಲೆಯು ಕುರ್ಚಿಯೊಂದರ ಮೇಲೆ ಕುಳಿತು " ನೀನು ಬಂದು ಎಷ್ಟು ಹೊತ್ತಾಯಿತು, ಶಂಕರ " ಎಂದು ಕೇಳಿದಳು.

" ಈಗತಾನೇ ಬಂದು ಸಿಗರೇಟು ಹಚ್ಚಿದೆ. ಅಷ್ಟು ಹೊತ್ತಿಗೆ ನೀನೂ ಬಂದೆ " ಎಂದು ಹೇಳಿ ಅವನೊಂದು ಕುರ್ಚಿಯ ಮೇಲೆ ಕುಳಿತುಕೊಂಡನು.

" ರೈಲು ಎಷ್ಟು ಹೊತ್ತಿಗೆ ಬರುತ್ತದೆಯೋ ?"

" ಗುಂಟಕಲ್ ಗಾಡಿಯು ಬಂದಿರಬೇಕು ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಬಂದುಬಿಡಬಹುದು "

ಅಷ್ಟು ಹೊತ್ತಿಗೆ ಪುಷ್ಪಳು ಪುಟ್ಟ ಪುಟ್ಟ ಹೆಜ್ಜೆಗಳನ್ನಿಡುತ್ತಾ ಬಂದು ತಾಯಿಯ ಬಳಿ ನಿಂತುಕೊಂಡಳು. ತಾಯಿಯು ಮಗಳನ್ನು ಮಾತ ನಾಡಿಸಿದಳು.

ಸ್ವಾಭಾವಿಕವಾಗಿ ತಾಯಿಯ ಮುಖದಲ್ಲಿರುತ್ತಿದ್ದ ಮಂದಹಾಸವು ಈದಿನ ಇಲ್ಲವೆಂಬುದು ಆ ಮಗುವಿಗೆ ಗೊತ್ತಾಗಲಿಲ್ಲ.

" ನೀನು ನಿನ್ನ ಮನಸ್ಸನ್ನು ಸ್ಥಿರಮಾಡಿದ್ದೀ ತಾನೇ, ವಿಮಲಾ "

" ಮಾಡಿದ್ದೇನೆ " ಎಂದು ನಿಧಾನವಾಗಿ ಅವಳು ಉತ್ತರ ಕೊಟ್ಟಳು.

" ಸ್ವಲ್ಪವೂ ದಾಕ್ಷಿಣ್ಯ ಮಾಡಿಕೊಳ್ಳಬೇಡ. ಅವನು "ಇಲ್ಲ. ನಾನು ಹಾಗಿರಲಿಲ್ಲ, ಹೀಗಿರಲಿಲ್ಲ " ಎಂದು ಕತೆಗಳನ್ನು ಹೇಳಬಹುದು. ಅದೊಂದನ್ನೂ ನಂಬಬೇಡ "

" ಶಂಕರ. ನಾನೂ ಮನುಷ್ಯಳು. ನನಗೂ ಮನಸ್ಸು, ಹೃದಯ ಮುಂತಾದುವುಗಳಿವೆ. ಅವರು ಇಷ್ಟೊಂದು ಹತ್ತಿರದಲ್ಲಿದ್ದರೂ ಬಂದು ನನ್ನನ್ನು ನೋಡಲಿಲ್ಲ. ಯಾವಳ ಮನೆಯಲ್ಲಿಯೋ ನಾಚಿಕೆ ಕೆಟ್ಟು ಜೀವನ ಮಾಡುತ್ತಿದ್ದರು. ಅದೆಲ್ಲಾ ನನಗೆ ಗೊತ್ತಿಲ್ಲವೇ ? ಅವರನ್ನು ಹಾಗೆಯೇ ಮರೆತುಬಿಡುತ್ತಿದ್ದೆ. ಆದರೆ ಅದು ಧೀರರ ಲಕ್ಷಣವಲ್ಲ. ಕರೆದು, ಎದುರು ಎದುರಿಗೆ ಮಾತನಾಡಿ, " ನೀವು ತಪ್ಪು ಮಾಡಿದಿರಿ. ಹೊರಟು ಹೋಗಿರಿ. ನನ್ನನ್ನು ಮರೆತುಬಿಡಿರಿ " ಎಂದು ಹೇಳುತ್ತೇನೆ. ಅದನ್ನು ಹೇಳುವುದಕ್ಕಾಗಿಯೇ ಅವರನ್ನು ಬರಬೇಕೆಂದು ಕಾಗದ ಬರೆದೆ.

" ನಮಗೆ ಐಶ್ವರ್ಯವು ಬಂದಿರುವುದು ಅವನಿಗೆ ಗೊತ್ತಿದೆಯೇನು ?"

" ನಾನಂತೂ ಅವರಿಗೇನೂ ಬರೆದಿಲ್ಲ "

" ಮತ್ತೆ ಈ ಮನೆಗೆ ಬರಬೇಕೆಂದು ಬರೆದಿರುವುದರಿಂದ ಏನು ತಿಳಿದುಕೊಳ್ಳಬಹುದು ?"

" ಏನಾದರೂ ತಿಳಿದುಕೊಳ್ಳಲಿ, ಅದಕ್ಕೂ ನನಗೂ ಏನು ಸಂಬಂಧ?"

ಶಂಕರನು ಸ್ವಲ್ಪ ಹೊತ್ತು ತಡೆದು " ವಿಮಲಾ. ಅವನನ್ನು ಬೈದು ಕಳಿಸಿಬಿಡುವುದಂತೂ ಸರಿ. ಕಡೆಗೆ ಅವನು ಪುಷ್ಪಳು ತನ್ನ ಮಗುವೆಂದೂ ತನಗೆ ಬೇಕೆಂದೂ ಕೋರ್ಟಿನಲ್ಲಿ ದಾವಾ ಮಾಡಿದರೇನು ಗತಿ ? ಯಾರಾದರೂ ಲಾಯರನ್ನು ಕೇಳಬೇಕಾಗಿದ್ದಿತು " ಎಂದನು.

" ಮಕ್ಕಳು ತಾಯಿಗೆ ಸೇರಿದವು. ಪುಷ್ಪಳನ್ನು ಕೇಳಲು ಅವರಿಗೇನು ಅಧಿಕಾರ ?"

" ಹಾಗಾದರೆ ನಿನಗಾತನ ಮೇಲೆ ವಿಶ್ವಾಸವೇ ಇಲ್ಲವೆಂದಾಯಿತು "

" ಇತ್ತು. ಅದನ್ನು ಅವರೇ ಕಳೆದುಕೊಂಡರು "

" ನೋಡು, ಶಂಕರ. ಅವರು ಬಂದ ಹಾಗಿದೆ " ಎಂದು ಹೇಳಿದಳು.

ಹಾಗೆ ಹೇಳಿದರೂ ಆಗಂತುಕನು ತನ್ನ ಪತಿಯೋ ಎಂದು ಅವಳು ದೃಢವಾಗಿ ನಂಬಲಾರದೇ ಹೋದಳು. ಯಾಕೆಂದರೆ ಆಗಂತುಕನು ಜೂಲು ಬಟ್ಟೆಗಳನ್ನು ಧರಿಸಿದ್ದನು. ಅವನ ತಲೆಯು ಪೊದೆಗಳಂತೆ ಬೆಳೆದಿದ್ದಿತು. ಮುಖ ಕ್ಷೌರ ಮಾಡಿಕೊಂಡು ಕಡೆಯ ಪಕ್ಷ ಎರಡು ವಾರಗಳಾದರೂ ಆಗಿದ್ದಿರಬಹುದು. ಬಹಳ ವಯಸ್ಸಾದವನಂತೆ ಕಂಡು ಬರುತ್ತಿದ್ದನು. ಮುಖವು ಕಪ್ಪಾಗಿ ಮುಂಕುಬಡಿದುಕೊಂಡು ಹೋಗಿದ್ದಿತು.

ಆಗಂತುಕನು ಹತ್ತಿರ ಹತ್ತಿರಕ್ಕೆ ಬಂದನು. ತನ್ನ ಹೆಂಡತಿಯನ್ನು ನೋಡಿದನು. ಶಂಕರನನ್ನು ನೋಡಿದನು. ಅವರು ನಿಶ್ಚಿಂತರಾಗಿ ಕುರ್ಚಿಗಳ ಮೇಲೆ ಕುಳಿತಿರುವುದನ್ನು ನೋಡಿದನು.

ವಿಸ್ಮಯದಿಂದ " ವಿಮ್ಮು! ಇದೆಲ್ಲವೂ ಏನು ? ನಿಮ್ಮ ಹಳೆಯ ಬಂಗಲೆ........ಇವೆಲ್ಲವೂ ನನಗೆ ಸ್ವಪ್ನದಂತೆ ಕಂಡು ಬರುತ್ತದೆಯಲ್ಲಾ " ಎಂದು ಕೇಳಿದನು.

ಅವನು ಮಾತನ್ನು ಆಡುತ್ತಲೇ ವಿಮಲೆಯ ಹೃದಯದ ಕೆಳಭಾಗದಿಂದ ಕರುಣೆಯ ಪೋಲಿನವರೆವಿಗೆ ಉಕ್ಕಿಬಂದಿತು. ಅದು ಅವಳ ಕತ್ತು ಕಟ್ಟಿಕೊಂಡಂತೆ ಮಾಡಿತು. ಅವಳು ಮಾತನಾಡಲಾರದವಳಾದಳು. ಒಂದು ವಾರದಿಂದ ಗಂಡನು ಬಂದ ಕೂಡಲೇ ಏನೇನು ಮಾತನಾಡಬೇಕೆಂದು ಅವಳು ಸಂಕಲ್ಪ ಮಾಡಿಕೊಂಡಿದ್ದಳೋ ಅವೆಲ್ಲವೂ ಮರೆತು ಹೋಯಿತು. ಗಾಢಾಂಧಕಾರದಲ್ಲಿ ನಿಂತು ತಲ್ಲಣಿಸುವ ಕುರುಡಳಂತಾಯಿತು.

ಅವನು ಅವಳ ಪಕ್ಕದಲ್ಲಿ ಕುರ್ಚಿಯ ಮೇಲೆ ಕುಳಿತುಕೊಂಡು, ಅವಳ ಕಡೆಗೆ ನೋಡುತ್ತಾ ಅವಳ ಕುರ್ಚಿಯ ಕೈಮೇಲೆ ಕೈಯಿಟ್ಟುಕೊಂಡು " ವಿಮ್ಮು. ಇದೆಲ್ಲಾ ಏನು ? ಈ ಬದಲಾವಣೆಗೆಲ್ಲಾ ಏನು ಕಾರಣ ?" ಎಂದು ಕೇಳಿದನು.

" ನೀವೆಲ್ಲಿದ್ದಿರಿ ? ಏನು ಮಾಡುತ್ತಿದ್ದೀರಿ ?" ಎಂದು ವಿಮಲೆಯು ಬಹಳ ಕಷ್ಟದಿಂದ ಕೇಳಿದಳು.

" ಅಯ್ಯೋ, ನನ್ನ ಕತೆಯೆ ! ನಾನೇನು ಮಾಡುತ್ತಿದ್ದೇನೇ ? ಏನು ಹೇಳಲಿ ! ನಾನು ಯಾಕೆ ಬದುಕಿದ್ದೇನೆಂಬುದನ್ನೇ ಕಾಣೆ........" ಎಂದು ಮುಂದೇನೋ ಮಾತನಾಡುವುದಕ್ಕೆ ಹೋಗಿ ತಡೆದನು.

ಅವನು ಕ್ಷಮಾಯಾಚನೆಯನ್ನು ಮಾಡುವವನಂತೆ, ಅಂಗಲಾಚಿ ಕೇಳುವ ಭಿಕ್ಷುಕನಂತೆ ಕಂಡನು. ವಿಮಲೆಯ ಕರುಳನ್ನು ಹಿಸುಕಿದಂತಾ ಯಿತು. ಷೇವ್ ಮಾಡಿಕೊಂಡು, ಸ್ನಾನ ಮಾಡಿ ಮೊದಲಿನಂತೆ ಬಟ್ಟೆ ಗಳನ್ನು ಧರಿಸಿದರೆ ಹೇಗೆ ಕಾಣುತ್ತಾರೆ–ಎಂದುಕೊಂಡಳು.

ಆತನು ಆ ಸುಖವನ್ನು ಪಟ್ಟು ಬಹಳ ದಿನಗಳಾಗಿರಬೇಕು.

" ಎಷ್ಟೋ ಬಾರಿ ಕಾಗದ ಬರೆಯಬೇಕೆಂದುಕೊಂಡೆ. ಏನೆಂದು ಬರೆಯಲಿ. ನನ್ನ ಹೊಟ್ಟೆಗೆ, ನನ್ನ ಬಟ್ಟೆಗೆ ಸಂಪಾದಿಸಿಕೊಳ್ಳಲಾರದವ ನಾಗಿದ್ದು, ನಾನು ಬರುತ್ತೇನೆಂದು ಎಷ್ಟೋ ಉತ್ಸಾಹದಿಂದ ಕಾಯುತ್ತಾ ಕಷ್ಟಪಡುತ್ತಿರುವ ಹೆಂಡತಿ ಮಕ್ಕಳಿಗೆ ಏನೆಂದು ಕಾಗದ ಬರೆಯಲಿ. ಎಷ್ಟೋ ಬಾರಿ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ತೋರಿತು. ಹೃದಯದಲ್ಲಿ ಎಲ್ಲಿಯೋ ಒಂದು ಕಡೆ " ಮಾಡಿಕೊಳ್ಳಬೇಡ " ಎಂದು ದನಿಯಾಗುತ್ತಿದ್ದಂತೆ ಭಾಸವಾಗುತ್ತಿತ್ತು. ಇದೇಕೆ ಹೀಗಾಗುತ್ತದೆ–ಎಂದು ಯೋಚನೆ ಮಾಡುತ್ತಿದ್ದೆ. ಈಗ ನನಗದು ಬಗೆ ಹರಿಯಿತು. ನೀವೆಲ್ಲರೂ ಸುಖವಾಗಿರುವುದನ್ನು ನೋಡುವ ಭಾಗ್ಯವೊಂದೇ ಪಾಪಾತ್ಮನಾದ ನನ್ನ ಹಣೆಯಲ್ಲಿ ಬರೆದಿದ್ದಿತು. ನಾನು ಅಲ್ಲಿದ್ದೇನೆಂದು ನಿಮಗೆ ಹೇಗೆ ಗೊತ್ತಾಯಿತು ?"

ಶಂಕರನು " ಯಾರೋ ಒಂದು ಮೂಗು ಕಾಗದ ಬರೆದರು. ಗದಗಿ ನಲ್ಲಿ ನೀವು ಯಾವಳೋ ಸೂಳೆಯ ಮನೆಯಲ್ಲಿದ್ದೀರೆಂದು ಬರೆದು ಅಡ್ರೆಸ್ ಕೊಟ್ಟಿದ್ದರು " ಎಂದು ಹೇಳಿದನು.

" ಶಿವಶಿವಾ ! ನಾನು ಸೂಳೆಯ ಮನೆಯಲ್ಲಿರಲಿಲ್ಲ. ಅಲ್ಲಿ, ಮನೆ ಯಲ್ಲಿಯೇ ಬಂದವರಿಂದ ಹಣ ತೆಗೆದುಕೊಂಡು ಊಟವಿಡುತ್ತಾ ಜೀವನ ಮಾಡುತ್ತಿದ್ದ ಒಬ್ಬ ಹೆಂಗಸಿನ ಹೋಟಲಿನಲ್ಲಿದ್ದೆ. ಅವಳು ಲಿಂಗವಂತ ರವಳು. ಆಕೆಯ ವಿಷಯವಾಗಿ ಆ ಊರಿನಲ್ಲಿಯೂ ಹಾಗೆ ಮಾತನಾಡು ವುದನ್ನು ಕೇಳಿದ್ದೇನೆ. ಜನರು ಬಡವರನ್ನು ಏನು ಬೇಕಾದರೂ ಅನ್ನುತ್ತಾರೆ.

ಅದೇ ಲೋಕಸ್ವಭಾವ. ಆಕೆಯು ವಿಧವೆ. ಜೀವನೋಪಾಯವಿಲ್ಲದೇ ಊಟ ಹಾಕಿ ಹಣ ತೆಗೆದುಕೊಳ್ಳುತ್ತಾಳೆ. ನನ್ನ ಪಾಲಿಗಂತೂ ಅವಳು ತಾಯಿ. ದೇವತೆ. ಹೀಗೆ ನನ್ನ ಹೆಂಡತಿಯಿಂದ ಕಾಗದ ಬಂದಿದೆ ಎಂದು ಹೇಳಿದೆ. ಅವಳು ಕಣ್ಣಿನಲ್ಲಿ ನೀರು ತಂದುಕೊಂಡು ಆನಂದದಿಂದ "ಹೋಗಿಬಾ" ಎಂದು ಹೇಳಿ, ಯಾರ ಬಳಿಯೋ ರೈಲ್ವೆ ಚಾರ್ಜು ಸಾಲ ತೆಗೆದುಕೊಟ್ಟಳು. ಆ ತಾಯಿಯ ಅನುಗ್ರಹವಿಲ್ಲದಿದ್ದರೆ ನಿಮ್ಮನ್ನು ಬಂದು ನೋಡುವುದಕ್ಕೂ ಸಾಧ್ಯವಿಲ್ಲದೇ ಹೋಗುತ್ತಿದ್ದಿತು"

ಅಣ್ಣತಂಗಿಯರಲ್ಲಿದ್ದ ದ್ವೇಷ-ಕೋಪ-ಪ್ರತೀಕಾರಗಳೆಲ್ಲವೂ ಗಾಳಿಯಲ್ಲಿ ಹಾರಿ ಹೋದವು. ಅವನ ವಿಷಯದಲ್ಲಿ ಕೇವಲ ಕನಿಕರ, ಪಶ್ಚಾತ್ತಾಪಗಳು ಮಾತ್ರ ಉಳಿದವು. ಶಂಕರನು ಮೌನವಾಗಿ ಕುಳಿತುಕೊಂಡನು. ಪುಷ್ಪಳು ಮಾವನ ತೊಡೆಯ ಮೇಲೆ ಕುಳಿತುಕೊಂಡು ತನ್ನ ಪುಟ್ಟ ಜಗತ್ತಿನಲ್ಲಿ ಎದುರಿಗೆ ಬಂದು ಕುಳಿತು ಮಾತನಾಡುತ್ತಿರುವ ಆಗಂತುಕನಿಗೂ ಒಂದು ಸ್ಥಾನವಿದೆಯೋ ಎಂಬಂತೆ ನೋಡುತ್ತಿದ್ದಳು. ಗಂಡನು ಹೇಳುತ್ತಿದ್ದುದನ್ನು ಕೇಳುತ್ತಿದ್ದಳೋ, ಇಲ್ಲವೋ, ಎಂಬಂತೆ ವಿಮಲೆಯು ಎಲ್ಲಿಯೋ ನೋಡುತ್ತಾ ಕುಳಿತಿದ್ದಳು.

ವಿಮಲೆಗೆ ಒಳ್ಳೆಯ ಸಂಧಿಗ್ಧಾವಸ್ಥೆಯು ಬಂದಿತು. ಬಂದ ಪರಿಸ್ಥಿತಿಗಳನ್ನು ಆಗಿಂದಾಗ್ಗೆ ಸ್ವೀಕರಿಸುತ್ತಾ ಬಂದ ಹಾಗೆ ಅವಳು ಈ ಪರಿಸ್ಥಿತಿಯನ್ನು ಸಹ ಸ್ವೀಕರಿಸಬೇಕಾಗಿ ಬಂದಿತು. ಅದು ವಿನಾ ಬೇರೆಯ ಮಾರ್ಗವೇ ಇರಲಿಲ್ಲ. ಒಂದು ಬಾರಿ ಕೃಷ್ಣರಾಜ ಸಾಗರದಲ್ಲಿ ಅವಳು ಅವನಿಗೆ ಅಧೀನಳಾಗಿದ್ದಳು. ಅಂದಿನಿಂದ ಹೆಜ್ಜೆ ಹೆಜ್ಜೆಗೂ ಅವಳು ಅವನಿಗೆ ಅಧೀನಳಾಗಬೇಕಾಗಿ ಬಂದಿತು. ಈಗಲೂ ಹಾಗೆಯೇ ಆಗಿದೆ. ಮುಂದೆ ಬೇರೆಯ ಮಾರ್ಗವೇ ಇಲ್ಲ.

ಹರಿದ ಬಟ್ಟೆಗಳನ್ನು ಹಾಕಿಕೊಂಡು, ತಲೆ ಗಡ್ಡಗಳನ್ನು ಬೆಳೆಸಿಕೊಂಡು, ನಿರಾಶನಾಗಿ ಪತಿಯು ಬಂದಿದ್ದಾನೆ. ತಾನು ವೃಕ್ಷ ಛಾಯೆಯಲ್ಲಿ ಸೊಗಸಾದ ಚಿತ್ತದ ಕುರ್ಚಿಯ ಮೇಲೆ ಕುಳಿತುಕೊಂಡಿದ್ದಾಳೆ. ಮಗುವು ಅಲ್ಲಿಯೇ ಇದೆ. ಇದ್ದ ಕಷ್ಟವು ಮಾಯವಾಗಿದೆ. ದುಃಖದ ದಿನಗಳು ಕಳೆದು ಸುಖೋದಯವಾಗಿದೆ. ಇಂತಹ ಸಮಯದಲ್ಲಿ ವಿಮಲೆ

ಯೇನು ಮಾಡಬೇಕು ? ಯಾರಾದರೂ ಒಬ್ಬ ಸ್ನೇಹಿತನು ಇಂತಹ ಕಷ್ಟದ ಲ್ಲಿರುವಾಗ ಅವನಿಗೆ ಸಹಾಯ ಮಾಡುವುದಿಲ್ಲವೇ ? ಅಷ್ಟಾದರೂ ಇವನಿಗೆ ಮಾಡಬೇಡವೇ ? ಎಂದೆನಿಸುತ್ತಿತ್ತು.

ಶಂಕರನು ಸಿಗರೇಟು ಹಚ್ಚಿಕೊಂಡು ಎದ್ದು ಹೊರಟು ಹೋದನು. ಅಲ್ಲಿ ವಿಮಲೆ–ವೆಂಕಟರಾಯ ಇಬ್ಬರೇ ಕುಳಿತಿದ್ದರು. ಪುಷ್ಪಳೂ ಅಲ್ಲಿಯೇ ಇದ್ದಳು. ವೆಂಕಟರಾಯನು ತನ್ನ ಕುರ್ಚಿಯನ್ನು ವಿಮಲೆಯ ಬಳಿಗೆ ಎಳೆದುಕೊಂಡನು. ಪತಿಪತ್ನಿಯರು ಬಹಳ ಹೊತ್ತು ಅಲ್ಲಿಯೇ ಮಾತನಾ ಡುತ್ತಾ ಕುಳಿತಿದ್ದರು. ಕತ್ತಲು ಕವಿದು ಬರಲಾರಂಭಿಸಿತು. ಮನೆಯ ದೀಪಗಳನ್ನೆಲ್ಲಾ ಹಚ್ಚಿದ್ದರು. ವಾಸುವೂ ಅವನ ಸ್ನೇಹಿತರೂ ಮನೆಯ ಮುಂದೆ ಕೂಗುತ್ತಾ ಗಲಾಟೆ ಮಾಡುತ್ತಿದ್ದರು.

ವಿಮಲೆಯು ಪುಷ್ಪಳ ಕೈ ಹಿಡಿದುಕೊಂಡು ಮನೆಯ ಕಡೆಗೆ ಹೋದಳು. ವೆಂಕಟರಾಯನೂ ತನ್ನ ಹೆಂಡತಿ ಮಕ್ಕಳ ಹಿಂದೆ ಹೋದನು. ವಿಮಲೆಯು ಹಜಾರವನ್ನು ಪ್ರವೇಶಿಸಿದೊಡನೆಯೇ ಒಂದು ಕೊನೆಯಲ್ಲಿ ನಿಂತಿದ್ದ ಅಣ್ಣನ ಬಳಿಗೆ ಹೋದಳು. ವೆಂಕಟರಾಯನು ಗೋಡೆಯ ಮೇಲಿದ್ದ ಚಿತ್ರವನ್ನು ನೋಡುತ್ತಾ ನಿಂತಿದ್ದನು.

ವಿಮಲೆಯು " ಅವರು ಇಲ್ಲಿರುತ್ತಾರೆ. ಅತ್ತೆಯ ಕೋಣೆಯಲ್ಲಿ ಇರ ಬಹುದಲ್ಲವೆ ?" ಎಂದಳು.

" ನಾನೂ ಹಾಗೇ ಎಂದುಕೊಂಡೆ "

" ನಾನು ಅವರನ್ನು ಹೋಗಿರೆಂದು ಹೇಳಲಾರದೇ........"

" ಯಾಕೆ ಹೇಳಬೇಕು ? ನೀನು ಮಾಡಿದುದೇ ಸರಿ "

ವಿಮಲೆಯು ಸಂದೇಹದಿಂದ " ತಮಾಷೆ ಮಾಡುತ್ತಿದ್ದೀಯೋ, ನಿಜವಾಗಿ ಮಾತನಾಡುತ್ತಿದ್ದೀಯಣ್ಣಾ " ಎಂದು ಕೇಳಿದಳು.

" ತಮಾಷೆಯೇನು ಬಂದಿತು, ವಿಮಲಾ ! ಯಾರೇ ಆಗಲಿ ಕಷ್ಟ ದಲ್ಲಿರುವವರ ಮನಸ್ಸಿಗೆ ನಾವೇಕೆ ನೋವುಂಟು ಮಾಡಬೇಕು "

ವಿಮಲೆಯು ಪರಿಚಾರಕನನ್ನು ಕರೆದು " ಇವರಿಗೆ ಸ್ನಾನದ ಮನೆ ಯನ್ನು ತೋರಿಸು. ಸೋಪು ಚೌಕಗಳನ್ನು ತೆಗೆದುಕೊಂಡು ಹೋಗಿಡು. ಶಂಕರನ ಪಂಚೆ ಬನಿಯನ್ನುಗಳನ್ನಿಡು " ಎಂದು ಹೇಳಿದಳು.

ವೆಂಕಟರಾಯನು ಸ್ನಾನದ ಮನೆಗೆ ಹೋದ ನಂತರ ವಿಮಲೆಯು ಶಂಕರನ ಪಕ್ಕದಲ್ಲಿ ಸೋಫಾದ ಮೇಲೆ ಕುಳಿತುಕೊಂಡು, " ನಾನೇ ಅವರನ್ನು ಇರಲು ಹೇಳಿದೆ. ಗದುಗಿನಲ್ಲಿಯೋ ಇನ್ನೆಲ್ಲಿಯೋ ಇರುವುದಕ್ಕಿಂತ ಇಲ್ಲಿದ್ದು ಕೆಲಸವನ್ನು ಹುಡುಕುವುದು ಒಳ್ಳೆಯದೆಂದು ಹೇಳಿದೆ. ಅವರು ನಮ್ರತೆಯಿಂದ " ಈಗ ನಿಮ್ಮ ಅಣ್ಣನ ಮಾತು ನಡೆಯುತ್ತದೆ. ಆತ ಎಲ್ಲಿಯಾದರೂ ನನಗೆ ಕೆಲಸ ಕೊಡಿಸಬಹುದು " ಎಂದರು " ಎಂಬುದಾಗಿ ಹೇಳಿದಳು.

ಶಂಕರನು " ನೀನು ಮಾಡಿದ್ದೇ ಸರಿಹೋಯಿತು. ಇಲ್ಲದೇ ಇದ್ದಿದ್ದರೆ ನಿನಗೆ ಸುಖವಾಗುತ್ತಿರಲಿಲ್ಲ " ಎಂದನು.

" ನೀನು ಹೇಳುವುದು ಸರಿ. ಆದರೆ ನಾನು ನನ್ನ ಜೀವನದಲ್ಲಿ ನನಗೆ ಇಷ್ಟವಿಲ್ಲದ ಕೆಲಸಗಳನ್ನೇ ಮಾಡಬೇಕಾಗಿದೆ ಎಂದು ತೋರುತ್ತದೆ "

" ಯಾಕೆ ? ಇದು ಇಷ್ಟವಿಲ್ಲದ ಕೆಲಸವೇ ?"

" ಅಲ್ಲವೇ ? ಯೋಚನೆ ಮಾಡು "

" ಹೋಗಲಿ. ಪುಷ್ಪಳನ್ನು ಪ್ರೀತಿಸುವಂತಹ ಮತ್ತೊಬ್ಬ ವ್ಯಕ್ತಿಯು ಸಿಕ್ಕಿದಂತಾಗುತ್ತದೆ. ಅವಳಿಗೋಸ್ಕರವಾದರೂ ಮಾಡು "

ವಿಮಲೆಯು " ಅಷ್ಟೇ ಶಂಕರ. ಪುಷ್ಪಳನ್ನು ನಮಗೆ ಗಂಟು ಹಾಕುತ್ತಿದ್ದೀಯೆ. ಇನ್ನೇನು ಮಾಡುತ್ತೀಯೆ ? ನಿನಗೂ ನಾಗವೇಣಿಗೂ ಬೇರೊಂದು ಪುಷ್ಪಳು ಸಿಕ್ಕುವಾಗ ಈ ಪುಷ್ಪಳನ್ನು ಕಟ್ಟಿಕೊಂಡು ಏನು ಮಾಡೀಯೆ ?" ಎಂದು ಹೇಳಿ ನಕ್ಕಳು.

ಮಾವನ ತೊಡೆಯ ಮೇಲೆ ಕುಳಿತಿದ್ದ ಪುಷ್ಪಳು ತಾಯಿಯು ಹೇಳಿದ ಮಾತನ್ನು ಅರ್ಥ ಮಾಡಿಕೊಂಡೋ ಅಥವಾ ತಾಯಿಯು ನಕ್ಕುದನ್ನು ನೋಡಿಯೋ ತಾನೂ ನಕ್ಕಳು.

ಪುಷ್ಪಳು ನಗುತ್ತಿದ್ದ ಹಾಗೆಯೇ ಶೀಲಳು ಓಡಿ ಬಂದು " ಅಕ್ಕಾ ! ನಿನ್ನ ಗಂಡ ಬಂದರಂತೆ. ವಾಸುವು ಹೇಳಿದ " ಎಂದಳು.

ಮಗುವು " ಚೀಲಾ " ಎಂದು ಅವಳ ಕಡೆಗೆ ನೆಗೆಯಿತು. ಶೀಲಳು ಮಗುವನ್ನು ಎತ್ತಿಕೊಂಡಳು.

ಅಷ್ಟು ಹೊತ್ತಿಗೆ ವರದಳೂ ಬಂದಳು. " ಅವಳು ನಿನಗಿದ್ದ ಒಂದೇ

ಕೊರತೆಯು ಪರಿಹಾರವಾಯಿತು. ನಿಮ್ಮ ಯಜಮಾನರು ಬಂದರು, ಅಕ್ಕಾ !" ಎಂದಳು.

ಅಕ್ಕನು ತಂಗಿಯ ಮಾತಿಗೆ "ಹೌದಮ್ಮ, ಇದ್ದ ಒಂದು ಕೊರತೆಯು ಪರಿಹಾರವಾಯಿತು" ಎಂದು ಹೇಳಿದಳು.

## ೨೪

ದಿನಗಳ ಮೇಲೆ ದಿನಗಳು ಕಳೆಯ ತೊಡಗಿದುವು. ಜೀವನ ಚಕ್ರವು ತಿರುಗಲಾರಂಭಿಸಿತು. ಯಾವುದು ನಿಂತರೂ ಆ ಚಕ್ರವು ನಿಲ್ಲುವುದೇ ಇಲ್ಲ. ಅದಕ್ಕೆ ತಕ್ಕಂತೆ ಅವರವರು ಸರಿಮಾಡಿಕೊಳ್ಳುತ್ತಾರೆ. ಹಾಗೆಯೇ ವೆಂಕಟ ರಾಯನೂ ವಿಮಲೆಯ ಮನೆಯಲ್ಲಿ ಸೇರಿಹೋದನು. ಅವರಲ್ಲಿ ಅವನೂ ಒಬ್ಬನಾದನು.

ವೆಂಕಟರಾಯನು ಕ್ಷೌರ ಮಾಡಿಕೊಂಡು ಬೇರೆಯ ಬಟ್ಟೆಗಳನ್ನು ಹಾಕಿಕೊಳ್ಳುತ್ತಲೇ ಸರಿಹೋದನು. ಎಂಟು ಹತ್ತು ದಿನಗಳು ಕಳೆದ ನಂತರ ಅವನಲ್ಲಿ ಹೆಚ್ಚು ವ್ಯತ್ಯಾಸವು ಕಂಡು ಬರುತ್ತಿರಲಿಲ್ಲ. ಅವನ ತಲೆಯ ಹಿಂಭಾಗವು ಮಾತ್ರ ಸ್ವಲ್ಪ ಚಟ್ಟೆತಲೆಯಾಗಿ ಕೂದಲುಗಳು ಉದುರಿ ಹೋಗಿದ್ದವು. ಅವನ ಮುಖಭಾವದಲ್ಲಿ ಸ್ವಲ್ಪ ಕಾಠಿಣ್ಯತೆಯು ರೂಪುಗೊಂಡಿತ್ತು. ಅವನ ಧ್ವನಿಯಲ್ಲಿ ಕರ್ಕಶತೆಯು ಬಂದಿತ್ತು. ನಡತೆ ಯಲ್ಲಿ ಹೆಚ್ಚುಕಡಮೆಯಾಗಿತ್ತು. ವಿಮಲೆಯು ಅವನನ್ನು ನೋಡಿದಾಗ ಲೆಲ್ಲಾ ಇಷ್ಟು ಅಲ್ಪ ಕಾಲದಲ್ಲಿ ಎಷ್ಟೊಂದು ಬದಲಾವಣೆಯಾಗಿದೆ ಎಂದು ಕೊಳ್ಳುತ್ತಿದ್ದಳು.

ಒಂದು ವಾರದ ಕಾಲ ವೆಂಕಟರಾಯನು ಏನೂ ಮಾಡಲಿಲ್ಲ. ದಿನದ ಬಹಳ ಹೊತ್ತು ಮಲಗಿ ನಿದ್ದೆ ಮಾಡುತ್ತಿದ್ದನು. ಎದ್ದಿದ್ದ ಕಾಲದಲ್ಲಿ ಪುಷ್ಪಳೊಡನೆ ಆ ಮನೆಯ ಕಾಂಪೌಂಡಿನಲ್ಲಿ ಅಲೆಯುತ್ತಿದ್ದನು. ವೆಂಕಟ ರಾಮಯ್ಯನವರು ತುಮಕೂರಿಗೆ ಹೋಗಿ ಅಲ್ಲಿಯೇ ವಾಸ ಮಾಡುತ್ತಿದ್ದರು. ಅವರ ಮನೆಯಲ್ಲಿ ಯಾರೂ ಇರಲಿಲ್ಲ. ಈ ಮನೆಯ ಕಾಂಪೌಂಡಿನಲ್ಲಿ ಸುತ್ತುವರು. ಬೇಜಾರಾದಾಗ ತಂದೆ ಮಕ್ಕಳು ಆ ಮನೆಯ ಕಾಂಪೌಂಡಿ ನಲ್ಲಿ ಸುತ್ತುತ್ತಿದ್ದರು. ಬರುವಾಗ ಪುಷ್ಪಳು ತನಗೆ ತೋರಿದ ಹೂಗಳನ್ನೂ ಎಲೆಗಳನ್ನೂ ತೆಗೆದುಕೊಂಡು ಬರುತ್ತಿದ್ದಳು. ತಂದೆಯು ಅದನ್ನು ಹೊತ್ತು ತರುತ್ತಿದ್ದನು.

ಅನಂತರ ಅವನ ಕಾರ್ಯರಂಗವು ವಿಸ್ತಾರವಾಗ ತೊಡಗಿತು. ಹನ್ನೊಂದು ಗಂಟೆಗೆ ಊಟ ಮಾಡಿಕೊಂಡು ಊರೊಳಗೆ ಹೋಗಿ ಬರು ತ್ತಿದ್ದನು. ಅನೇಕ ಕಡೆಗಳಿಗೆ ಹೋಗಿ ತನ್ನ ಹಳೆಯ ಸ್ನೇಹಿತರನ್ನು ನೋಡುತ್ತಿದ್ದನು. ಮೊದಲಿನಂತೆ ಮಂಕಾಗಿಯೂ, ಏನೂ ಇಲ್ಲದವ ನಂತೆಯೂ ಇರಲಿಲ್ಲ. ತನ್ನ ಅತ್ತೆಯ ಮನೆಯ ಐಶ್ವರ್ಯವೆಲ್ಲವೂ ತನ್ನದೇ ಎನ್ನುವಂತೆ ನಡೆದುಕೊಳ್ಳುತ್ತಿದ್ದನು. ಆಗಾಗ ಶೀಲೆಯನ್ನು ಕರೆದು ಪಾಠಗಳನ್ನು ಸರಿಯಾಗಿ ಓದಬೇಕೆಂದು ಬುದ್ಧಿಯನ್ನು ಹೇಳು ತ್ತಿದ್ದನು. ವಾಸುವು ತನ್ನ ಸ್ನೇಹಿತರೊಡನೆ ಆಟವಾಡುವಾಗ ಗಲಾಟೆ ಮಾಡಬಾರದೆಂದು ಹತೋಟಿ ಮಾಡುತ್ತಿದ್ದನು. ಕೆಲವು ಬಾರಿ ಪುಷ್ಪಳ ಮೇಲೆಯೂ ಅಂಕೆ ಮಾಡುತ್ತಿದ್ದನು. ವಿಮಲೆಯು ಶಿಸ್ತಿನಲ್ಲಿ ಬೆಳೆದವಳಲ್ಲ ವೆಂದು ಆಕ್ಷೇಪಣೆ ಮಾಡುತ್ತಿದ್ದನು.

ಅವನ ನಡೆನುಡಿಗಳು ಯಾರಿಗೂ ಅಪ್ರಿಯವಾಗಲಿಲ್ಲ. ಅವನು ಬಹಳ ಬುದ್ಧಿವಂತ. ಬಹಳ ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿದ್ದನು. ಆಗಾಗ ನಾಗವೇಣಿಯು ಮನೆಗೆ ಬಂದು ಹೋಗುತ್ತಿದ್ದಳು. ಅವಳಲ್ಲಿ ಸ್ವಲ್ಪವೂ ವಿರೋಧವನ್ನು ವ್ಯಕ್ತಪಡಿಸುತ್ತಿರಲಿಲ್ಲ. ಅಣ್ಣನು ತಂಗಿಯೊಡನೆ ವ್ಯವ ಹರಿಸುವಂತೆ ನಡೆದುಕೊಳ್ಳುತ್ತಿದ್ದನು.

ಆದರೆ ಗಂಡನ ರೀತಿಯು ವಿಮಲೆಗೆ ಬೇಜಾರುಂಟು ಮಾಡುತ್ತಿ

ದ್ದಿತು. ಇವನು ಇದೊಂದೂ ಮಾಡದೇ ಗಂಭೀರವಾಗಿರಬಾರದೇ ಎಂದು ಕೊಳ್ಳುತ್ತಿದ್ದಳು.

ವಿಮಲೆಯು ಈ ಮನೆಗೆ ಬಂದ ಮೊದಲ ದಿನಗಳು ಬಹಳ ಪ್ರಿಯವಾಗಿದ್ದಿತು. ಅವಳೂ ಇತರರೂ ಹಣವಿಲ್ಲದೇ ವರ್ಷಗಟ್ಟಲೆ ಬಹಳ ಪಾಡು ಪಟ್ಟಿದ್ದರು. ಈಗ ಅದಾವ ತೊಂದರೆಗಳೂ ಇರಲಿಲ್ಲ. ಅವರುಗಳಿಗೆ ತೋರಿದಾಗ ಪೇಟೆಗೆ ಹೋಗಿ ಬಟ್ಟೆಬರೆಗಳನ್ನೂ, ಸೀರೆಗಳನ್ನೂ ತರುತ್ತಿದ್ದರು. ಕಣ್ಣಿಗೆ ಪ್ರಿಯವಾದ ಹಣ್ಣುಗಳನ್ನು ಬುಟ್ಟಿಬುಟ್ಟಿಗಳಲ್ಲಿ ತರುತ್ತಿದ್ದರು. ಎರಡು ಮೋಟಾರು ಕಾರುಗಳು ಮನೆಯ ಬಾಗಿಲಿನಲ್ಲಿ ಕಾದು ಬಿದ್ದಿರುತ್ತಿದ್ದವು. ಆ ಉದ್ಯಾನ ವನದಲ್ಲಿ ಪುಟ್ಟ ಜಿಂಕೆಯಂತೆ ಪುಷ್ಪಳು ಓಡಿಯಾಡುತ್ತಿದ್ದಳು. ಆ ದಿನಗಳು ವಿಮಲೆಯ ಜೀವನದಲ್ಲಿ ಮರೆಯದ ಹಾಗಿದ್ದವು.

ಆದರೆ ಗಂಡನು ಬಂದ ಮೇಲೆ ಬದಲಾವಣೆಯಾಗತೊಡಗಿತು. ವಿಮಲೆಗೂ ಸುಖಕ್ಕೂ ನಡುವೆ ತೆಳ್ಳನೆಯ ಪರದೆಯನ್ನು ಹಾಕಿದಂತೆ ಆಯಿತು. ಪುನಃ ಅವಳು ದಿನದ ಎಷ್ಟೋ ಹೊತ್ತನ್ನು ಆಲೋಚನೆ ಮಾಡುತ್ತಲೇ ಕಳೆಯುವಳು. ರಾತ್ರಿಯ ಬಹು ಭಾಗವು ನಿದ್ದೆ ಇಲ್ಲದೆಯೇ ಇರುತ್ತದೆ. ಪ್ರಾತಃಕಾಲ ಎಚ್ಚರವಾದಾಗ ಹಾಸಿಗೆಯ ಮೇಲೆ ಕುಳಿತುಕೊಂಡು ಮೊದಲಿನಂತೆಯೇ ಇರುತ್ತೇನೆಂದು ಕೊಳ್ಳುತ್ತಿದ್ದಳು. ಗಂಡನನ್ನು ನೋಡಿದ ಕೂಡಲೇ ಅವನೊಂದಿಗೆ ಮಾತನಾಡಿದ ಕೂಡಲೇ ಅವಳ ನಿರ್ಧಾರವು ಬದಲಾಗಿ ಹೋಗುತ್ತತ್ತು. ಪೂರ್ವಾವಸ್ಥೆಯು ಬಂದು ಅವಳನ್ನು ಆವರಿಸಿಕೊಳ್ಳುತ್ತಿತ್ತು.

ಅವಳೆಷ್ಟು ಪ್ರಯತ್ನ ಮಾಡಿದರೂ ಸಾಧ್ಯವಿಲ್ಲದೇ ಹೋಗುತಿತ್ತು. ಅವಳು ಮಹಡಿಯ ಮೇಲೆ ಹಾಸಿಗೆಯ ಮೇಲಿದ್ದಾಗ, ಕೆಳಗಡೆ ಹಜಾರದಲ್ಲಿ ಸೋಫಾದ ಮೇಲೆ ಕುಳಿತಿದ್ದಾಗ, ಪೇಟೆಗೆ ಹೋದಾಗ, ಮನೆಯೊಳಗಡೆ ಅಣ್ಣತಂಗಿಯರೊಡನೆ ಕೇರಂ ಆಡುತ್ತಿದ್ದಾಗ, ಹೊರಗಡೆ ಟೆನ್ನಿಸ್ ಆಡುತ್ತಿದ್ದಾಗ, ಹೀಗೆ ಸರ್ವಕಾಲದಲ್ಲಿಯೂ ಗಂಡನ ನೆನಪು ಬರುತ್ತಿತ್ತು. ಆ ನೆನಪು ಮನಸ್ಸಿಗೆ ಮುಜುಗರ ಉಂಟು ಮಾಡುತ್ತಿತ್ತು. ವೆಂಕಟರಾಯನು ಮನೆಯಲ್ಲಿ ಸೋಮಾರಿಯಾಗಿ ಓಡಿಯಾಡುತ್ತಿದ್ದರೆ ಅವಳಿಗೆ ಅಪ್ರಿಯವಾಗುತ್ತಿತ್ತು. ಕೆಲಸವನ್ನು ಹುಡುಕಲು ಕಾರು ತೆಗೆದುಕೊಂಡು ಹೋದರೆ

ಅವಳಿಗೆ ಅಸಮಾಧಾನವಾಗುತ್ತಿತ್ತು. "ಯಾರೋ ನನ್ನ ಸ್ನೇಹಿತರ ಮನೆಗೆ ಹೋಗಬೇಕು. ನೀನೂ ಬಾ. ಪುಷ್ಪಳನ್ನು ಕರೆದುಕೊಂಡು ಹೋಗೋಣ"ವೆಂದು ಅವನು ಹೇಳಿದಾಗಲಂತೂ ಅವಳ ಮೈ ಉರಿದು ಹೋಗುತ್ತಿತ್ತು.

ವಿಮಲೆಯು ಮನಸ್ಸಿಗೆ ಎಷ್ಟೋ ಸಮಾಧಾನವನ್ನು ತಂದುಕೊಳ್ಳುತ್ತಿದ್ದಳು. ಆದರೆ ಅದರಿಂದ ಅವಳ ಮನಸ್ಸು ಸರಿಹೋಗುತ್ತಿರಲಿಲ್ಲ. ವೆಂಕಟರಾಯನು ಹೇಳದೇ ಕೇಳದೇ ಕಾರು ತೆಗೆದುಕೊಂಡು ಹೋಗುತ್ತಿದ್ದನು. ಆಗ ಹೆಂಡತಿಯರು ಗಂಡಂದಿರ ಕಾರು ಉಪಯೋಗಿಸುವುದಿಲ್ಲವೇ ? ಹಾಗೆಯೇ ಗಂಡಂದಿರು ಹೆಂಡತಿಯ ಕಾರು ಉಪಯೋಗಿಸಿದರೇನು ಎಂದುಕೊಳ್ಳುವಳು. ಪುಷ್ಪಳನ್ನು ಹಾಗೆ ಬೆಳೆಸಬೇಕು, ಹೀಗೆ ಬೆಳಸಬೇಕು ಎನ್ನುವನು. ಆಗ ಪುಷ್ಪಳ ತಂದೆಯಲ್ಲವೆ ? ಹೇಳಿದರೇನು ತಪ್ಪು, ಎಂದು ಯೋಚಿಸುವಳು. ಊಟಕ್ಕೆ ಕುಳಿತಾಗಲೋ, ಎಲ್ಲರೂ ಸೇರಿ ಮಾತನಾಡುವಾಗಲೋ ಮೈಸೂರಿನ ಮಂತ್ರಿಗಳು ಸರಿಯಿಲ್ಲವೆನ್ನುವನು. ಜವಹರರ ವಿದೇಶಾಂಗ ನೀತಿಯು ಕೆಡುಕೆನ್ನುವನು. ಆಗ ಯಾಕೆ ಅವನೂ ಒಬ್ಬ ವ್ಯಕ್ತಿ. ಅವನು ತನ್ನ ಅಭಿಪ್ರಾಯವನ್ನೇಕೆ ಹೇಳಕೂಡದೆಂದು ಆಲೋಚನೆ ಮಾಡುವಳು. ತನ್ನ ಗಂಡನು ಮಂಕಾಗಿ, ಅಂಗಲಾಚಿಕೊಳ್ಳುವ ದರಬೇಸಿಯಂತೆ ಇರಬೇಕೆಂದು ವಿಮಲೆಯ ಮನಸ್ಸಿನಲ್ಲಿರಲಿಲ್ಲ. ಆದರೆ ಅವನಾಡುವ ಪ್ರತಿಯೊಂದು ಮಾತು, ಅವನು ಮಾಡುವ ಪ್ರತಿಯೊಂದು ಕೆಲಸ ಅಪ್ರಿಯವಾಗುವುದೇಕೆ ? ಅದು ಅವಳಿಗೆ ಬಿಡಿಸಲಾದರ ಸಮಸ್ಯೆಯಾಗಿದ್ದಿತು.

ಒಂದು ದಿನ ಸಾಯಂಕಾಲ ಅವನು "ವಿಮಲಾ ! ನಾನು ಬಹಳ ಯೋಚನೆ ಮಾಡಿದ್ದೇನೆ. ಆದಷ್ಟು ಬೇಗ ನಾವು ಬೇರೆ ಮನೆ ಮಾಡಿಕೊಂಡು ಹೋಗುವುದು ಉತ್ತಮ" ಎಂದು ಹೇಳಿದನು.

ಅಲ್ಲಿ ಅವನೂ ವಿಮಲೆಯೂ ಇಬ್ಬರೇ ಕುಳಿತುಕೊಂಡಿದ್ದರು. ಆದ್ದರಿಂದ ಅವರು ಬೇಕಾದ ಹಾಗೆ ಮಾತನಾಡಬಹುದಾಗಿದ್ದಿತು.

ವಿಮಲೆಯು "ನೀವು ಹೇಳುವುದು ನನಗೆ ಅರ್ಥವಾಗುವುದಿಲ್ಲ" ಎಂದಳು.

" ನಾನು ಈ ಮನೆಯಲ್ಲಿ ಶೀಲಾ, ವಾಸುಗಳ ಗಲಾಟೆಯನ್ನು ತಡೆಯು ಲಾರೆ. ನಾನಿರುವುದನ್ನೂ ಲಕ್ಷ್ಯ ಮಾಡದೇ ಅವರಾ ದಿನ ಹೇಗೆ ಒಳಗೆ ನುಗ್ಗಿದರೆಂಬುದನ್ನು ಬಲ್ಲೆಯಾ ?"

ವಾಸುವು ಶೀಲೆಯನ್ನೇನೋ ಅಂದಿದ್ದನು. ಅವಳು ಅವನನ್ನು ಹಿಡಿದುಕೊಳ್ಳಲು ಹೋದಳು. ಅವನು ಓಡಿಹೋದ. ಅವಳು ಅಟ್ಟಿಸಿ ಕೊಂಡು ಹೋದಳು. ವಾಸು ಓಡಿಹೋಗಿ ವೆಂಕಟರಾಯನ ಮಂಚದ ಕೆಳಗೆ ಅವಿತುಕೊಂಡು ಬಿಟ್ಟ. ಶೀಲೆಯು ಹೋಗಿ ಅವನನ್ನು ಮಂಚದ ಕೆಳಗಿನಿಂದ ಹೊರಗೆಳೆದಳು. ಅವನು ಸಿಕ್ಕಿದನಲ್ಲಾ ಎಂಬ ಸಂತೋಷದಿಂದ ಕೂಗಿಕೊಂಡಳು. ವಾಸುವು ಸಿಕ್ಕಿಹೋದೆನಲ್ಲಾ ಎಂದು ಕಿರುಚಿಕೊಂಡನು. ಓದುತ್ತಾ ಮಲಗಿದ್ದ ವೆಂಕಟರಾಯನು " ನಾನಿರುವುದು ನಿಮಗೆ ಗೊತ್ತಿಲ್ಲ ವೇನು ?" ಎಂದನು. " ನೀವಿರುವುದು ನಮಗೆ ಗೊತ್ತಿಲ್ಲ. ನೀವು ಅಕ್ಕ ನೊಡನೆ ಮಾತನಾಡುತ್ತಿದ್ದಿರಲ್ಲಾ. ಇಲ್ಲೆಲ್ಲಿ ಬಂದಿರಿ ?" ಎಂದು ಕೇಳಿದರು. ಯಾಕೋ ವೆಂಕಟರಾಯನು ಮಾತನಾಡಲಿಲ್ಲ. ಹುಡುಗರು ಗೆದ್ದವರ ಹಾಗೆ ನೋಡುತ್ತಾ ಹೊರಟುಹೋಗಿದ್ದರು.

" ಅದು ಒಂದೇ ಬಾರಿ ತಾನೇ ! ಏನೋ ಹುಡುಗರು ಗೊತ್ತಾಗಲಿಲ್ಲ"

" ಹುಡುಗರಂತೆ ಹುಡುಗರು ! ಅಶಿಕ್ಷಿತರು ! ಗಡವಾಗಳು "

" ಈ ಮನೆಯನ್ನು ಬಿಟ್ಟು ಹೋಗುವುದು ನನಗೆ ಇಷ್ಟವಿಲ್ಲ. ಇಷ್ಟ ರಲ್ಲೇ ಶಂಕರನ ಮದುವೆಯಾಗುವುದರಲ್ಲಿದೆ "

" ಯಾರು ಆಗಬೇಡವೆಂದರು. ಬೇಕಾದಹಾಗೆ ಆಗಲಿ. ನಾನೇನು ಈ ದಿನವೇ ಹೊರಟುಹೋಗೋಣವೆಂದು ಹೇಳಲಿಲ್ಲ. ಆದರೆ ನಾವು ಇಲ್ಲಿಂದ ಹೊರಟುಹೋಗ ಬೇಕೆಂಬುದನ್ನು ನೀನು ಮನಸ್ಸಿಗೆ ತಂದುಕೊಳ್ಳಬೇಕು"

ವಿಮಲೆಗೆ ಆ ವಿಷಯವನ್ನೇ ಚರ್ಚಿಸುವುದು ಇಷ್ಟವಿರಲಿಲ್ಲ. ಈದಿನ ವಂತೂ ಈ ಮನೆಯನ್ನು ಬಿಟ್ಟು ಹೋಗುವುದಿಲ್ಲ. ನಾಳೆಯ ವಿಷಯ ನಾಳೆ ನೋಡಿಕೊಳ್ಳೋಣವೆಂದುಕೊಂಡಳು. ಒಟ್ಟಿನಲ್ಲಿ ಅವರಿಬ್ಬರಲ್ಲಿ ಒಮ್ಮತಸಮ್ಮತಿ ಇರಲಿಲ್ಲ. ಅವರ ಆಲೋಚನೆಗಳು ಪರಸ್ಪರ ವಿರೋಧ ವಾಗಿದ್ದವು.

ಅವಳು ಮನಸ್ಸಿನಲ್ಲಿಯೇ " ಇದು ನಮ್ಮ ತಾಯಿಯ ಮನೆ. ನಾನು

ಈ ಮನೆಯನ್ನು ಬಿಟ್ಟು ಬರುವುದಿಲ್ಲ. ಇಲ್ಲಿಯೇ ಇರುತ್ತೇನೆ. ನಾನು ಈ ಮನೆಯಲ್ಲಿ ಬೆಳೆದಂತೆಯೇ ಪುಷ್ಪಳೂ ಈ ಮನೆಯಲ್ಲಿಯೇ ಬೆಳೆಯುತ್ತಾಳೆ" ಎಂದುಕೊಂಡಳು.

ಆ ಪ್ರಶ್ನೆಯು ವಿಮಲಳ ಬಾಯಿಂದ ಹೊರಗೆ ಬರದಿದ್ದರೂ ಅದಕ್ಕೆ ವೆಂಕಟರಾಯನೇ ಉತ್ತರವನ್ನು ಹೇಳಿದನು.

ಅವನು "ನೋಡು, ವಿಮಲಾ. ಆ ವಿರೂಪಾಕ್ಷಯ್ಯನ ಚೇಳಿನ ಔಷಧಿಯ ಸೋಲ್ ಏಜನ್ಸಿಯನ್ನು ನಾನು ತೆಗೆದುಕೊಳ್ಳುವುದೆಂದು ಗೊತ್ತಾಗಿದೆ. ಸ್ವಲ್ಪ ಆರ್ಗನೈಸ್ ಮಾಡಿದರೆ ದುಡ್ಡು ಬರಲು ಮೊದಲಾಗುತ್ತದೆ. ಕೂಡಲೇ ನಾನೊಂದು ಮನೆಯನ್ನು ಮಾಡುತ್ತೇನೆ. ನೀನೂ ಬರುವುದಾದರೆ ಬಹಳ ಸಂತೋಷ. ಹಾಗಿಲ್ಲದೇ ಹೋದರೆ ನಾನೂ ನನ್ನ ಮಗಳೂ ಅಲ್ಲಿಗೆ ಹೊರಟು ಹೋಗುತ್ತೇವೆ–" ಎಂದು ಹೇಳಿದನು.

ಬಹಳ ಹೊತ್ತು ವಿಮಲೆಯು ಸುಮ್ಮನಿದ್ದಳು. ಅವಳ ದೇಹವು ನಡುಗ ತೊಡಗಿತು. ಆದರೂ ಅವಳು ತಮಾಷೆ ಮಾಡುವ ಧ್ವನಿಯಿಂದ "ಸರಿ! ನೀವೂ ನಿಮ್ಮ ಮಗಳೂ ಹೋಗುತ್ತಿರಿ? ನಿಮ್ಮ ಮಗಳನ್ನು ನೋಡಿಕೊಳ್ಳುವವರಾರು?" ಎಂದಳು.

"ನಾನೇ ನೋಡಿಕೊಳ್ಳುತ್ತೇನೆ. ನನಗೇನು ಮಕ್ಕಳನ್ನು ಸಾಕಲು ಬರುವುದಿಲ್ಲವೇನು?"

ವಿಮಲೆಯು ಶಾಂತವಾಗಿ "ಅದನ್ನೆಲ್ಲಾ ಈಗ ಮಾತನಾಡುವುದು ಬೇಡ" ಎಂದುಬಿಟ್ಟಳು.

ಆದರೆ ಅವಳಿಗೆ ಒಳಗೊಳಗೇ ಭಯವಾಗಿತ್ತು. ತನ್ನ ಗಂಡನಿಗೆ ಚೇಳಿನ ಔಷಧಿಯ ಏಜನ್ಸಿ ಸಿಕ್ಕುವುದಿಲ್ಲವೆಂದೂ, ಸಿಕ್ಕಿದರೂ ಅದರಲ್ಲಿ ಮೂರುಕಾಸೂ ಸಂಪಾದನೆಯಾಗುವುದಿಲ್ಲವೆಂದೂ, ಅವನು ಮನೆಯನ್ನು ಮಾಡಿ ಪುಷ್ಪಳನ್ನು ಕರೆದುಕೊಂಡು ಹೋಗುವುದು ಮರಿಮರೀಚಿಕೆ ಎಂದೂ ಅವಳಿಗೆ ಗೊತ್ತಿತ್ತು. ಆದರೆ ತಾನು ಹೇಳುವಂತೆ ಕೇಳುವ ಹಾಗೆ ಮಾಡುವ ಬೀಗದ ಕೈ ಯಾವುದೆಂಬುದನ್ನು ಗಂಡನು ತಿಳಿದುಕೊಂಡಿದ್ದಾನೆ.

ಅದು ಅವಳನ್ನು ಹೆದರಿಸ ತೊಡಗಿತು.

ಇದ್ದಕ್ಕಿದ್ದಂತೆಯೇ ವೆಂಕಟರಾಯನೊಮ್ಮೆ " ವಿಮಲಾ. ಮದರಾಸಿಗೆ ಹೋಗಿ ಬರೋಣ ಬಾ. ನಾಲ್ಕು ದಿನ ಹಾಯಾಗಿದ್ದು ಬರೋಣ " ಎಂದು ಹೇಳಿದನು. ತಾನು ಜೊತೆಯಲ್ಲಿ ಹೋಗಿ ಅವನಿಗೇನೂ ಆಗಬೇಕಾಗಿಲ್ಲವೆಂದೂ ಅವನಿಗೆ ಬೇಕಾಗಿರುವುದು ಕಾರು ಮತ್ತು ಸ್ವಲ್ಪ ಹಣವೆಂದೂ ಅವಳು ಅರ್ಥಮಾಡಿಕೊಂಡಳು. ಮೊದಲು ಮೊದಲು ಸೂಕ್ಷ್ಮವಾಗಿ ಬೇಡವೆಂದು ಹೇಳಿದರೆ ಸುಮ್ಮನಾಗುತ್ತಿದ್ದನು. ಈಗೀಗ ಸುಮ್ಮನಾಗದೇ ಪಟ್ಟು ಹಿಡಿಯುತ್ತಿದ್ದನು. ಇತ್ತೀಚೆಗೆ ಕುಡಿಯುವುದನ್ನು ಬಹಳ ಹೆಚ್ಚು ಮಾಡಿದ್ದನು. ಕುಡಿದಿದ್ದಾಗಲಂತೂ ವಿಪರೀತ ಹಠ ಮಾಡುತ್ತಿದ್ದನು.

ವಿಮಲೆಯು " ವರದಾ ಮೂರು ದಿನ ಮೈಸೂರಿಗೆ ಹೋಗಬೇಕೆಂದಿದ್ದಾಳೆ. ಅದರಿಂದ ಮಗುವನ್ನು ನಾನು ಈ ಹುಡುಗರ ಬಳಿ ಬಿಟ್ಟು ಬರುವಂತಿಲ್ಲ " ಎಂದಳು.

" ವರದೆಗೆ ಹೋಗಬೇಡವೆಂದು ಹೇಳು. ಇದು ಬಹಳ ಮುಖ್ಯವಾದ ಕೆಲಸ. ಅವಳು ಮತ್ತಾವಾಗಲಾದರೂ ಹೋಗಲಿ "

" ಏನು ಹೀಗೆ ಹಠ ಹಿಡಿಯುತ್ತೀರಿ ? ನನ್ನ ಸಮ ವಯಸ್ಸಿನ ತಂಗಿಯೊಡನೆ ನಾನು ಹಾಗೆ ಹೇಳುವುದಕ್ಕಾಗುತ್ತದೆಯೆ ? ಅಷ್ಟಕ್ಕೂ ನನಗೆ ಮೈ ಚೆನ್ನಾಗಿಲ್ಲ. ನಾನು ಬರುವುದಕ್ಕೂ ಆಗುವುದಿಲ್ಲ "

" ನೀನು ಬರದಿದ್ದರೆ ಬೇಡ. ನೀನು ಇಲ್ಲಿಯೇ ಇರು. ನಾನು ನನ್ನ ಮಗಳನ್ನು ಕರೆದುಕೊಂಡು ಹೋಗುತ್ತೇನೆ. ಅವಳಿಗೆ ಮದರಾಸು ತೋರಿಸಿಕೊಂಡು ಬರುತ್ತೇನೆ "

" ಎಲ್ಲಿಯಾದರೂ ಉಂಟೆ ? ಐನೂರು ಮೈಲಿಗಳ ಪ್ರಯಾಣ. ಮಗುವಿಗೇನಾದರೂ ಆದರೆ ?"

" ಏನಾಗುತ್ತದೆ. ಅಪ್ಪನ ಬಳಿ ಮಗುವಿಗೇನು ಭಯ ? ನಾನು ಕರೆದುಕೊಂಡೇ ಹೋಗುತ್ತೇನೆ "

ವೆಂಕಟರಾಯನು ಮಗುವನ್ನು ಕರೆದುಕೊಂಡು ಮದರಾಸಿಗೆ ಹೋಗಲಿಲ್ಲ. ಅವನು ಹೊರಡ ಬೇಕೆಂದಿದ್ದ ದಿನದ ಹಿಂದಿನ ದಿನವೇ ಪುಷ್ಪಳಿಗೆ

ನೆಗಡಿ ಕೆಮ್ಮು ಬಂದಿತು. ಸಣ್ಣ ಜ್ವರ ಬಂದಿತು. ತಂದೆಯಾದ ಅವನಿಗೆ ಮಗಳನ್ನು ಅಂತಹ ಸ್ಥಿತಿಯಲ್ಲಿ ಕರೆದುಕೊಂಡು ಹೋಗಲು ಧೈರ್ಯವಿರಲಿಲ್ಲ. ಅವನಿಗೂ ಮಗಳ ಮೇಲೆ ಪ್ರೇಮವಿದ್ದಿತು.

ಆದರೆ ಇಂತಹ ಪ್ರಕರಣಗಳಿಂದ ವಿಮಲೆಗೆ ಹೆದರಿಕೆಯಾಗಲಾರಂಭಿಸಿತು. ಹೀಗೆಯೇ ಇವನು ಒಂದು ದಿನ ಹುಚ್ಚನಂತೆ ಮಗುವನ್ನು ಕರೆದುಕೊಂಡು ಹೊರಟು ಹೋಗಬಹುದು. ಹುಡುಕಿ, ಮಾಡಿ, ಮಗುವನ್ನು ಕರೆತರಬೇಕೆಂದರೆ ಎಷ್ಟು ಕಷ್ಟ, ಎಷ್ಟು ಪಾಡು ಪಡಬೇಕು.

ಸಾಯಂಕಾಲ ವಿಮಲೆಯು ಕೃಷ್ಣರಾಜೇಂದ್ರ ರಸ್ತೆಯಲ್ಲಿ ನಡೆದುಕೊಂಡು ಹೊರಟಳು. ಅವಳು ಮನೆಯಿಂದ ಹೋಗುವಾಗ ಡ್ರೈವರು "ಕಾರು ತೆಗೆದುಕೊಂಡು ಬರಲೇ" ಎಂದು ಕೇಳಿದ್ದನು. ವಿಮಲೆಯು ಅದೊಂದೂ ಬೇಡವೆಂದು ಹೇಳಿ ನಡೆದುಕೊಂಡೇ ಹೊರಟಿದ್ದಳು.

ಅವಳಿಗೆಲ್ಲಿ ಹೋಗುವುದೆಂಬ ನಿರ್ಧಾರವಿರಲಿಲ್ಲ. ನೇರವಾಗಿ ಮಾರ್ಕೆಟ್ಟಿನ ಬಳಿಗೆ ಬಂದಳು. ಎಲ್ಲಿಯಾದರೂ ದೂರ ಹೋಗಿಬರೋಣವೆಂದು ತೋರಿತು. ಕೆಂಗೇರಿಯ ಬಸ್‌ನಲ್ಲಿ ಕುಳಿತುಕೊಂಡು ಹೊರಟಳು. ಅಲ್ಲಿದ್ದ ತಮ್ಮ ತೋಟಕ್ಕೆ ಒಂದು ಮೈಲಿ ಇದೆ ಎನ್ನುವಾಗಲೇ ಬಸ್‌ನಿಂದ ಇಳಿದು ನಡೆದುಕೊಂಡು ಹೊರಟಳು.

ಬಸ್‌ನಿಂದ ಕೆಳಗೆ ಇಳಿಯುವಾಗ ವಿಮಲೆಯು ಮೋಡಗಳು ಕವಿದುಕೊಂಡಿದ್ದುದನ್ನು ಗಮನಿಸಿರಲಿಲ್ಲ. ಮೋಡವು ಕಟ್ಟಿಕೊಂಡು ನೀಲಾಕಾಶವು ಕಪ್ಪು ತಿರುಗಿತ್ತು. ತಂಡಿಯಾದ ಗಾಳಿಯು ಬೀಸುತ್ತಿತ್ತು. ಅವಳು ಸುಮಾರು ಎರಡು ಫರ್ಲಾಂಗುಗಳು ನಡೆಯುವುದರಲ್ಲಿ ಸಣ್ಣ ಮಳೆಯು ಬೀಳಲು ಆರಂಭವಾಯಿತು.

ಆ ಸಣ್ಣ ಮಳೆ, ಗಾಳಿಗಳನ್ನು ಲಕ್ಷ್ಯ ಮಾಡದೆಯೇ ಅವಳು ನಡೆದುಕೊಂಡು ಹೊರಟಳು. ಅದು ಅವಳಿಗೆ ಬಹಳ ಹಿತಕರವಾಗಿದ್ದಿತು. ಮನಸ್ಸು

ಉದ್ವಿಗ್ನವಾಗಿರುವಾಗ ಗೊತ್ತು ಗುರಿಯಿಲ್ಲದೇ ಎಲ್ಲಿಗೋ ನಡೆದುಕೊಂಡು ಹೋಗುವುದು ಅವಳಿಗೆ ಎಷ್ಟೋ ಆಪ್ಯಾಯಮಾನವಾಗಿದ್ದಿತು.

ಇತ್ತೀಚೆಗಂತೂ ವೆಂಕಟರಾಯನಿಂದ ಅವಳಿಗೆ ವಿಪರೀತ ಬೇಜಾರಾಗುತ್ತಿತ್ತು. ಅವನ ನೆನಪು ಬಂದರೆ ಮೈ ಉರಿದು ಹೋಗುತ್ತಿದ್ದಿತು. ಆ ದಿನ ಮಧ್ಯಾಹ್ನ ಊಟದ ಸಮಯದಲ್ಲಿಯೇ ಪುಷ್ಪಳು ಏನೋ ಹಠ ಮಾಡಿ ಅಳಲಾರಂಭಿಸಿದಳು. ಊಟವಾದ ಮೇಲೆ ವಿಮಲೆಯು ಮಗುವನ್ನು ತನ್ನ ಕೋಣೆಗೆ ಕರೆದುಕೊಂಡು ಬಂದು ಮಲಗಿಸಿದಳು. ಅಷ್ಟು ಹೊತ್ತಿಗೆ ವೆಂಕಟರಾಯನು ಬಂದು ಹೆಂಡತಿಯೊಡನೆ ಏನೋ ವ್ಯವಹಾರವನ್ನು ಆರಂಭಿಸಿದನು.

ಕಡೆಯದಾಗಿ " ನಿಮ್ಮ ಶಂಕರ ಚೀಳಿನ ಔಷಧಿಯನ್ನು ಮಾಡಲು ಇಪ್ಪತ್ತು ಸಾವಿರ ರೂಪಾಯಿ ಬಂಡವಾಳ ಕೊಡುವುದಾದರೆ ಅವನಿಗೇ ಒಳ್ಳೆಯದು " ಎಂದು ಕೂಗಿದನು.

ಅವನು ಕೂಗಿ, ಮುಂದೆ ಸಮಾಧಾನದಿಂದ ಮಾತನಾಡಿ, ಹೆಂಡತಿಯನ್ನು ಒಪ್ಪಿಸಬೇಕೆಂದಿರುವಷ್ಟರಲ್ಲಿ ಪುಷ್ಪಳು ಎದ್ದು ಅಳಲಾರಂಭಿಸಿದಳು. ವೆಂಕಟರಾಯನಿಗೆ ಕೋಪ ಬಂದು ಮಗುವಿಗೆ ಮೆಲ್ಲನೆ ಹೊಡೆದನು. ಪುಷ್ಪಳು ರೇಗಿ ತಂದೆಯನ್ನು ಕಚ್ಚಿಬಿಟ್ಟಳು. ವೆಂಕಟರಾಯನು ಮಗುವಿನ ಕೈ ಹಿಡಿದುಕೊಂಡು ಸರಿಯಾಗಿ ಎರಡೇಟು ಕೊಟ್ಟನು. ಮಗುವು ಕಿರಾರನೆ ಅಳಲಾರಂಭಿಸಿತು.

ಅಳುತ್ತಿದ್ದ ಹೆಂಡತಿ ಮಕ್ಕಳನ್ನು ಬಿಟ್ಟು ವೆಂಕಟರಾಯನು ಕಾರು ತೆಗೆದುಕೊಂಡು ಎಲ್ಲಿಗೋ ಹೊರಟುಹೋಗಿದ್ದನು. ಸ್ವಲ್ಪ ಹೊತ್ತಿನಲ್ಲಿಯೇ ಮಗುವು ಸಮಾಧಾನಗೊಂಡು ಆಟವಾಡತೊಡಗಿತು. ಆದರೆ ತಾಯಿಯ ಮನಸ್ಸು ಮಾತ್ರ ಸಮಾಧಾನವಾಗಲಿಲ್ಲ. ಸಂಜೆಯ ವರೆವಿಗೆ ಹಾಗೆಯೇ ಇದ್ದು ಅನಂತರ ಮಗುವನ್ನು ಪರದಳ ಬಳಿ ಬಿಟ್ಟು ವಿಮಲೆಯು ಬಂದಿದ್ದಳು.

ರಸ್ತೆಯಲ್ಲಿ ಮಳೆಯ ನೀರು ಅಲ್ಲಲ್ಲಿ ಸಣ್ಣ ಪುಟ್ಟ ಹಳ್ಳಗಳಲ್ಲಿ ನಿಂತಿತ್ತು. ಸಾಲು ಮರದ ಎಲೆಗಳ ಮೇಲಿಂದ ನೀರು ತೊಟ್ಟಿಕ್ಕುತ್ತಿತ್ತು. ಬೀಸುವ

ಗಾಳಿಯಲ್ಲಿ ಶೈತ್ಯವಿತ್ತು. ಅವಳು ದಿಕ್ಕೆಟ್ಟು ನಡೆದುಕೊಂಡು ಹೋಗು ತ್ತಿದ್ದಳು. ಅದು ಅವಳಿಗೆ ಪ್ರಿಯವಾಗಿದ್ದಿತು.

ಹಾಗೆ ಹೋಗುತ್ತಿರುವಾಗ ಅವಳಿಗೊಂದು ಯೋಚನೆಯು ಬಂದಿತು. " ನನಗೆ ಐಶ್ವರ್ಯವಿದೆ, ಆರೋಗ್ಯವಿದೆ, ಸ್ನೇಹಿತರಿದ್ದಾರೆ, ಅಣ್ಣ-ತಮ್ಮ-ತಂಗಿಯರಿದ್ದಾರೆ. ಎಲ್ಲವೂ ನನ್ನ ಮನಸ್ಸಿಗೆ ಬೇಕಾದಂತೆ ನಡೆಯುತ್ತದೆ. ಈ ಗಂಡ– ಇವನೊಬ್ಬನು ಸಮರ್ಪಕವಾಗಿಲ್ಲದಿದ್ದರೆ ನಾನೇಕೆ ಯೋಚಿಸ ಬೇಕು-ಇದು ನನ್ನ ಮನಸ್ಸಿನ ದೌರ್ಬಲ್ಯ........" ಎಂದು ಕೊಂಡಳು.

" ಅವರು ಮಗುವನ್ನು ಹೊಡೆದರೇನಂತೆ. ಒಂದು ಪೆಟ್ಟು ಬೀಳುವು ದರಿಂದ ಅವಳು ಏನಾಗಿ ಹೋಗುತ್ತಾಳೆ ? ಒಂದೊಂದು ಬಾರಿ ಮಕ್ಕಳನ್ನು ಹೊಡೆಯಬೇಕು........" ಎಂದು ಯೋಚಿಸಿದಳು.

ಮರುಕ್ಷಣದಲ್ಲಿಯೇ " ಅವರೇಕೆ ಹೊಡೆಯಬೇಕು ? ಹೊಡೆಯಲು ಅವರಿಗೇನು ಅಧಿಕಾರ ? ಇದನ್ನು ಇನ್ನು ಹೆಚ್ಚು ಕಾಲ ನಾನು ಸಹಿಸಲಾ ಗುವುದಿಲ್ಲ " ಎಂದು ಗಟ್ಟಿಯಾಗಿ ಹೇಳಿದಳು.

ಹಾಗೆಯೆ ಅವಳು ನಡೆದುಕೊಂಡು ಹೋದಳು. ಸ್ವಲ್ಪ ಸ್ವಲ್ಪ ಕತ್ತ ಲಾಗಿದ್ದಿತು. ಸುತ್ತಮುತ್ತಲಿನ ಪ್ರದೇಶವು ಚೆನ್ನಾಗಿ ಕಂಡು ಬರುತ್ತಿರ ಲಿಲ್ಲ. ಆದರೂ ಸಹ ಅವಳಿಗೆ ಹೋಗುತ್ತಿದ್ದ ಹಾಗೆಲ್ಲಾ ಹಿಂದೆ ತಾನು ಅಲ್ಲಿ ಓಡಿಯಾಡಿದ ಜ್ಞಾಪಕವು ಬರುತ್ತಿತ್ತು.

ವೆಂಕಟರಾಯನೊಡನೆ ತಾನು ಬೃಂದಾವನಕ್ಕೆ ಹೋಗುವುದಕ್ಕಿಂತ ಮೊದಲಿನ ನೆನಪು ಅವಳಿಗೆ ಅತ್ಯಂತ ಪ್ರಿಯವಾಗಿ ಕಂಡು ಬಂದಿತು. ಆಗ ಅವಳಿಗೆಷ್ಟು ಉತ್ಸಾಹವಿದ್ದಿತು. ಅವಳೆಷ್ಟು ಸ್ವತಂತ್ರಳಾಗಿದ್ದಳು. ಈ ವೆಂಕಟರಾಯನು ಪ್ರವೇಶಿದನಂತರಅವಳ ಜೀವನದಲ್ಲಿಕಗ್ಗತ್ತಲೆಯ ದಿನಗಳು ಪ್ರಾರಂಭವಾದುವು.

ಕೆಂಗೇರಿಯ ಮನೆಯು ಸಮೀಪಿಸುವ ವೇಳೆಗೆ ಚೆನ್ನಾಗಿ ಕತ್ತಲೆಯಾ ಗಿದ್ದಿತು. ಅವಳು ಮನೆಯ ಸುತ್ತಲೂ ಇದ್ದ ಬೇಲಿಯೊಳಗೆ ಹೋದೊಡ ನೆಯೇ ಯಾರೋ ತನ್ನನ್ನು ಅನುಸರಿಸಿ ಬರುತ್ತಿರುವಂತೆ ಭಾಸವಾಯಿತು. ಎರಡು ಗಂಟೆಗಳ ಕಾಲದಿಂದ ನಿರಾಳವಾಗಿದ್ದ ಅವಳ ಮನಸ್ಸು ಕಂಪಿಸಿತು.

ಅವಳಿಗೆ ಎಲ್ಲಿಲ್ಲದ ಭಯವುಂಟಾಯಿತು. ಅವಳ ಎದೆಯು ನಡುಗ ತೊಡಗಿತು.

ಖಂಡಿತ ಯಾವನೋ ಅವಳನ್ನು ಅನುಸರಿಸಿ ಬರುತ್ತಿದ್ದಾನೆ. ಕತ್ತಲೆಯಲ್ಲಿ ಅವನಾರೆಂದು ಗೊತ್ತಾಗಲಿಲ್ಲ. ಏಕಾಕಿನಿಯಾಗಿ ತಾನು ಸಿಕ್ಕಿ ಬಿದ್ದಿದ್ದಾಳೆ. ಏನು ಮಾಡಬೇಕು ? ಅವಳು ಧೈರ್ಯವಾಗಿ ಹಿಂದಿರುಗಿ ಆಗಂತುಕನಿಗೆ ಎದುರಾಗಿ ನಿಂತುಕೊಂಡಳು.

ಮುಂದೆ ಒಂದೆರಡು ನಿಮಿಷಗಳಲ್ಲಿ ಏನಾದುವೋ ಅವಳಿಗೆ ಗೊತ್ತಾಗಲಿಲ್ಲ. ಅವಳು ನಟರಾಜನ ಆಲಿಂಗನದಲ್ಲಿದ್ದಳು. ಅವಳ ಕೆನ್ನೆಯು ಅವನ ಕೆನ್ನೆಗೆ ಸ್ಪರ್ಶವಾಗಿದ್ದಿತು. ಅವರಿಬ್ಬರ ಹೃದಯಗಳೂ ಒಟ್ಟಿಗೆ ಬಡಿದುಕೊಳ್ಳುತ್ತಿದ್ದವು. ಎರಡು ದೀರ್ಘ ನಿಮಿಷಗಳ ಕಾಲ ಅವಳಿಗೆ ತಾನು ಯಾವುದೋ ಸುಖಸ್ವಪ್ನವನ್ನು ನೋಡುತ್ತಿದ್ದ ಹಾಗಿದ್ದಿತು.

ಸ್ವಲ್ಪ ಹೊತ್ತಿನ ನಂತರ ನಟರಾಜನು " ವಿಮಲಾ. ನಿಮ್ಮ ಮನೆಯವರೆಲ್ಲಿ ? ಒಬ್ಬರೂ ಕಂಡುಬರುವುದಿಲ್ಲವಲ್ಲ " ಎಂದು ಕೇಳಿದನು.

" ಇಲ್ಲ. ನಾವೀಗ ಇಲ್ಲಿಲ್ಲ. ನಿಮಗೆ ಗೊತ್ತಾಗಲಿಲ್ಲವೇ ?"

" ಇಲ್ಲಿ ಬಂದು ಈ ಮನೆಯನ್ನು ನೋಡಿದ ನಂತರ ನೀವಿಲ್ಲವೆಂದುಕೊಂಡೆ "

" ಯಾಕೆ, ನಾನು ನಿಮಗೊಂದು ಕಾಗದವನ್ನು ಬರೆದಿದ್ದೆನಲ್ಲಾ "

" ಇಲ್ಲ. ನನಗಾವುದೂ ಬರಲಿಲ್ಲ "

" ನಾನು ನಿಮಗೆ ಕಾಗದ ಬರೆದಿದ್ದೆ. ಅದು ತಲುಪಲಿಲ್ಲವೆಂದು ಕಂಡುಬರುತ್ತದೆ. ಇಲ್ಲಿ ಮರ ಬಿದ್ದು ನಮ್ಮ ಮನೆ ಬಿದ್ದುಹೋದುದೂ, ಅತ್ತೆ ಸತ್ತದ್ದೂ, ನಾನು ಆಸ್ಪತ್ರೆಯಲ್ಲಿದ್ದದ್ದೂ ನಿಮಗೆ ಗೊತ್ತಿಲ್ಲವೇ ?"

" ಗೊತ್ತು. ಆಗ ನಾನು ಇಲ್ಲಿಯೇ ಇದ್ದೆ. ಅದೆಲ್ಲಾ ನನಗೆ ಗೊತ್ತು, ಇಲ್ಲಿಂದ ಹೊರಡುವ ವೇಳೆಗೆ ನೀನು ಆರೋಗ್ಯವಾಗಿದ್ದೆ "

" ನಾನು ಆಸ್ಪತ್ರೆಯಿಂದ ಮನೆಗೆ ಬಂದ ನಂತರ ಒಂದು ದಿನ...."

" ವಿಮಲಾ. ನಾವಿಲ್ಲಿ ಮಾಡುವುದೇನು ? ಎಲ್ಲಿಯಾದರೂ ಹೋಗೋಣ ಬಾ. ಹೊರಗಡೆ ಟ್ಯಾಕ್ಸಿಯಿದೆ. ಈ ಚಳಿಯಲ್ಲಿ ಒಂದು

ಸ್ಟ್ರಾಂಗ್ ಕಾಫಿಯನ್ನು ಕುಡಿದರೆ ಎಷ್ಟೋ ಹಾಯಾಗಿರುತ್ತದೆ. ಎಲ್ಲಿ ಹೋಗೋಣ ?"

ವಿಮಲೆಯು " ಮನೆಗೇ ಹೋಗಬಹುದು. ಅಲ್ಲಿಯೇ ಕಾಫಿ ತೆಗೆದು ಕೊಳ್ಳಬಹುದು. ಆದರೆ ನಾನು ನಿಮ್ಮೊಂದಿಗೆ ಮಾತನಾಡಬೇಕು. ಅಲ್ಲಿ ಯವರೆವಿಗೆ ಇತರರನ್ನು ನೋಡುವುದಾಗಲೀ ಮನೆಗೆ ಹೋಗುವುದಾಗಲೀ ಬೇಡ " ಎಂದಳು.

ಅವರಿಬ್ಬರೂ ನಡೆದುಕೊಂಡು ಟ್ಯಾಕ್ಸಿಯ ಬಳಿಗೆ ಬಂದರು. ಅಲ್ಲಿಂದ ಬೆಂಗಳೂರಿಗೆ ಬಂದುಬಿಟ್ಟರು. ಸೌತ್ ಪೆರೇಡಿನಲ್ಲಿ ಬಿಸಿಬಿಸಿಯಾಗಿ ಒಬ್ಬೊಬ್ಬರು ಎರಡೆರಡು ಕಪ್ಪು ಕಾಫೀ ಕುಡಿದರು. ಅಲ್ಲಿಂದ ಕಬ್ಬನ್ ಪಾರ್ಕಿಗೆ ಬಂದು ಕಲ್ಲು ಬೆಂಚಿನ ಮೇಲೆ ಕುಳಿತು ಮಾತನಾಡ ತೊಡಗಿದರು.

ಬಹಳ ಹೊತ್ತು ಮಾತನಾಡಿದರು. ಅನೇಕ ಕಾಲ ಒಬ್ಬರನೊಬ್ಬರು ಅಗಲಿದ ಪ್ರಿಯಮಿತ್ರರು ಪುನಃ ಅಕಸ್ಮಾತ್ ಭೇಟಿಯಾದರೆ ಮಾತನಾಡು ವಂತೆ ಮಾತನಾಡಿದರು. ಪ್ರಶ್ನೆ–ಉತ್ತರ. ಉತ್ತರ–ಪ್ರಶ್ನೆ. ಕೆಲವು ಬಾರಿ ಅವರ ಮುಖಗಳು ಕೆಂಪಗಾಗುತ್ತಿದ್ದವು. ಅವರು ನಿದಾನವಾಗಿ ಮೆಲು ದನಿಯಿಂದ ಮಾತನಾಡಿದರು. ಬಾಯಾರಿದವರು ಗಟಗಟನೆ ನೀರು ಕುಡಿಯುವಂತೆ ಅವಸರವಸರವಾಗಿ ಮಾತನಾಡಿದರು. ಅವರ ಮಾತುಗಳು ಪರಸ್ಪರ ತೃಪ್ತಿಕರವಾಗಿದ್ದವು. ಆದರೆ ಮಾತನಾಡಿ ಅವರಿಗೆ ತೃಪ್ತಿಯೇ ಆಗಲಿಲ್ಲ.

ಬಲು ಹೊತ್ತಿನ ಮೇಲೆ ವಿಮಲೆಯು " ನಾವಿನ್ನು ಮನೆಗೆ ಹೋಗೋಣವೇ ?" ಎಂದಳು.

ಅವನು ಒಪ್ಪಿಕೊಂಡನು. ಇಬ್ಬರೂ ಮನೆಗೆ ಬಂದರು.

ದೂರದಲ್ಲಿಯೇ ದೀಪಗಳನ್ನು ಹಚ್ಚಿದ್ದ ಆ ದೊಡ್ಡ ಮನೆಯನ್ನು ನೋಡಿದರೆ ಸ್ವಾಗತಿಸುವಂತಿದ್ದಿತು. ಮನೆಯವರೆಲ್ಲರೂ ಊಟ ಮಾಡಿ ಹಜಾರದಲ್ಲಿ ಮಾತನಾಡುತ್ತಾ ಕುಳಿತಿದ್ದರು. ಇವರಿಬ್ಬರೂ ಬಂದುದನ್ನು ನೋಡಿ ವರದೆಗೆ ಆನಂದವಾಯಿತು. ಶಂಕರನು ಗೌರವದಿಂದ ನಟರಾಜನನ್ನು ಸ್ವಾಗತಿಸಿದನು. ವಾಸು ಶೀಲೆಯರು ಕೂಗಿಕೊಳ್ಳುತ್ತಾ ಅವನು ಬಂದುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು.

ಶಂಕರನು " ನೀವು ವಿಂಧ್ಯಪರ್ವತದ ಅರಣ್ಯಗಳಲ್ಲಿ ಮರೆಯಾದಿರೆಂದಿದ್ದೆ. ನಿಮ್ಮ ಹಾಸಿಗೆ, ಪೆಟ್ಟಿಗೆಗಳೆಲ್ಲಿ ? ರೈಲ್ವೆ ಸ್ಟೇಷನ್ನಿನಲ್ಲಿದೆಯೇನು ? ನಮ್ಮ ಡ್ರೈವರನ್ನು ಕಳಿಸಿ ತರಿಸುತ್ತೇನೆ " ಎಂದನು.

ಪುಷ್ಪಳಿಗೆ ನಿದ್ದೆ ಬಂದಿರಲಿಲ್ಲ. ಅವಳು ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟು ಓಡಿಯಾಡುತ್ತಿದ್ದಳು.

ವಿಮಲೆಯ ಸೀರೆ ಎಲ್ಲವೂ ನೆನೆದು ಹೋಗಿದ್ದಿತು. ಅವಳು ಬಟ್ಟೆಗಳನ್ನು ಬದಲಾಯಿಸುವುದಕ್ಕೆ ಮಹಡಿಯ ಮೇಲೆ ಹೋದಳು. ನಟರಾಜನ ಬಟ್ಟೆಗಳೂ ನೆನೆದು ಹೋಗಿದ್ದವು. ಅವನನ್ನು ಶಂಕರನು ತನ್ನ ಕೋಣೆಗೆ ಕರೆದುಕೊಂಡು ಹೋದನು.

ಅಕ್ಕನ ಜೊತೆಯಲ್ಲಿ ಮಹಡಿಯ ಮೇಲೆ ಹೋದ ಶೀಲೆಯು " ಕೆಂಗೇರಿಯ ಮನೆಯು ಪಾಳುಬಿದ್ದಿದೆಯಲ್ಲವೇ, ಅಕ್ಕಾ " ಎಂದು ಕೇಳಿದಳು.

" ಯಾರೂ ಇಲ್ಲ, ಅಷ್ಟೆ ! ಪಾಳು ಬಿದ್ದಿದೆ ಎಂದರೇನು ?" ಎಂಬುದಾಗಿ ಅಕ್ಕನು ಕೇಳಿದಳು.

ಅಷ್ಟು ಹೊತ್ತಿಗೆ ಪಾಳುಬಿದ್ದಿರುವುದೇನು ?" ಎನ್ನುತ್ತಾ ವೆಂಕಟರಾಯನು ಒಳಗೆ ಬಂದನು.

ಅವನು ಬರುತ್ತಲೂ ಶೀಲೆಯು ಹೊರಗೆ ಹೊರಟು ಹೋದಳು.

ಗಂಡನು ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತಾ ವಿಮಲೆಯು " ಕೆಂಗೇರಿಯ ಮನೆಯ ವಿಷಯವನ್ನು ಮಾತನಾಡುತ್ತಿದ್ದೆವು. ಈದಿನ ಬೇಜಾರಾಗಿ ನಾನು ಅತ್ತಕಡೆ ಹೋಗಿದ್ದೆ. ನಟರಾಜ್ ಸಹ ಅಲ್ಲಿಗೆ ಬಂದಿದ್ದರು. ಅವರೀಗ ಇಲ್ಲಿ ಬಂದಿದ್ದಾರೆ. ನಿಮಗೆ ಗೊತ್ತೇನು ?" ಎಂದು ಕೇಳಿದಳು.

" ಅವನುಬ ಂದಿರುವುದು ನನಗೇನು ಗೊತ್ತು ? ಇತ್ತೀಚೆಗೆ ನೀನು ಇಂತಹ ವಕ್ರವಾದ ಪ್ರಶ್ನೆಗಳನ್ನು ಕೇಳಲು ಆರಂಭ ಮಾಡಿದ್ದೀಯೆ ! ಹೆಂಗಸರ ಸ್ವಭಾವವೇ ಹಾಗೆ "

ಗಂಡನಾಡಿದ ಮಾತು ಅವಳಿಗೆ ಬಹಳ ಬೇಜಾರಾಯಿತು. ಸುಖವಾದ ಸ್ವಪ್ನವನ್ನು ನೋಡುತ್ತಿದ್ದಾಗ ಹಠಾತ್ತನೆ ಭೂತವೊಂದು ಎದುರಿಗೆ ಬಂದು ನಿಂತಂತೆ ಆಯಿತು. ಅವಳವನನ್ನು ಲಕ್ಷ್ಯ ಮಾಡದೆ ತನ್ನಂತೆ ತಾನು ತಲೆ ಬಾಚಿಕೊಳ್ಳಲಾರಂಭಿಸಿದಳು.

" ಏನು ಅಲಂಕಾರ ಮಾಡಿಕೊಳ್ಳುತ್ತಿದ್ದೀಯೆ ! ಎಲ್ಲಿಗಾದರೂ ಹೋಗುತ್ತೀಯೇನು ?"

" ಇಲ್ಲ. ಈಗೆಲ್ಲೂ ಹೋಗುವುದಿಲ್ಲ "

ವೆಂಕಟರಾಯನು ಅಲ್ಲಿಗೂ ಸುಮ್ಮನಾಗದೇ " ಅವನೇಕೆ ಇಲ್ಲಿಗೀಗ ಬಂದ ?" ಎಂದು ಕೇಳಿದನು.

" ಅವರು ವಿಂಧ್ಯ ಪರ್ವತಗಳಲ್ಲಿದ್ದರು. ಭಾರತ ಸರ್ಕಾರವು ಅವ ನನ್ನು ಓಲ್ಗಾ ತೀರಪ್ರದೇಶಕ್ಕೆ ಕಳಿಸಬೇಕೆಂದಿದೆ. ಅಲ್ಲಿಗೆ ಹೋಗುವ ಮೊದಲು ಅವರೊಂದು ಬಾರಿ ಇಲ್ಲಿಗೆ ಬಂದಿದ್ದಾರೆ.

" ಇಲ್ಲೇ ಊಟ ಮಾಡುತ್ತಾನೋ ?"

" ಹೌದು "

" ಅಂದರೆ ಇಲ್ಲೇ ಇರುತ್ತಾನೆ "

" ಇಲ್ಲ. ಶಂಕರ ಇರುವುದಕ್ಕೆ ಹೇಳಿದ. ಆದರೆ ಅವರು ಯಾರ ಜೊತೆಯಲ್ಲಿಯೋ ಬಂದಿದ್ದಾರೆ. ಅಲ್ಲಿಯೇ ಇರುತ್ತಾರೆ "

" ಆತ ಬರುವುದು ನಿನಗೆ ಗೊತ್ತಿದ್ದಿತೇನು ?"

" ಇಲ್ಲ. ನನಗೆ ಬೇಜಾರಾಗಿ ಈ ದಿನ ಕೆಂಗೇರಿ ಮನೆಯ ಬಳಿಗೆ ಹೊರಟು ಹೋದೆ. ಅಷ್ಟು ಹೊತ್ತಿಗೆ ಅವರು ನಮ್ಮನ್ನು ಹುಡುಕಿಕೊಂಡು ಟ್ಯಾಕ್ಸಿಯಲ್ಲಿ ಬಂದಿದ್ದರು. ಇಬ್ಬರೂ ಸೇರಿ ಒಟ್ಟಿಗೆ ಮನೆಗೆ ಬಂದೆವು "

" ನೀವುಗಳೆಲ್ಲಾ ಅಲ್ಲಿಯೇ ಇದ್ದೀರೆಂದು ಕೊಂಡಿದ್ದನೇನೋ "

" ಹೌದು ! ಹೀಗೆ ಆಕಸ್ಮಿಕವಾಗಿ ಬದಲಾವಣೆಯಾಗಿರುವುದು ಅವರಿ ಗೇನು ಗೊತ್ತು ? ಎಲ್ಲಿ, ಪುಷ್ಪಾ ಪುಷ್ಪಾ" ಎಂದು ಅವಳನ್ನು ನೆನೆಸಿಕೊಂಡು ಮನೆಗೆ ಬಂದಾಗಿನಿಂದ ಮಗಳನ್ನು ನೋಡದಿದ್ದ ತಾಯಿಯು ಕೂಗಿದಳು.

ತಾಯಿಯ ಧ್ವನಿಯನ್ನು ಕೇಳಿದ ಪುಷ್ಪಳು ನಾಯಿಯನ್ನು ಹಿಡಿದು ಕೊಂಡು ಬಂದಳು.

ಅಥವಾ ನಾಯಿಯು ತನ್ನ ಕತ್ತಿನ ಪಟ್ಟಿಯನ್ನು ಹಿಡಿದುಕೊಂಡಿದ್ದ ಮಗುವನ್ನು ಜಗ್ಗಿ ಎಳೆದುಕೊಂಡು ಬರುತ್ತಿದ್ದಿತು.

ವೆಂಕಟರಾಯನು " ವಿಮಲಾ. ಇವನನ್ನು ಕಂಡರೆ ನನಗೆ ಸರಿಬೀ

ಳುವುದಿಲ್ಲ. ನಿನಗೇನಾದರೂ ಲೋಕಾನುಭವವಿದ್ದರೆ ಅವನೊಂದಿಗೆ ನೀನು ಹೆಚ್ಚು ಮಾತನಾಡದಿದ್ದರೆ ಬಹಳ ಸಂತೋಷ " ಎಂದು ಹೇಳಿದನು.

ವಿಮಲೆಯು ಅವನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೇ ಹಾಸ್ಯಮಯವಾದ ಧ್ವನಿಯಿಂದ " ಯಾಕೆ ಇಷ್ಟು ಹೊತ್ತಾದರೂ ಮಲಗಿಕೊಳ್ಳಲಿಲ್ಲ. ಇನ್ನು ಮೇಲೆ ಮಲಗಿಕೊಳ್ಳಲು ಹೊತ್ತು ಮಾಡಿದೆಯೋ ನಾನು ನಿನ್ನನ್ನು ಸುಮ್ಮನೆಬಿಡುವುದಿಲ್ಲ"ವೆಂದು ಹೇಳಿ ಪುಷ್ಪಳಕೆನ್ನೆಯನ್ನು ಮೃದುವಾಗಿ ಚಿವುಟಿದಳು.

ಅವಳು ಮಗುವನ್ನು ಎತ್ತಿಕೊಂಡು ಕೆಳಗಿಳಿಯಲು ವೇಳೆಗೆ ತಟ್ಟೆಗಳನ್ನು ಹಾಕಲಾಗಿದ್ದಿತು. ಎಲ್ಲರೂ ಊಟಕ್ಕೆ ಕುಳಿತುಕೊಂಡಿದ್ದರು. ವಿಮಲೆಯು ಹೋಗುತ್ತಲೇ ಪುಷ್ಪಳನ್ನು ನೋಡಿದ ವಾಸುವು ಅವಳನ್ನು ಕರೆದನು. ಮಗುವು ಸಣ್ಣ ಮಾವನ ಬಳಿಗೆ ಹೋಯಿತು. ಅವರಿಬ್ಬರೂ ಸಣ್ಣ ಚೇಷ್ಟೆಗಳಲ್ಲಿ ತೊಡಗಿದರು. ವಿಮಲೆಯೂ ಒಂದು ಕಡೆ ಊಟಕ್ಕೆ ಕುಳಿತುಕೊಂಡಳು. ಅವಳೂ ನಟರಾಜನೂ ಬಹಿರಂಗವಾಗಿ ಮಾತನಾಡುತ್ತಿರಲಿಲ್ಲ. ಅವರ ಪರಸ್ಪರ ನೋಟಗಳೇ ಮಾತುಗಳಾಗಿದ್ದವು.

ಅವಳು ಸುಮ್ಮನೆ ಊಟ ಮಾಡುತ್ತಾ ಕುಳಿತಿದ್ದರೂ ಅವಳ ಮನಸ್ಸು ಸುಮ್ಮನಿರಲಿಲ್ಲ. ಇನ್ನು ಕೆಲವು ದಿನಗಳು ನಟರಾಜನು ಇಲ್ಲಿಯೇ ಇರುತ್ತಾನೆ. ಆಗಾಗ ಅವನನ್ನು ನೋಡಿ ಮಾತನಾಡುತ್ತಾಳೆ. ಅದನ್ನೇ ಕುರಿತು ಅವಳು ಯೋಚಿಸುತ್ತಿದ್ದಳು. ಈ ದಿನ ಕಬ್ಬನ್ ಪಾರ್ಕಿನಲ್ಲಿ ಕುಳಿತು ಮಾತನಾಡಿದಂತೆ ಹಾಯಾಗಿ ಮಾತನಾಡಲು ಅವಕಾಶ ಸಿಕ್ಕಿದರೆ ? ಹಾಗೆ ಮಾತನಾಡುವುದು ಎಲ್ಲಿ—ಯಾವಾಗ ಎಂದು ಅವಳ ಮನಸ್ಸು ಹುಡುಕುತ್ತಿತ್ತು. ಅವಳ ನೋಟಗಳು ಅದೇ ಭಾವನೆಯನ್ನು ಹೊರಚಿಮ್ಮುತ್ತಿದ್ದವು. ಅವನ ಕಣ್ಣಿನೊಡನೆ ತನ್ನ ಕಣ್ಣು ಕೂಡಿದಾಗ ಅವನೂ ಅದನ್ನೇ ಯೋಚನೆ ಮಾಡುತ್ತಿದ್ದಾನೆಂದು ಅವಳಿಗೆ ಗೊತ್ತಾಗುತ್ತಿದ್ದಿತು.

ಊಟ ಮಾಡಿ ಎಲ್ಲರೂ ಹೊರಗೆ ಬಂದು ವರಾಂಡದಲ್ಲಿ ಹಾಕಿದ್ದ ಕುರ್ಚಿಗಳ ಮೇಲೆ ಕುಳಿತುಕೊಂಡರು. ಮಳೆಯು ನಿಂತಿದ್ದಿತು. ಬೀಸುತ್ತಿದ್ದ ಗಾಳಿಯಲ್ಲಿ ಶೈತ್ಯವಿದ್ದಿತು. ಅಲ್ಲಲ್ಲಿ ತಾರೆಗಳು ಮಿಣುಗುತ್ತಿದ್ದವು. ಎಲ್ಲೋ ಮೋಡದ ಹಿಂದಿದ್ದ ಚಂದ್ರಮನು ಇಣಿಕಿ ನೋಡುತ್ತಿದ್ದನು.

ಎಲ್ಲರೊಡನೆ ವೆಂಕಟರಾಯನೂ ಕುಳಿತಿದ್ದನು. ನಟರಾಜ್, ಶಂಕರರೊಡನೆ ಸಿಗರೇಟ್ ಹಚ್ಚಿಕೊಂಡವನು " ನನಗೆ ನಿದ್ದೆ ಬರುತ್ತದೆ " ಎಂದು ಹೇಳಿ ಹೊರಟು ಹೋದನು. ಅವನು ಹೋಗುವಾಗ ತನ್ನ ಹೆಂಡತಿಯೂ ಬರುವಳೇ ಎಂದು ಗಳಿಗೆಯ ಹೊತ್ತು ಕಾದಿದ್ದನು. ಅವಳು ಮೇಲೇಳದುದನ್ನು ನೋಡಿ " ಹಾಳಾಗಿ ಹೋಗಲಿ " ಎಂದುಕೊಂಡು ಹೊರಟು ಹೋದನು.

ಸುಮಾರು ಅರ್ಧ ಗಂಟೆಯ ಹೊತ್ತು ಮಿಕ್ಕವರು ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು. ನಟರಾಜನು ಮನೆಗೆ ಬಂದಾಗಲೇ ಟ್ಯಾಕ್ಸಿಯನ್ನು ಕಳಿಸಿಬಿಟ್ಟದ್ದನು. ಡ್ರೈವರು ಮನೆಗೆ ಹೊರಟು ಹೋಗಿದ್ದನು. ಶಂಕರನೇ ನಟರಾಜನನ್ನು ಬಿಟ್ಟು ಬರಬೇಕೆಂದು ಗೊತ್ತಾಯಿತು. ಅವನು ಕಾರು ತರಲು ಷೆಡ್ಡಿನ ಬಳಿಗೆ ಹೋದನು. ನಟರಾಜನೂ ವಿಮಲೆಯೂ ಜಗುಲಿಯಿಂದ ಕೆಳಗಿಳಿದು ಕಾರಿಗಾಗಿ ಕಾಯುತ್ತಾ ನಿಂತಿದ್ದರು.

ವಿಮಲೆಯು " ಇನ್ನೂ ಎಷ್ಟು ದಿನ ಈ ಊರಿನಲ್ಲಿರುತ್ತೀರಿ ?" ಎಂದು ಕೇಳಿದಳು.

ನಟರಾಜನು " ಇನ್ನೂ ಒಂದು ವಾರ, ಹದಿನೈದು ದಿನಗಳೊಳಗಾಗಿ ನೀನು ಯಾವುದಾದರೂ ಒಂದು ಇತ್ಯರ್ಥ ಮಾಡಿಬಿಡಬೇಕು, ವಿಮಲಾ. ಈ ತಾಟಸ್ಥ್ಯಭಾವವು ಪ್ರಯೋಜನವಿಲ್ಲ " ಎಂದನು.

" ನಾನೇ ! ಇತ್ಯರ್ಥವೇ ?"

" ಹೌದು ! ನೀನು ಮಾಡುವ ನಿರ್ಣಯದ ಮೇಲೆಯೇ ಎಲ್ಲವೂ ಅವಲಂಬಿಸಿದೆ " ಎಂದು ಹೇಳಿದನು.

ಅಷ್ಟು ಹೊತ್ತಿಗೆ ಶಂಕರನು ಕಾರು ತರಲು ನಟರಾಜನು ಕುಳಿತುಕೊಂಡನು.

ವಿಮಲೆಯು ಕಾರು ಮರೆಯಾಗುವವರೆವಿಗೆ ಅಲ್ಲಿಯೇ ನಿಂತಿದ್ದು ಮನೆಯೊಳಗೆ ಹೋದಳು.

## ೨೫

ನಟರಾಜನು " ನೀನು ಅಷ್ಟು ಹಠದಿಂದ ಹೇಳುವುದಾದರೆ ಬೇರೆಯ ಮಾರ್ಗವೇ ಇಲ್ಲ, ವಿಮಲಾ. ಇನ್ನು ಮೇಲೆ ನಾವು ಆ ವಿಷಯವನ್ನು ಮರೆತುಬಿಡುವುದು ಒಳ್ಳೆಯದು " ಎಂದನು.

ವಿಮಲೆಯು " ನನಗೆ ಹಾಗೆಯೇ ಕಾಣುತ್ತದೆ " ಎಂದಳು.

ಆ ಮಾತು ಹೇಳಿದ ವಿಮಲೆಯ ಕಡೆಗೆ ನಟರಾಜನು ನೋಡಿದನು. ಆ ದೃಷ್ಟಿಯು ಪ್ರಿಯವಾಗಿಲ್ಲದೇ ಕಹಿಯಾಗಿದ್ದಿತು.

ಅನಂತರ ನಟರಾಜನು ಸಿಗರೇಟು ಹಚ್ಚಿಕೊಂಡು " ನೀನು ಹೇಳಿದ ಹಾಗೇ ಎಂದುಕೊಂಡರೆ ಎಲ್ಲವೂ ಸುಖವಾಗುತ್ತವೆಯಲ್ಲವೇ ?" ಎಂದನು.

ವಿಮಲೆಯು ಬೆಚ್ಚಿಬಿದ್ದು " ಸುಖ ! ನನಗೆ ! ನನಗಂತೂ ಅದು ಸುಖವಲ್ಲ " ಎಂದು ಹೇಳಿದಳು.

" ಹಾಗಾದರೆ ನೀನು ಹೊರಡಬಹುದಲ್ಲ ?"

" ಅದಂತೂ ಸಾಧ್ಯವೇ ಇಲ್ಲ "

" ನೀನು ಯೋಚನೆಯೇ ಮಾಡದೇ ಹೀಗೆನ್ನುತ್ತೀಯಲ್ಲ "

" ಯೋಚನೆ ಮಾಡದೇ ಇಲ್ಲ. ಅಗನ್ನು ಯೋಚನೆ ಮಾಡುತ್ತಿರುವಾಗ ಸುಖವಾದ ಸ್ವಪ್ನವನ್ನು ನೋಡುತ್ತಿರುವಂತೆ........" ಎಂದು ಹೇಳಿ ಅರ್ಧದಲ್ಲಿ ನಿಲ್ಲಿಸಿದಳು.

" ಹೇಳು ಮುಂದೆ ಹೇಳು. ಯಾಕೆ ನಿಲ್ಲಿಸುತ್ತೀಯೆ ?"

" ನಾನು ಒಂದಲ್ಲ ನೂರು ಬಾರಿ ಯೋಚಿಸಿ ನೋಡಿದ್ದೇನೆ. ಅಣ್ಣ, ತಮ್ಮ, ತಂಗಿಯರು, ಮಗಳು ಎಲ್ಲರನ್ನೂ ಒಂದು ಕಡೆ ಇಟ್ಟು, ನಿಮ್ಮನ್ನು ಮಾತ್ರ ಮತ್ತೊಂದು ಕಡೆ ಇಟ್ಟು ತೂಕ ಮಾಡಿ ನೋಡಿದ್ದೇನೆ "

" ತೂಕವು ಎತ್ತ ಕಡೆಗೆ ಬಂದಿತೋ ?"

" ನಿಮ್ಮ ಕಡೆಯೇ ತೂಕ ಬರುತ್ತದೆ. ನನಗೆ ನಿಮ್ಮೊಡನೆ ಇದ್ದರೆ ಸುಖ. ಇಲ್ಲದಿದ್ದರೆ ಇಲ್ಲ. ಅದನ್ನು ಎಂದೋ ನಿರ್ಣಯ ಮಾಡಿದ್ದೇನೆ "

" ನಿನಗೆ ಹಾಗಿರುವುದಾದರೆ ನೀನು ಅವನಿಂದ ಬಿಡಿಸಿಕೊಳ್ಳುವುದೊಂದು ಕಷ್ಟವೇ ? ನೀನು ಬೇಡ ಎಂದರೆ ಬಿಟ್ಟು ಹೋಗುತ್ತದೆ"

ಅವಳು ಆ ಪ್ರಶ್ನೆಗೆ ಮೊದಲೇ ಉತ್ತರ ಹೇಳಿದ್ದಳು. ಈಗಲೂ ಅದೇ ಉತ್ತರವು ಸಿದ್ಧವಾಗಿದ್ದಿತು.

ನಟರಾಜನು ಎರಡುವಾರಗಳಿಂದಲೂ ಮಲ್ಲೇಶ್ವರದಲ್ಲಿ ತನ್ನ ಸ್ನೇಹಿತನ ಮನೆಯಲ್ಲಿದ್ದನು. ನಾಳೆಯ ದಿನ ಬೊಂಬಾಯಿಗೆ ಹೊರಟು ಹೋಗುತ್ತಾನೆ. ಅಲ್ಲಿಂದ ರಷ್ಯಾಗೆ ಪ್ರಯಾಣ ಮಾಡುತ್ತಾನೆ.

ಈ ಹದಿನೈದು ದಿನಗಳಿಂದಲೂ ಅವರು ಅನೇಕ ಬಾರಿ ಪರಸ್ಪರ ಭೇಟಿಯನ್ನು ಮಾಡಿದ್ದರು. ವಿಮಲೆಯು ಮಲ್ಲೇಶ್ವರಕ್ಕೆ ಹೋಗಿ ಅವನನ್ನು ನೋಡುತ್ತಿದ್ದಳು. ಅಥವಾ ಅವನೇ ಬಂದು ನೋಡುತ್ತಿದ್ದನು. ಎರಡು ಮೂರು ಬಾರಿ ವಿಮಲೆಯು ವರದಳನ್ನೂ ಪುಷ್ಪಳನ್ನೂ ಕರೆದುಕೊಂಡು ನಟರಾಜನೊಂದಿಗೆ ಸಿನಿಮಾಗೆ ಸಹ ಹೋಗಿದ್ದಳು. ಒಂದು ಬಾರಿ ಹಣಕ್ಕೆ ಏರ್ಪಾಟು ಮಾಡಲು ವೆಂಕಟರಾಯನು ವಿರೂಪಾಕ್ಷಯ್ಯನೊಡನೆ ಹೋಗಿದ್ದನು. ಮೂರು ನಾಲ್ಕು ದಿನ ಅವನು ಊರಿನಲ್ಲಿರಲಿಲ್ಲ. ಆ ದಿನಗಳಲ್ಲಿ ವಿಮಲೆಯೂ ನಟರಾಜನೂ ಬಹಳ ಹೊತ್ತು ಒಟ್ಟಿಗೇ ಇರುತ್ತಿದ್ದರು.

ನಾಳೆಯ ದಿನ ಪ್ರಾತಃಕಾಲ ಅವನು ಪ್ರಯಾಣ ಮಾಡುತ್ತಾನೆ. ಅವಳನ್ನು ಬಿಟ್ಟು ಹೋಗಲು ಅವನಿಗೆ ಮನಸ್ಸಿಲ್ಲ.

ನಟರಾಜನು ವಿಮಲೆಗೆ ಎಷ್ಟೋ ಹೇಳಿದನು. ತಾನು ಮಾರನೆಯ ದಿನ ಹೊರಟು ಹೋಗುವುದಾಗಿ ಹೇಳಿದನು. ಪುನಃ ಪರಸ್ಪರ ನೋಡು

ವುದು ವರ್ಷಾಂತರಗಳಾಗಬಹುದೆಂದು ಹೇಳಿದನು. ಆದರೆ ಅದೊಂದೂ ಪ್ರಯೋಜನವಾಗಲಿಲ್ಲ.

ವಿಮಲೆಯ ವಿಷಯುವೇ ಬೇರೇ ! ನಾಳೆ ಅವನು ಇರುತ್ತಾನೆಯೋ ಇಲ್ಲವೋ ? ಈಗಂತೂ ಇದ್ದಾನೆ. ಅವನೊಡನೆ ಇರುವಾಗ ಅವಳಿಗೆ ಭೂತ ಭವಿಷ್ಯ ಕಾಲಗಳಿಲ್ಲ! ವರ್ತಮಾನವೊಂದೇ ! ಆ ವರ್ತಮಾನವು ಸುಖಕರವಾಗಿರುತ್ತದೆ. ಅಷ್ಟೇ ಅವಳಿಗೆ ಸಾಕು.

ನಟರಾಜನು ಇದ್ದಕ್ಕಿದ್ದಂತೆಯೇ "ಆತ ಹಣಕ್ಕೇನು ಮಾಡುತ್ತಾನೆ ?" ಎಂದು ಕೇಳಿದನು.

" ಅವರು ಶಂಕರನಿಂದ ಸಾಲ ತೆಗೆದುಕೊಳ್ಳುತ್ತಾರೆ. ಅದಕ್ಕೆ ಸಾಲವೆಂದು ಹೆಸರು, ಅಷ್ಟೇ. ಕ್ಲಬ್ಬಿನಲ್ಲಿ ಇಸ್ಪೀಟಾಡುತ್ತಾರೆ. ಅದರಲ್ಲಿ ಸ್ವಲ್ಪ ದುಡ್ಡು ಮಾಡುತ್ತಾರೆಂದು ಶಂಕರನು ಹೇಳಿದ "

" ಇತ್ತೀಚಿಗೆ ಬಹಳ ಕುಡಿಯುತ್ತಾನೆಂದು ಸಹ ಕೇಳಿದ್ದೇನೆ "

" ಯಾವುದೂ ಸರಿಯಿಲ್ಲ. ಆದರೆ ಅವುಗಳಿಂದ ಉಪಯೋಗವೇನು ? ಅವರು ಹೇಗಿದ್ದರೂ ನನ್ನ ಕರ್ತವ್ಯದಲ್ಲಿ ಬದಲಾವಣೆಯಾಗುವುದಿಲ್ಲ "

ಅವನು ಮಾತನಾಡಲಿಲ್ಲ. ಕೋಣೆಯಲ್ಲಿ ಕುಳಿತಿದ್ದವರು ಹೊರಗೆ ಬಂದು ಕಾಂಪೌಂಡಿನಲ್ಲಿ ಓಡಿಯಾಡತೊಡಗಿದರು. ವಿಮಲೆಯು ಬೆಂಗಳೂರಿನ ಮನೆಯೊಂದರ ಕಾಂಪೌಂಡಿನಲ್ಲಿ ಓಡಿಯಾಡುತ್ತಿದ್ದರೂ ಅವಳ ಮನಸ್ಸು ಸಹಸ್ರಾರು ಮೈಲಿಗಳ ದೂರದಲ್ಲಿದ್ದಿತು. ನಿಂತಿರುವ ಯೂರಲ್ ಪರ್ವತಗಳೂ ಹರಿಯುತ್ತಿರುವ ಓಲ್ಗಾ ನದಿಯೂ ಅವಳ ಕಣ್ಣುಗಳ ಮುಂದೆ ಕಟ್ಟಿದಂತೆ ಇದ್ದಿತು. ಆ ನದಿಯು ಹರಿಯುವ ಕಲಕಲ ನಿನಾದವು ಕಿವಿಗಳಲ್ಲಿ ಕೇಳುವಂತೆ ಇದ್ದಿತು.

" ಹತ್ತಾರು ಸಾವಿರ ವರ್ಷಗಳ ಹಿಂದೆ ಅಲ್ಲಿ ಏನಿದ್ದಿತೆಂದು ನೀವು ಹುಡುಕುತ್ತೀರಿ ?"

ನಟರಾಜನು ಓಲ್ಗಾ ತೀರದಲ್ಲಿ ವೇದದ ಕಾಲದಲ್ಲಿ ಬದುಕಿದ ಆರ್ಯರ ಕುರುಹುಗಳು ಸಿಗುವುದೇನೋ-ಎಂದು ಹುಡುಕಲು ಹೋಗುತ್ತಿದ್ದನು.

" ನೀನೆಂದುಕೊಂಡಿರುವಂತೆ ಅಲ್ಲಿ ಹುಡುಕಲು ಏನೂ ಇರುವಂತೆ ನನಗೆ ತೋರುವುದಿಲ್ಲ. ವೇದಗಳಲ್ಲಿ ಇಂದ್ರನ ಮತ್ತು ಮತ್ತಿತರ ದೇವತೆಗಳ ವರ್ಣನೆಗಳಿವೆ. ಅವುಗಳೆಲ್ಲವೂ ಸರಿಹೊಂದುತ್ತವೆಯೇನೋ ನೋಡಬೇಕು"

" ಅಂದಿನ ದೇವತೆಗಳ ವರ್ಣನೆಗೆ ಇಂದು ಹೇಗೆ ಕುರುಹುಗಳನ್ನು ಹುಡುಕುತ್ತೀರಿ ?"

" ಅದು ನನ್ನದೊಂದು ಹುಚ್ಚು ಆಲೋಚನೆ, ವಿಮಲಾ. ಇಂದ್ರ ನಿಗೆ ವಯಸ್ಸಾಗಿದ್ದಿತಂತೆ. ಅವನು ಬೆಳ್ಳಗೆ ಉದ್ದವಾಗಿದ್ದ ಒಳ್ಳೆಯ ಮೈಕಟ್ಟನವ. ಅವನಿಗೆ ನೀಳವಾದ ಗಡ್ಡವಿದ್ದಿತಂತೆ. ಆ ಗಡ್ಡವು ಹೊಗೆಯ ಬಣ್ಣವಾಗಿದ್ದಿತಂತೆ. ಇಂದ್ರನು ನಕ್ಕಾಗ ಅವನ ಹೊಳೆಯುವ ಗಡ್ಡವು ಮತ್ತಷ್ಟು ಶೋಭಿಸುತ್ತಿದ್ದಿತಂತೆ. ಯಮಿಯು ಅಣ್ಣನಾದ ಯಮನನ್ನು ಕಾಮಿಸಿ ಮದುವೆ ಮಾಡಿಕೋ ಎಂದಾಗ ಬೆಳಕಿನಲ್ಲಿ ಮಿಂಚುತ್ತಿದ್ದ ಬಂಗಾರದ ಬಣ್ಣದ ಅವಳ ತಲೆಗೂದಲನ್ನು ನೋಡಿದರೂ ಯಮನ ಮನಸ್ಸು ಕಲಂಕಿತವಾಗಲಿಲ್ಲ........ವಿಮಲಾ ! ಓಲ್ಗಾ ನದಿಯ ತೀರದಲ್ಲಿ ಹೊಗೆಯ ಬಣ್ಣದ ನೀಳವಾದ ಗಡ್ಡವಿರುವ ಮುದುಕನು ಎಲ್ಲಿಯಾದರೂ ಕಣ್ಣಿಗೆ ಬಿದ್ದಾನೋ ಎಂದು ಹುಡುಕುತ್ತೇನೆ. ಬಂಗಾರದ ಬಣ್ಣದ ತಲೆಗೂದಲಿನಿಂದ ಕೂಡಿ, ಹರಿಯುವ ಓಲ್ಗಾದಂತೆ ಕಲಕಲಸ್ವರವನ್ನು ಮಾಡುವ ಯಮಿಯಂತಹ ಚೆಲುವೆಯರು ಕಣ್ಣಿಗೆ ಬಿದ್ದಾರೇನೋ ಎಂದು ಹುಡುಕುತ್ತೇನೆ........"

ಹೊಗೆ ಬಣ್ಣದ ನೀಳವಾದ ಗಡ್ಡದ ನಗುಮೊಗದ ಮುದುಕನೂ, ಬಂಗಾರದ ಬಣ್ಣದ ತಲೆಗೂದಲಿನ ಚೆಲುವೆಯರೂ ಮುಂದೆ ಬಂದು ಓಡಿಯಾಡಿದಂತೆ ವಿಮಲೆಗೆ ಭಾಸವಾಯಿತು.

ಅವಳು " ನನಗೂ ಅಲ್ಲಿ ಬರಬೇಕೆಂದು ಆಸೆಯಾಗುತ್ತದೆ. ನಮ್ಮ ಪೂರ್ವಜರ ನಿವಾಸಸ್ಥಾನವನ್ನೂ ಅಲ್ಲಿಯೇ ಉಳಿದುಕೊಂಡ ಅವರ ಸಂತಾನವನ್ನೂ ನೋಡಬೇಕೆಂದು ಮನಸ್ಸಾಗುತ್ತದೆ " ಎಂದಳು.

" ಹಾಗಾದರೆ ಬಾ. ನಾಳೆಯ ದಿನ ಬೆಳಗಾಗಲೇ ಹೊರಟು ಹೋಗೋಣ. ನಿನ್ನ ಹಾಸಿಗೆ ಬಟ್ಟೆಗಳನ್ನು ಈ ದಿನ ರಾತ್ರಿಯೇ ಕಳಿಸಿಬಿಟ್ಟು, ಬೆಳಗಾಗ ಕಾಫೀ ಕುಡಿದು ಹೊರಟು ಬಾ "

" ಪಾಸ್ ಪೋರ್ಟಿಗೇನು ಮಾಡುತ್ತೀರಿ ? ಇಷ್ಟು ಬೇಗ ಪಾಸ್ ಪೋರ್ಟ್ ಸಿಗುವುದೆ ?

" ಅದಕ್ಕೆಲ್ಲಾ ಯೋಚನೆ ಮಾಡಬೇಕಾಗಿಲ್ಲ. ನನ್ನನ್ನು ಭಾರತ ಸರ್ಕಾರವು ಕಳಿಸಿಕೊಡುತ್ತದೆ. ನಾನೊಬ್ಬ ಕಾರ್ಯದರ್ಶಿಯನ್ನು ಕರೆದು ಕೊಂಡು ಹೋಗಲು ಅವಕಾಶವಿದೆ. ಕಾರ್ಯದರ್ಶಿನಿಯನ್ನೇ ಕರೆದು ಕೊಂಡು ಹೋಗುತ್ತೇನೆ "

ಅನೇಕ ನಗರಗಳು. ಅದನ್ನು ದಾಟಿ ಹೋದರೆ ಬೃಹತ್ ಪಟ್ಟಣ. ಅಲ್ಲಿಂದ ವಿಶಾಲವಾದ ನೀಲಸಾಗರ. ಅದರಾಚೆ ಯೂರಲ್ ಪರ್ವತ ಶ್ರೇಣಿ. ಅದರ ಹತ್ತಿರದಲ್ಲಿ ಹರಿಯುವ ಓಲ್ಗಾ ನದಿ. ಆರ್ಯರಿಗೆ ಗಂಗಾನದಿ ಯಂತೆಯೇ ಪವಿತ್ರವಾಗಿದ್ದ ಓಲ್ಗಾನದಿ. ಇವುಗಳನ್ನೆಲ್ಲಾ ವಿಮಲೆಯು ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುತ್ತಿದ್ದಳು.

ನಟರಾಜನು " ವೆಂಕಟುವಿಗೆ ಸ್ಪಷ್ಟವಾಗಿ ಹೇಳಿಬಿಡು, ವಿಮಲಾ. ನೀನು ಖಂಡಿತವಾಗಿಯೂ ಅವನನ್ನು ಮದುವೆ ಮಾಡಿಕೊಳ್ಳಬೇಕೆಂದಿರ ಲಿಲ್ಲ. ಪರಿಸ್ಥಿತಿಗಳ ಒತ್ತಾಯದಿಂದ ಮಾಡಿಕೊಂಡೆ. ಇಂದು ಪರಿಸ್ಥಿತಿ ಒತ್ತಾಯದಿಂದಲೇ ತ್ಯಾಗ ಮಾಡುತ್ತೀಯೆ. ಅಲ್ಲವೇ, ವಿಮಲಾ. ಅದು ನಿಜವೇ ತಾನೇ ?" ಎಂದನು.

ಇಲ್ಲವೆಂದು ಹೇಳಲು ವಿಮಲೆಯಿಂದಾಗಲಿಲ್ಲ. ಆದರೆ ಇಲ್ಲವೆನ್ನುವ ಅರ್ಥ ಬರುವಂತೆ ಅವಳು ತಲೆಯಾಡಿಸಿ ಬಿಟ್ಟಳು.

ಅನಂತರ ಅವನೇನು ಮಾತನಾಡಿದನೋ ಅವಳಿಗೆ ಕೇಳಿಸಲಿಲ್ಲ. ಅಗಲಿಕೆಯ ಮನೋವ್ಯಥೆಯಲ್ಲಿ ನಟರಾಜನಾಡಿದ ಕಡೆಯ ಮಾತುಗ ಳೊಂದೂ ಅವಳ ಕಿವಿಗೆ ಬೀಳಲಿಲ್ಲ. ಬಂದು ಕಾರಿನಲ್ಲಿ ಕುಳಿತು ಕೊಂಡಳು.

ಕಾರಿನಲ್ಲಿ ವಾಪ್ಸು ಬರುತ್ತಾ ಯೋಚನೆ ಮಾಡತೊಡಗಿದಳು. ನಟ ರಾಜನು ದೂರ ದೂರ ಹೊರಡು ಹೋಗುತ್ತಿದ್ದಾನೆ. ತಾನು ಪುನಃ ಅದೇ ಬೇಸರವಾದ ಜೀವನದ ಹತ್ತಿರ ಹತ್ತಿರಕ್ಕೆ ಹೋಗುತ್ತಿದ್ದಾಳೆ. ಅದೇ ಮನೆ. ವರದಳು ರೇಡಿಯೋ ಹಾಡುಗಳನ್ನು ಕೇಳಿ ಮಾಡುವ ಲತಾಮಂಗೇಶಕರ್ ಪ್ರಶಂಸೆ ! ಶಂಕರನಾಡುವ ನಾಗವೇಣಿಯ ಸಂಬಂಧವಾದ ಮಾತುಗಳು.

ಶೀಲೆಯ ನೃತ್ಯ ಸಂಗೀತಗಳು. ವಾಸುವಿನ ಕ್ರಿಕೆಟ್. ಅವನು ಮಂಕಡ್ ಆಗಬೇಕೆಂದಿರುವ ಆಸೆ ಆಕಾಂಕ್ಷೆಗಳು. ಅದನ್ನು ಬಿಟ್ಟರೆ ವೆಂಕಟರಾಯನ ಉತ್ಸಾಹ ರಹಿತವಾದ ಸಾನ್ನಿಧ್ಯ. ಅವನ ಬೇಜಾರಾಗುವ ವಾದವಿವಾದ ಗಳು. ಅವನಿದ್ದರಂತೂ ವಿಮಲೆಗೆ ಆನಂದವೇ ಇಲ್ಲದೇ ಹೋಗಿದೆ. ಆದರೆ ಅವನಿಲ್ಲದ ಕಾಲವೇ ಇಲ್ಲ. ಅವನು ಯಾವಾಗಲೂ ಎದುರಿಗೆ ಇರುತ್ತಾನೆ. ಇದೆಲ್ಲಾ-ಇದೆಲ್ಲಾ ವಿಮಲೆಗೆ ಬೇಜಾರಾಗಿ ಹೋಗಿದೆ. ಎಲ್ಲಿಯಾದರೂ ಓಡಿ ಹೋಗೋಣವೆನ್ನುವಂತೆ ಆಗಿದೆ.

ಒಂದೊಂದು ಬಾರಿ ತಾನು ಓಲ್ಗಾ ತೀರಕ್ಕೆ ಹೋದರೇನು, ಎಂದು ಕೊಳ್ಳುವಳು. ತಾನಲ್ಲಿಗೆ ಹೋದರೆ ಪತಿಯನ್ನು ತ್ಯಾಗ ಮಾಡಿದಂತಾಗುವು ದೇನು ? ಈಗ ಈ ಹದಿನೈದು ದಿನಗಳಿಂದ ತಾನು ಹಾಗೆ ಮಾಡಿದ್ದಾಳೇನು? ಇಲ್ಲ, ಇಲ್ಲ !

ಈ ಜೀವನದಿಂದ ದೂರದಲ್ಲಿ, ಕಣ್ಣಿಗೆ ಕಾಣುವ ದಿಗಂತದ ಆಚೆ, ವಿಶಾಲವಾದ ಭೂ ಪ್ರದೇಶಕ್ಕೆ ಹೋಗಬಾರದೇಕೆ ? ಬೆಟ್ಟಗುಡ್ಡಗಳ ಮೇಲೆ, ಹರಿಯುವ ನದಿಯ ಮಗ್ಗುಲಲ್ಲಿ ಓಡಿಯಾಡಬಾರದೇಕೆ ? ಹೊಸ ವಾತಾ ವರಣ. ಹೊಸ ಜನಗಳು. ಭಿನ್ನವಾದ ಜೀವನ. ಅವೆಷ್ಟು ಉತ್ಸಾಹವು ಯುತವಾಗಿರುತ್ತವೆ.

ತೂಗುವ ರೈಲಿನಲ್ಲಿ, ತೇಲುವ ಹಡಗಿನಲ್ಲಿ ಪ್ರಯಾಣವು ಎಷ್ಟು ಸುಖವಾಗಿರುತ್ತದೆ.

ಆದರೆ—ಆದರೆ ಅದು ಅಸಾಧ್ಯ! ಜನಗಳು ಸಿಕ್ಕಿದಂತೆ ಮಾತನಾಡು ತ್ತಾರೆ. ತನ್ನ ಪತಿ-ಅವನು ಸಹ ತಪ್ಪು ತಿಳಿದುಕೊಳ್ಳುತ್ತಾನೆ. ಈ ಹಾಳು ಪ್ರಪಂಚದಲ್ಲಿ ನಾಲ್ಕು ಜನರನ್ನೂ ಒಪ್ಪಿಸಿ ಬದುಕಬೇಕಾಗಿದೆ. ಶಲ್ಯ ದಂತೆ ಚುಚ್ಚು ಮಾತುಗಳನ್ನು ಅವಳು ಕೇಳಲಾರಳು. ಅವು ಆಡಲ್ಪಡು ತ್ತಿವೆ ಎಂಬ ಭಾವನೆಯನ್ನು ಸಹ ಅವಳು ಸಹಿಸಲಾರಳು.

ಮನೆಯು ಹತ್ತಿರ ಬಂದಾಗ ಅವಳಿಗೆ ಮತ್ತೊಂದು ಆಲೋಚನೆಯು ಬಂದಿತು. ಇದೇ ರಾತ್ರಿ ಪುನಃ ಡ್ರೈವರನನ್ನು ಬರುವಂತೆ ಹೇಳಿ ತನ್ನ ಸಾಮಾನುಗಳನ್ನು ನಟರಾಜನಲ್ಲಿಗೆ ಕಳಿಸಿಬಿಡುವುದು. ಬೆಳಗಾಗ ಅಷ್ಟು ಹೊತ್ತಿಗೇ ಶಂಕರನು ವಾಕಿಂಗ್ ಹೊರಟುಹೋಗುತ್ತಾನೆ. ವರದೆಯು

ಎಲ್ಲಿಯೋ ಇರುತ್ತಾಳೆ. ವೆಂಕಟರಾಯನು ಮಲಗಿ ನಿದ್ದೆ ಮಾಡುತ್ತಾ ಇರುತ್ತಾನೆ. ಆಗ ತಾನು ಪುಷ್ಪಳನ್ನು ಎತ್ತಿಕೊಂಡು ಹೊರಟು ಹೋದರೆ? ಬಸ್‌ನಲ್ಲಿ ಕುಳಿತು ರೈಲ್ವೆ ಸ್ಟೇಷನ್ನಿಗೆ ಹೋಗಿ, ಹೊರಟುಹೋದರೆ-

ಅದು ತನ್ನಿಂದಾಗದ ಕೆಲಸವೆಂದು ಅವಳಿಗೆ ತೋರಿತು. ತನ್ನ ಕರ್ತವ್ಯದ ವಿನಾ ಇನ್ನಾವುದೂ ಅವಳ ಮನಸ್ಸಿಗೆ ಸರಿ ಎಂದು ಕಂಡು ಬರಲಿಲ್ಲ.

ಆ ಕರ್ತವ್ಯವು ಅವಳು ಇಲ್ಲಿಯೇ ಇದ್ದು ಬಿಡುವುದು.

ವಿಮಲೆಯು ಮನೆಗೆ ಬಂದಳು. ಬಂದ ಕೂಡಲೇ ಅವಳಿಗೆ ಹಳೆಯ ಯೋಚನೆಗಳೂ ಕೆಲಸಗಳೂ ಮೊದಲಾದುವು. ಆದಿನ ರಾತ್ರಿ ನಾಗವೇಣಿಯು ಊಟಕ್ಕೆ ಬರುತ್ತಾಳೆ. ಅದಕ್ಕೆ ಓಡಿಯಾಡಬೇಕೆಂದು ಅವನ ಮನಸ್ಸು. ತಾನೇ ಓಡಿಯಾಡಲು ಸಂಕೋಚ. ವಿಮಲೆಯು ಓಡಿಯಾಡಬೇಕು. ವಾಸುವು ಮಾರನೆಯ ದಿನ ಸ್ಕೂಲಿಗೆ ಹೋಗಲು ತಯಾರಾಗಿಲ್ಲ. " ನಮ್ಮ ಹುಡುಗನಿಗೆ ಕೆಲಸ. ಅವನಿಗೆ ರಜಾ ಕೊಡಿರಿ " ಎಂದು ಕಾಗದ ಬರೆದು ಕೊಡಬೇಕು. ಅವನದನ್ನು ಕೇಳುತ್ತಿದ್ದಾನೆ. ಆ ಅಗಸರವನು ಬಟ್ಟೆಗಳನ್ನು ಸರಿಯಾಗಿ ಒಗೆದಿಲ್ಲವಂತೆ. ವರದಳು ರೇಗುತ್ತಿದ್ದಾಳೆ. ಅವಳಿಗೆ ಸಮಾಧಾನ ಹೇಳಬೇಕು.

ಏನು ಮಾಡಿದರೂ ವರದಳಿಗೆ ಸಮಾಧಾನವಾಗಲಿಲ್ಲ. ಅವಳ ಪಟ್ಟನ್ನು ಬಿಡಿಸಲು ವಿಮಲೆಯು ಸಣ್ಣದೊಂದು ತಂತ್ರವನ್ನು ಮಾಡಬೇಕಾಯಿತು.

" ಆ ಅಗಸರವನ ಮನೆ ಹಾಳಾಗಿ ಹೋಗಲಿ. ವರದಾ, ಈದಿನ ಲತಾ ಮಂಗೇಶ್‌ಕರ್ ಹಾಡುತ್ತಾಳೆಂದೆಯಲ್ಲಾ! ಸರಿಯಾಗಿ ಏಳೂವರೆ. ರೇಡಿಯೋ ಟ್ಯೂನ್ ಮಾಡಿದೆಯಾ ?"

ವರದಳು " ಮರೆತುಬಿಟ್ಟಿದ್ದೆ, ಅಕ್ಕಾ " ಎಂದು ಹೇಳಿ ರೇಡಿಯೋದ ಬಳಿಗೆ ಓಡಿಹೋದಳು.

ವಿಮಲೆ ಮಹಡಿಯ ಮೇಲೆ ಹೋಗಿ ತನ್ನ ಬಟ್ಟೆಗಳನ್ನು ಬದಲಾಯಿಸಿಕೊಂಡು ಬಂದಳು. ಪುನಃ ಕೆಳಗೆ ಬಂದ ಮೇಲೆ ಅವಳಿಗೆ ಪುಷ್ಪಳ

ನೆನಪು ಬಂದಿತು. ಮಹಡಿಯ ಮೇಲೆಯೂ ಇಲ್ಲ. ಕೆಳಗಡೆಯೂ ಇಲ್ಲ. ನಿಜವಾಗಿ ಪುಷ್ಪ ಎಲ್ಲಿ ಹೋದಳು ?

ವಿಮಲೆಯು ಗಾಬರಿಯಿಂದ "ವರದಾ! ಪುಷ್ಪ ಎಲ್ಲಿ" ಎಂದು ಕೇಳಿದಳು.

ವರದೆಯು "ಇಲ್ಲೇ ಇದ್ದಳಲ್ಲ" ಎಂದು ಹೇಳಿ ಹುಡುಕ ತೊಡಗಿದಳು.

ಶಂಕರನು ಬಂದು "ವಿಮಲಾ. ನಾನು ಹೋಗಿ ನಾಗವೇಣಿಯನ್ನು ಕರೆದುಕೊಂಡು ಬರುತ್ತೇನೆ" ಎಂದನು.

"ಮೊದಲೇ ಹೇಳಬಾರದಾಗಿದ್ದಿತೇ, ಶಂಕರ. ಅವಳು ಬರುತ್ತಾಳೆಂದು ಗೊತ್ತಿದ್ದರೆ ಸರಿಯಾಗಿ ಅಡಿಗೆ ಮಾಡಿಸುತ್ತಿದ್ದೆ"

"ಅದೇನೂ ಬೇಕಾಗಿಲ್ಲ. ಏನು ಮಾಡಿದ್ದರೆ ಅದೇ ಆಗುತ್ತದೆ" ಎಂದು ಹೇಳಿ ಹೋಗುತ್ತಿದ್ದವನು "ಮೊನ್ನೆ ನಾಗವೇಣಿ ಏನು ಹೇಳಿದಳು, ಗೊತ್ತೆ ?" ಎಂದನು.

"ಏನು ಹೇಳಿದಳು"

"ನಿಮಗಾಗಿ ನಾನು ನಿಮ್ಮನ್ನು ಮದುವೆ ಮಾಡಿಕೊಳ್ಳುತ್ತಿಲ್ಲ; ನಮ್ಮಕ್ಕನ ಜೊತೆಯಲ್ಲಿರಬಹುದಲ್ಲ ಎಂದು ನಿಮ್ಮನ್ನು ಮದುವೆ ಮಾಡಿಕೊಳ್ಳುತ್ತೇನೆ ಎಂದಳು"

ಶಂಕರನು ಆ ಮಾತು ಹೇಳಿ ನಗುತ್ತಾ ಹೊರಟು ಹೋದನು.

ವರದೆಯು ವಾಪ್ಸು ಬಂದು "ಅಕ್ಕಾ, ನಿನ್ನ ಗಂಡನೂ ಮಗಳೂ ಬೀದಿಯ ಜಗುಲಿಯಲ್ಲಿ ಮೂಲೆಯಲ್ಲಿ ಕುಳಿತು ಇಸ್ಪೀಟು ಆಡುತ್ತಿದ್ದಾರೆ" ಎಂದು ಹೇಳಿದಳು.

ವಿಮಲೆಯು ಅಲ್ಲಿಗೆ ಹೋದಳು. ಕಾಣದಂತೆ ಮೂಲೆಯಲ್ಲಿ ಇಬ್ಬರೂ ಕುಳಿತುಕೊಂಡಿದ್ದರು. ಅವರನ್ನೇ ನೋಡುತ್ತಾ ನಾಯಿಯು ಮಲಗಿದ್ದಿತು.

ಅವಳು "ಇಲ್ಲೇನೋ ಮಾಡುತ್ತಿದ್ದೀರಿ ?" ಎಂದು ಕೇಳಿದಳು.

ವೆಂಕರಾಯನು "ಬನ್ನಿ, ಬೇಜಾರಾಯಿತು. ಇಸ್ಪೀಟಾಡುತ್ತಿದ್ದೇವೆ" ಎಂದು ಹೇಳಿದನು.

ಪುಷ್ಪಳು ತಾಯಿಯ ಕಡೆಗೆನೋಡಿ " ಇಚ್ಪೀಟು !" ಎಂದಳು.

" ಪುಷ್ಪ ಇಸ್ಪೀಟಾಡಲು ಅಮ್ಮನನ್ನು ಕರೆದುಕೊಂಡು ಬರುತ್ತೀನೆಂದು ಹೇಳಿದಳು. ನಾನು ಅಮ್ಮನಿಲ್ಲ, ಎಲ್ಲಿಯೋ ಹೋಗಿದ್ದಾಳೆ. ನಾವಿಬ್ಬರೇ ಆಡೋಣ-ಎಂದು ಹೇಳಿ ಕೂರಿಸಿಕೊಂಡೆ "

" ಹೌದು. ನಾನು ಇರಲಿಲ್ಲ. ಹೊರಗಡೆ ಹೋಗಿದ್ದೆ "

" ನಟರಾಜನನ್ನು ನೋಡಲು ಹೋಗಿದ್ದೆ ಏನೋ ?"

" ಹೌದು. ಅವರನ್ನೇ ನೋಡಲು ಹೋಗಿದ್ದೆ "

" ಅವರು ಏನು ಹೇಳುತ್ತಾರೆ ?"

" ಹೇಳುವುದೇನು? ಅವರು ನಾಳೆಯ ದಿನ ಹೊರಟು ಹೋಗುತ್ತಾರೆ"

ಮಗುವು ತಂದೆಯ ತೊಡೆಯ ಮೇಲೆ ಕುಳಿತುಕೊಂಡಿದ್ದಳು. ಅವಳ ಕೈಯಲ್ಲಿ ಇಸ್ಪೀಟು ಎಲೆಗಳಿದ್ದವು.

"ನಿನಗೂ ಓಲ್ಗಾ ತೀರಕ್ಕೆ ಹೋಗಬೇಕೆಂದು ಆಸೆಯಾಗುವುದಿಲ್ಲವೇ ?"

" ಆಗದೇ ಏನು ? ಯಾರಿಗೆ ತಾನೇ ಆಗುವುದಿಲ್ಲ ?"

" ನಾನು ನಿನ್ನೊಡನೆ ಮಾತನಾಡಬೇಕೆಂದುಕೊಂಡು ಬಂದೆ. ಬಹಳ ಮಾತನಾಡಬೇಕಾಗಿದ್ದಿತು. ನೀನು ಇರಲಿಲ್ಲ. ಬೇಜಾರಾಯಿತು. ಪುಷ್ಪಳೊಡನೆ ಇಸ್ಪೀಟಾಡುತ್ತಾ ಕುಳಿತುಕೊಂಡೆ "

ಪುಷ್ಪಳು ತಪ್ಪುತಪ್ಪಾಗಿ ಎಲೆಗಳನ್ನು ಕಲಸುತ್ತಿದ್ದಳು. ಎಲೆಗಳು ತಪ್ಪಿಸಿಕೊಂಡು ಕೆಳಗೆ ಉದುರುತ್ತಿದ್ದವು. ಅವಳು ಆರಿಸುತ್ತಾ " ಇಚ್ಪೀಟೂ" ಎಂದಳು.

ವೆಂಕಟರಾಯನು " ಪುಷ್ಪಳಿಗೆ ನನ್ನನ್ನು ಕಂಡರೆ ಬಹಳ ಪ್ರೀತಿ. ಆದರೆ ನಾವಿಬ್ಬರೂ ಅಗಲಬೇಕಾಗಿ ಬರುತ್ತದೆಯೋ, ಏನೋ ?" ಎಂದನು.

" ಏನು, ಯಾಕೆ ಹೀಗೆ ಮಾತನಾಡುತ್ತಿದ್ದೀರಿ ? ನಿಮಗೆ ಏನಾಗಿದೆ?"

" ಏನೋ ನನಗೆ ಹಾಗೆ ತೋರು........"

ವೆಂಕಟರಾಯನು ಮುಂದೆ ಮಾತನಾಡದೇ ಅಲ್ಲಿಗೇ ನಿಲ್ಲಿಸಿದನು. ತಾಯಿ ತಂದೆಗಳು ವಿಷಯಾಂತರದಲ್ಲಿ ಆಸಕ್ತರಾಗಲು ಮಗುವು ನಾಯಿಯೊಡನೆ ಆಟವಾಡಲು ತೊಡಗಿತು.

ಆಡಿದ ಮಾತನ್ನು ಹಿಂದೆ ತೆಗೆದುಕೊಳ್ಳುವವನಂತೆ " ನಾನು ಹೇಳಿದ್ದಕ್ಕೆ ಹೆಚ್ಚು ಅರ್ಥವೇನೂ ಇಲ್ಲ. ಏನೋ ಹಾಗೆ ಹೇಳಿದೆ, ಅಷ್ಟೇ " ಎಂದನು.

" ಆ ಭಾವನೆ ನಿಮ್ಮ ಮನಸ್ಸಿಗೆ ಯಾಕೆ ಬಂದಿತು ?"

ಹೇಳಲು ಹೋಗುತ್ತಾ, ಸಂಕೋಚಪಡುತ್ತಾ ಅವನು " ನಾನು ಎಂದಾದರೂ ಏನಾದರೂ ಮಾಡಬೇಕಲ್ಲ. ಕೆಲವು ಸಲ ನನಗೆ........" ಎಂದು ಹೇಳಿ ಮುಂದಿನ ಪದವನ್ನು ಹುಡುಕುತ್ತಾ " ಬಹಳ ಬೇಸರವಾಗಿದೆ. ಒಂದು ಮಾತು ಹೇಳುತ್ತೇನೆ, ನೋಡು. ನೀನು ನಿನ್ನ ಕರ್ತವ್ಯವನ್ನು ಸರಿಯಾಗಿ ಮಾಡುತ್ತಿದ್ದೀ. ನೋಡಿದವರೆಲ್ಲರೂ ನಿನ್ನನ್ನು ಪ್ರಶಂಸೆ ಮಾಡುತ್ತಾರೆ. ಮಾಡಬೇಕಾದ್ದೇ. ಆದರೆ ನಾನು....ನಾನು ಸುಮ್ಮನೆ ಮಾತನಾಡುತ್ತಿದ್ದೇನೆ " ಎಂದನು.

ವಿಮಲೆಯು ವೆಂಕಟರಾಯನನ್ನು ಎರಡು ಮೂರು ವರ್ಷಗಳಿಂದಲೂ ನೋಡಿದ್ದಳು. ಆದರೆ ಈ ದಿನದಂತೆ ಅವನೆಂದೂ ಕಂಡು ಬರಲಿಲ್ಲ. ಅವನಲ್ಲಿ ಒಂದು ನೂತನ ಭಾವವು ಕಂಡು ಬರುತ್ತಿತ್ತು. ಆ ಭಾವವು ವಿಚಿತ್ರವಾಗಿದ್ದಿತು.

" ಹಾಗೆಲ್ಲಾ ನೀವು ನಿರಾಶೆ ಹೊಂದಬೇಕಾ........"

" ನಿರಾಶೆಯಾಗಬೇಕಾದುದು ನಿನಗೆ. ಒಂದು ವಿಧವಾಗಿ ನಾನು ಅದೃಷ್ಟವಂತ. ಎಷ್ಟೋ ಜನಗಳಿಗೆ ಇಲ್ಲದ ಭಾಗ್ಯಗಳು ನನಗಿವೆ. ನಿನ್ನಂತಹ ಹೆಂಡತಿ ಇದ್ದೀಯೆ. ಪುಷ್ಪಳಂತಹ ಮಗುವಿದೆ. ನಾನು ಕೆಲಸ ಮಾಡದೇ ನಿರುದ್ಯೋಗಿಯಾಗಿದ್ದರೂ ನನ್ನ ಹೆಂಡತಿ ಮಕ್ಕಳ ಸಂರಕ್ಷಣೆಗಾಗಲೀ ನನ್ನ ಊಟಕ್ಕಾಗಲೀ ಯೋಚನೆ ಮಾಡಬೇಕಾಗಿಲ್ಲ. ಆದರೆ ನಾನು ನಿನ್ನ ವಿಷಯದಲ್ಲಿ ಸರಿಯಾಗಿಲ್ಲ. ನಾನು ಈ ಬಾರಿ ಗದಗಿನಿಂದ ಬಂದಾಗಿನಿಂದಲೂ ಸರಿಯಾಗಿಲ್ಲ. ಯಾಕೆಂದರೆ........"

ವಿಮಲೆಯು ಬೆಚ್ಚಬೆರಗಾಗಿ ನೋಡುತ್ತಿದ್ದಳು.

ವೆಂಕಟರಾಯನು ಸ್ವಲ್ಪ ಹೊತ್ತು ತಡೆದು " ಯಾಕೆಂದರೆ........ ಒಂದು ಕಾಲದಲ್ಲಿ ನಾನು ನಿನಗೇನು ಬೇಕಾದರೂ ಮಾಡುವ ಸ್ಥಿತಿಯಲ್ಲಿದ್ದೆ. ಹಾಗೆ ಮಾಡಬೇಕೆಂದು ನನಗೆ ಆಸೆಯೂ ಇದ್ದಿತು. ನಿನ್ನ ಹುಟ್ಟಿದ

ಹಬ್ಬವಾಯಿತು–ಜ್ಞಾಪಕವಿದೆಯೇ, ವಿಮಲಾ. ಆ ದಿನ ನಾನು ಎಷ್ಟು ಉತ್ಸಾಹದಿಂದಿದ್ದೆ. ಹಬ್ಬಕ್ಕಾಗಿ ತಂದ ವಸ್ತ್ರಾಭೂಷಣಗಳನ್ನು ನೀನು ಧರಿಸಿದ್ದಾಗ ನನಗೆಷ್ಟು ಸಂತೋಷವಾಯಿತು, ಗೊತ್ತೇ. ಗಿಣಿ ಹಸರು ಬಣ್ಣದ ಸೀರೆಯನ್ನು ಉಟ್ಟು, ಗಿಣಿ ಮೂತಿ ಆಕಾರದ ಮಾವಿನ ಕಾಯಿ ಸರವನ್ನು ನೀನು ಧರಿಸಿದ್ದಾಗ ನನಗೆಷ್ಟು ಖುಷಿಯಾಗಿದ್ದಿತು, ಬಲ್ಲೆಯಾ ? ಹಾಗೆಯೇ ಸಂತೋಷವಾಗಿ, ಖುಷಿಯಾಗಿ ಈ ಜೀವನವನ್ನು ಕಳೆಯು ತ್ತೇನೆಂದುಕೊಂಡೆ........

" ಆದರೆ ಅದೆಲ್ಲಾ ಯಾರ ಅಧೀನ ? ಕಷ್ಟಗಳು ಯಾರನ್ನು ಕೇಳಿ ಬರುತ್ತವೆ ? ಕಷ್ಟಗಳು ಇಲ್ಲವೆಂಬ ಭಾವನೆಯುಂಟಾಗುವಂತೆ ಎಷ್ಟು ದಿನ ಬದುಕಲಾಗುತ್ತದೆ ? ವಿಮಲಾ. ನಾನು ನಿನಗೆ ತಕ್ಕ ಗಂಡನಲ್ಲ. ನಿನ್ನ ಕೊರಳಿಗೆ ಕಟ್ಟಿದ ಗುಂಡಿನಂತೆ ಇದ್ದೇನೆ. ಈ ಜೀವನವು ಹೀಗೆಯೇ ಆಗುವುದೇನೋ, ಯಾರು ಬಲ್ಲರು ?"

ಅವನು ಹೇಳಿದ ಮಾತುಗಳಿಂದ ವಿಮಲೆಗೆ ದುಃಖವಾಗಿ ಕೊರಳು ಕಟ್ಟಿಕೊಂಡು ಬಂದಿತು. ಅವಳು ಮಾತನಾಡದೇ ಹೋದಳು. ಕಷ್ಟದಿಂದ ಅರ್ಧ ಅರ್ಧವಾಗಿ " ಇಲ್ಲ. ಹಾಗಲ್ಲ........ನೀವು ಏನೇನೋ ಹೇಳುತ್ತಿ ದ್ದೀರಿ " ಎಂದಳು.

" ಇಲ್ಲ. ನಾನು ಹೇಳುವುದೇ ಸರಿ.

" ವಿಮಲಾ ! ನೀನು ದೇವತೆ. ಎಲ್ಲರೂ ಹಾಗೆಯೇ ಭಾವಿಸುತ್ತಾರೆ. ನಟರಾಜನೂ ಹಾಗೆಯೇ ಭಾವನೆ ಮಾಡುತ್ತಾನೆ. ಅವನು ವಿದ್ಯಾವಂತ. ಕೀರ್ತಿ ಶಾಲಿ. ಅಪಾರವಾದ ಧನವು ಅವನಿಗಿದೆ. ಅವನು ನಿನ್ನನ್ನು ಪ್ರೀತಿಸುತ್ತಾನೆ. ನೀನು ಅವನನ್ನು ಪ್ರೀತಿಸುತ್ತೀಯೆ. ನಾಳೆಯ ಬೆಳಗಾಗ ಅವನು ಸಹಸ್ರಾರು ಮೈಲಿಗಳು ಹೊರಟು ಹೋಗುತ್ತಾನೆಂದರೆ ನಿನ್ನ ಮನಸ್ಸಿಗೆ ಎಷ್ಟು ದುಃಖವಾಗುತ್ತದೆಂಬುದು ನನಗೆ ಗೊತ್ತಿಲ್ಲದೇ ಇಲ್ಲ. ನೀನು ಜೊತೆಯಲ್ಲಿ ಹೋಗಬೇಕೆಂದು ಅವನು ಅಪೇಕ್ಷೆ ಮಾಡುವುದಿಲ್ಲವೇ ? ಮಾಡುತ್ತಾನೆ. ಮಾಡದೇ ಹೇಗೆ ಸಾಧ್ಯ ? ನಿನ್ನನ್ನು ನೋಡಿದ ಪ್ರತಿ ಗಂಡಸೂ ನಿನಗಾಗಿ ಆಸೆಮಾಡುತ್ತಾನೆ.

" ವಿಮಲಾ ! ನಾನು ಪುಷ್ಪಕೊಡನೆ ಇಸ್ಪೀಟಾಡುತ್ತಾ ಕುಳಿತಿದ್ದೆ.

ಆದರೆ ನನ್ನ ಮನಸ್ಸು ಇಲ್ಲಿರಲಿಲ್ಲ. ನೀನು ಈ ದಿನ ನಟರಾಜನನ್ನೇ ನೋಡಲು ಹೋಗಿದ್ದೀ ಎಂದು ನನಗೆ ಗೊತ್ತಿತ್ತು. ಅವನು ನಿನಗೇನು ಹೇಳಿದನೆಂಬುದೂ ನನಗೆ ಗೊತ್ತು. ನೀನು ಅವನಿಗೇನು ಉತ್ತರ ಹೇಳಿದೆ ಎಂಬುದೂ ನನಗೆ ಗೊತ್ತು. ಅವನು "ವೆಂಕಟರಾಯನನ್ನು ನಿರಾಕರಿಸಿ ಬಂದುಬಿಡು" ಎಂದು ಹೇಳಿದ. ನೀನು ಆಗುವುದಿಲ್ಲವೆಂದೂ ಅದು ಭಾರತ ನಾರಿಯ ಆದರ್ಶವಲ್ಲವೆಂದೂ ಹೇಳಿದೆ-

"ವಿಮಲಾ. ನೀನು ಹೊರಟು ಹೋಗು. ಇನ್ನು ನಾನು ನಿನಗೆ ಆತಂಕವಾಗಿ, ಅಡ್ಡಿಯಾಗಿರಲು ಸಾಧ್ಯವಿಲ್ಲ. ನೀನು ಹೊರಟು ಹೋಗು. ಅವನೊಡನೆ ಸುಂದರವಾದ ಓಲ್ಗಾ ತೀರಕ್ಕೆ ಹೊರಟು ಹೋಗು........" ಎಂದು ಹೇಳಿ ವೆಂಕಟರಾಯನು ಮನೆಯೊಳಗೆ ಹೊರಟು ಹೋದನು.

ವಿಮಲೆಯು ಕರೆದರೂ ಅವನು ಹಿಂತಿರುಗಿ ನೋಡಲಿಲ್ಲ.

ಪುನಃ ಅವಳು ಗಂಡನನ್ನು ನೋಡಿದುದು ಊಟ ಮಾಡುವಾಗಲೇ! ಆಗ ಅವರಿಬ್ಬರೂ ಏನು ಮಾತನಾಡುವುದಕ್ಕೂ ಅವಕಾಶವಿರಲಿಲ್ಲ.

ಊಟ ಮಾಡಿಕೊಂಡು ಹೊರಗೆ ಬರುವ ವೇಳೆಗೆ ಹಜಾರದಲ್ಲಿ ದೊಡ್ಡ ದೊಂದು ಕಾರ್ಡುಬೋರ್ಡಿನ ಪೆಟ್ಟಿಗೆಯಿದ್ದಿತು. ಅದನ್ನು ಬಿಚ್ಚಿ ನೋಡಿ ದರು. ಅದರೊಳಗೆ ಕಂಚಿನ ದೊಡ್ಡ ನಟರಾಜ ಮೂರ್ತಿ ಇದ್ದಿತು.

ವಿಮಲೆಯು ಗಂಡನಿಗೆ ಮಾತ್ರ ಕೇಳುವಂತೆ "ಅವರು ನನ್ನನ್ನು ಬರಬೇಡವೆಂದು ಹೇಳಿದ್ದಾರೆ. ಈ ಅಭಿಜ್ಞಾನದ ಅರ್ಥವು ಅದೇ" ಎಂದು ಹೇಳಿದಳು.

## ೨೬

ಎರಡು ಎರಡೂವರೆ ವರ್ಷಗಳು ಕಳೆದುವು.

ಸಂಜೆ ಏಳುಗಂಟೆಯಾಗಿದ್ದಿತು. ಬೆಂಗಳೂರು ರೈಲ್ವೆ ಸ್ಟೇಷನ್ನಿನಲ್ಲಿ ಸ್ವಲ್ಪ ಗದ್ದಲವಾಗಿಯೇ ಇದ್ದಿತು. ಪೂನಾ ಗಾಡಿಯು ಬರುವ ವೇಳೆಗೆ ಗದ್ದಲವು ಹೆಚ್ಚಾಯಿತು. ಸುಮಾರು ಇಪ್ಪತ್ತೈದು ಇಪ್ಪತ್ತಾರು ವರ್ಷಗಳ ತರುಣಿಯು ಡಬ್ಬಿಗಳನ್ನು ನೋಡಿಕೊಂಡು ಮುಂದುವರೆಯುತ್ತಿದ್ದಳು. ಅವಳು ಹುಡುಕುತ್ತಿದ್ದುದು ಫಸ್ಟ್‌ಕ್ಲಾಸ್ ಗಾಡಿಯನ್ನು. ಆದರೂ ಆ ಜನ ಜಂಗುಳಿಯಲ್ಲಿ ದಾರಿ ಮಾಡಿಕೊಂಡು ಮುಂದೆ ಹೋಗಬೇಕಾದರೆ ಬಹಳ ಕಷ್ಟವಾಗುತ್ತಿತ್ತು.

ಕಡೆಗೆ ಆಕೆಯು ಫಸ್ಟ್‌ಕ್ಲಾಸ್ ಡಬ್ಬಿಯನ್ನು ಹತ್ತಿದಳು. ಹೋಗಿ ಅಲ್ಲಿ ಕುಳಿತಿದ್ದ ಒಬ್ಬನೇ ಪ್ರಯಾಣಿಕನನ್ನು ದಿಟ್ಟಿಸಿ ನೋಡಿದಳು.

ನಟರಾಜನು ಅವಳು ಬರುತ್ತಾಳೆಂದು ನಿರೀಕ್ಷಿಸಿರಲಿಲ್ಲ. ಮರುಕ್ಷಣದಲ್ಲಿಯೇ ಗುರ್ತಿಸಿ, "ವಿಮಲಾ! ಏನು ಆಕಾಶದಿಂದ ಇಳಿದವಳಂತೆ ಇಳಿದುಬಿಟ್ಟೆ" ಎಂದು ಕೇಳಿದನು.

" ಆಕಾಶದಿಂದ ಇಳಿದಂತೆ ಇಳಿದವರು ನೀವೋ, ನಾನೋ ?"

ಅದಿರಲಿ. ನಾನು ಈ ದಿನ ಬರುವುದು ನಿನಗೆ ಹೇಗೆ ಗೊತ್ತಾಯಿತು ? ನಾನು ಇದ್ದಕ್ಕಿದ್ದಂತೆಯೇ ನಿಮ್ಮ ಮನೆಗೆ ಬಂದು ನಿನ್ನ ದರ್ಶನವನ್ನು ತೆಗೆದುಕೊಳ್ಳಬೇಕೆಂದಿದ್ದೆ "

" ಓಹೋ ! ನಿಮಗೆ ಗೊತ್ತಿಲ್ಲವೇನು ? ಸುಪ್ರಸಿದ್ಧ ವಿದ್ವಾಂಸರೂ ಗ್ರಂಥಕರ್ತರೂ ಆದ ಶ್ರೀಯುತ ನಟರಾಜ್ ಈ ದಿನ ಸಂಜೆ ಬೆಂಗಳೂರಿಗೆ ಬರುತ್ತಾರೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದಿತು "

ಇವರು ಮಾತನಾಡುತ್ತಿರುವಷ್ಟರಲ್ಲಿಯೇ ಪತ್ರಿಕೋದ್ಯೋಗಿಗಳು ಬಂದು ನಟರಾಜನನ್ನು ಮುತ್ತಿಕೊಂಡರು. ಮಾತನಾಡಿದರು. ಫೋಟೋಗಳನ್ನು ತೆಗೆದುಕೊಂಡರು.

ನಟರಾಜನು ಬಂದವರೊಡನೆ ಯಥೋಚಿತವಾಗಿ ಮಾತುಕತೆಗಳನ್ನಾಡಿ ಬೀಳ್ಕೊಂಡು, ತನ್ನ ಸಾಮಾನು ಸರಂಜಾಮುಗಳನ್ನು ವಿಮಲೆಯು ಬಂದಿದ್ದ ಕಾರಿನಲ್ಲಿ ಕಳುಹಿಸಿ, ಅವಳೊಡನೆ ಟ್ಯಾಕ್ಸಿಯಲ್ಲಿ ಕುಳಿತುಕೊಂಡು " ವಿಮಲಾ ! ಬಹಳ ದಿನಗಳಾಯಿತು. ನಿನ್ನೊಡನೆ ವಿಪರೀತವಾಗಿ ಮಾತನಾಡಬೇಕು. ಎಲ್ಲಿಗೆ ಹೋಗೋಣ ? ಮನೆಯಲ್ಲಿ ಹೋಗುತ್ತಲೇ ಅಷ್ಟು ಮಾತನಾಡಲಾಗುವುದಿಲ್ಲ " ಎಂದನು.

ಅವಳು "ಕಬ್ಬನ್ ಪಾರ್ಕಿನಲ್ಲಿ ಕುಳಿತುಕೊಂಡು ಮಾತನಾಡೋಣ. ಆ ದಿನ ಅಲ್ಲಿ ಕುಳಿತು ನಿರಾಳವಾಗಿ ಮಾತನಾಡಿದಂತೆ ಒಂದು ದಿನ ಮಾತನಾಡಬೇಕೆಂದು ಎಷ್ಟೋ ದಿನಗಳಿಂದ ಆಸೆಯಾಗುತ್ತಿದೆ " ಎಂದಳು.

ಟ್ಯಾಕ್ಸಿಯು ಸೌತ್ ಪೆರೇಡಿಗೆ ಹೋಯಿತು. ಅಂದು ಕಾಫೀ ತೆಗೆದುಕೊಂಡ ಕಡೆಯೇ ಇಬ್ಬರೂ ಕಾಫಿಯನ್ನು ತೆಗೆದುಕೊಂಡು ಕಬ್ಬನ್ ಪಾರ್ಕಿಗೆ ಬಂದು ಕುಳಿತುಕೊಂಡರು.

ವಿಮಲೆಯು " ಈ ಬಾರಿ ನೀವು ಬಹಳ ಆರೋಗ್ಯವಾಗಿರುವಂತೆ ಕಂಡು ಬರುತ್ತೀರಿ " ಎಂದಳು.

ನಟರಾಜನು ನಗುತ್ತಾ " ಅದು ಹಾಗಿರಲಿ. ನೀನು ಎಷ್ಟೋ ಚೆನ್ನಾಗಿ ಕಂಡು ಬರುತ್ತಿದ್ದೀಯೆ !" ಎಂದನು.

" ಇಲ್ಲಿ ಕತ್ತಲು. ಒಬ್ಬರಿಗೊಬ್ಬರು ಕಾಣುವುದೇ ಇಲ್ಲ. ಮೋಸ ಮಾಡಲು ಹೋಗಿ ನೀವೇ ಮೋಸ ಹೋಗುತ್ತಿದ್ದೀರಿ "

" ವಿಮಲಾ. ನಾವಿಲ್ಲಿ ಕುಳಿತು ಮಾತನಾಡಿ ಎಷ್ಟು ದಿನಗಳಾದವು. ಬಲ್ಲೆಯಾ ? ಎರಡು ವರ್ಷ ಎಂಟು ತಿಂಗಳುಗಳ ಮೇಲಾದವು "

" ಈ ಎರಡೂವರೆ ವರ್ಷಗಳಲ್ಲಿ ನೀವು ಎಷ್ಟೊಂದು ಕೆಲಸ ಮಾಡಿದ್ದೀರಿ. ಎಷ್ಟು ಕೀರ್ತಿಯನ್ನು ಸಂಪಾದನೆ ಮಾಡಿದ್ದೀರಿ. ನೀವು ಕಳಿಸಿದ " ಓಲ್ಗಾ ನದೀ ತೀರದಲ್ಲಿ " ಎಂಬ ಪುಸ್ತಕ ಬಂದಿತು. ಓದಿದೆ. ಆ ಪುಸ್ತಕ ನನಗೇ ಸಮರ್ಪಣೆ ಮಾಡಿದ್ದೀರಿ. ಅದಕ್ಕಾಗಿ ನಿಮಗೆ ಅನಂತ ಧನ್ಯವಾದಗಳನ್ನು ಸಮರ್ಪಿಸಬೇಕಾಗಿದೆ "

" ಧನ್ಯವಾದಗಳನ್ನು ಸ್ವೀಕರಿಸಿದರೆ ಸಮರ್ಪಣೆ ಮಾಡಿದ ಖರಾಮತ್ತು ಹೊರಟು ಹೋಯಿತು "

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು.

ಅನಂತರ ವಿಮಲೆಯು " ಅವರು ಸತ್ತು ಹೋದರು " ಎಂದಳು.

" ವೆಂಕಟರಾಯನು ಸತ್ತು ಹೋದನೇ ? ಯಾವಾಗ ? ನನಗೇಕೆ ತಿಳಿಸಲಿಲ್ಲ "

" ಏನೋ ತಿಳಿದಲಿಲ್ಲ. ನೀವು ಇಲ್ಲಿಂದ ಹೋದ ಒಂದು ವರ್ಷದ ಮೇಲೆ ಸತ್ತು ಹೋದರು. ಹೈದರಾಬಾದಿನಲ್ಲಿ ಕಾಲವಾದರು. ಅವರು ಇಳಿದುಕೊಂಡಿದ್ದ ಹೋಟಲಿನಿಂದ ನಮಗೆ ಸಮಾಚಾರ ತಿಳಿಯಿತು.

" ಅವರಿಗೆ ನಮ್ಮ ಮನೆಯಲ್ಲಿರಲು ಇಷ್ಟವಿರಲಿಲ್ಲ. ಅವರಿಗೆ ಅಸಮಾಧಾನವಾಗಿದ್ದಿತು. ಅವರಾವಾಗಲೂ ಶಂಕರನಿಂದ ಸಾಲ ಕೇಳುತ್ತಿದ್ದರು. ಕಡೆಗೆ ಶಂಕರ ಅವರಿಗೆ ತಿಂಗಳಿಗಿಷ್ಟು ಕೊಡುವುದೆಂದು ನಿಗದಿ ಮಾಡಿಬಿಟ್ಟ. ಅದು ಅವರಿಗೆ ಮತ್ತಷ್ಟು ನೋವಾಯಿತು. ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತೇನೆಂದು ಸಹ ಹೇಳಿದರು. ಪುಣ್ಯ. ಹಾಗೆ ಮಾಡಿಕೊಳ್ಳಲಿಲ್ಲ. ಊರು ಬಿಟ್ಟು ಹೊರಟು ಹೋದರು.

" ಕಡೆಗೆ ಹೈದರಾಬಾದಿನ ಒಂದು ಹೋಟಲಿನಿಂದ ಅವರು ನನಗೂ ಪುಷ್ಪಳಿಗೂ ಒಂದು ಕಾಗದ ಬರೆದರು. ಊರು ಬಿಟ್ಟು ಹೋದ ನಂತರ ಅವರು ಬರೆದುದು ಅದೊಂದೇ ಕಾಗದ. "ರೇಸ್‌ದಲ್ಲಿ ಬಹಳ ಹಣ ಮಾಡಿ

ಬಿಟ್ಟೆ. ಇನ್ನು ಕೆಲವು ದಿನಗಳಲ್ಲಿಯೇ ಬಂದುಬಿಡುತ್ತೇನೆ. ನಾವು ಬೇರೇ ಹೋಗೋಣ. ನೀವು ಸಿದ್ಧವಾಗಿರಬೇಕೆ"ಂದು ಬರೆದರು. ಪುನಃ ಕಾಗದ ಬರದಿರಲು ನಾನು ಆ ಹೋಟಲು ಮ್ಯಾನೇಜರಿಗೆ ಅವರ ವಿಷಯ ವಿಚಾರಿಸಿ ಕಾಗದ ಬರೆದೆ. ಜವಾಬು ಬಂದಿತು. ಅವರ ಹಣವೆಲ್ಲಾ ರೇಸ್‌ನಲ್ಲಿ ಹೋಯಿತಂತೆ. ಅದಾದ ಮಾರನೆಯ ದಿನವೇ ಏನೋ ಕಾಯಿಲೆ ಬಂದಿತಂತೆ. ವಾರದ ದಿನ ನರಳುತ್ತಿದ್ದು ಸತ್ತುಹೋದರಂತೆ "

" ಅಂತೂ ಅದು ಬಹಳ ದುಃಖದ ಕತೆ, ವಿಮಲಾ "

" ಹೌದು. ನನಗೂ ಅದೇ ಎನ್ನಿಸುತ್ತದೆ "

ಐದು ನಿಮಿಷಗಳ ಕಾಲ ಇಬ್ಬರೂ ಸುಮ್ಮನಿದ್ದರು. ನಟರಾಜನು " ಮಿಕ್ಕವರ ವಿಷಯವೇನು ?" ಎಂದು ಕೇಳಿದನು.

" ಶಂಕರನಿಗೂ ನಾಗವೇಣಿಗೂ ಮದುವೆಯಾಯಿತು ಅವರಿಗೀಗ ಪುಟ್ಟದೊಂದು ಗಂಡುಮಗು "

" ವರದೆಗೆ ಮದುವೆಯಾಯಿತೇನು ?"

" ಆಯಿತು. ಅವಳ ಗಂಡ ಒಬ್ಬ ಇಂಜನಿಯರ್. ಅವಳೀಗ ಲಕ್ಕವಳ್ಳಿಯಲ್ಲಿದ್ದಾಳೆ "

" ಶೀಲೆಗೂ ಮದುವೆ ಮಾಡಿ ಅವಳನ್ನು ಹೊರಗಟ್ಟಿ ಬಿಟ್ಟಿರೋ ?"

" ಅವಳು ಹೊರಗೆ ಹೋಗುವುದಿಲ್ಲವೆನ್ನುತ್ತಾಳೆ. ಈಗ ಸಂಗೀತ ನರ್ತನಗಳ ಹುಚ್ಚು ಚೆನ್ನಾಗಿ ಹತ್ತಿದೆ. ಅವಳು ಸ್ವಲ್ಪ ನಿಮ್ಮ ಶಕುಂತಲೆಯ ಜಾತಿ "

" ನಿನ್ನ ಮಗಳು ?"

" ಅವಳೂ ಚಿಕ್ಕಮ್ಮನೊಡನೆ ನರ್ತವನ್ನು ಕಲಿಯುತ್ತಿದ್ದಾಳೆ. ನಮ್ಮ ವಾಸುವು ಈಗ ಮಂಕಡ್ ಆಗಲು ಪ್ರಯತ್ನ ಮಾಡುತ್ತಿಲ್ಲ. ಪುಣ್ಯ. ಈ ವರ್ಷ ಅವನಿಗೆ ಎಸ್. ಎಸ್. ಎಲ್. ಸಿ ಪಾಸಾಯಿತು "

ಎಷ್ಟೋ ಹೊತ್ತು ಅವರಿಬ್ಬರೂ ಅಲ್ಲಿ ಮಾತನಾಡುತ್ತಾ ಕುಳಿತಿದ್ದರು.

ಟ್ಯಾಕ್ಸಿಯಲ್ಲಿ ವಿಮಲೆಯ ಮನೆಯ ಕಡೆಗೆ ಹೋಗುತ್ತಾ ನಟರಾಜನು " ವಿಮಲಾ. ನೀನು ನನ್ನ ಜೊತೆಯಲ್ಲಿ ಬರಲುಈಗ ಏನೂ ಅಡ್ಡಿ ಇಲ್ಲವೋ "? ಎಂದು ಕೇಳಿದನು.

ವಿಮಲೆಯು ನಗುತ್ತಾ " ಈಗೆಲ್ಲಿಗೆ ನಿಮ್ಮ ಪ್ರವಾಸ ?" ಎಂದಳು.

" ನೀನು ಬರುವುದಾದರೆ ನಿನಗಾಗಿ ಕಾಶ್ಮೀರಕ್ಕೆ ಹೋಗೋಣ ವೆಂದಿದ್ದೇನೆ "

" ಕಾಶ್ಮೀರಕ್ಕೇ ಏಕೆ ? ನಿಮ್ಮೊಡನೆ ಎಲ್ಲಿಗೆ ಬೇಕಾದರೂ ಬರುತ್ತೇನೆ "